

# ವಿವೇಕಪ್ರಭ

ಜನವರಿ-2019 ಸಂಪುಟ 20 ಸಂಚಿಕೆ 01



## ಚಿಕಾಗೋ ಉಪನ್ಯಾಸಗಳು - ೧೨೫

### ಹಿನ್ನೆಲೆ



### ಚಿಕಾಗೋ ಭಾಷಣಗಳ ಮಹತ್ವ



### ಚಿಕಾಗೋ ಭಾಷಣ ನಂತರ

## ಚಿಕಾಗೋ ಉಪನ್ಯಾಸದಲ್ಲಿ ಸ್ವಾಮೀಜಿ ಪಠಿಸಿದ ಸ್ತೋತ್ರ

ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ।
ರುಚೀನಾಂ ವೈಚಿತ್ರ್ಯಾದೃಜುಕುಟಿಲನಾನಾಪಥಜುಷಾಂ
ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ।

'ಬೇರೆ ಬೇರೆ ಸ್ಥಳಗಳಲ್ಲಿ ಹುಟ್ಟುವ ಹಲವು ನದಿಗಳು ಕೊನೆಗೆ ಎಲ್ಲವೂ ಸಾಗರವನ್ನು ಸೇರುವಂತೆ, ಹೇ ಭಗವಂತನೇ, ಮಾನವರು ಅವರವರ ಸಂಸ್ಕಾರಗಳಿಗೆ ತಕ್ಕಂತೆ ಅನುಸರಿಸುವ, ನೇರವಾಗಿಯೋ ವಕ್ರವಾಗಿಯೋ ಇರುವ ಬೇರೆ ಬೇರೆ ದಾರಿಗಳೆಲ್ಲ ನಿನ್ನೆಡೆಗೆ ಕರೆದೊಯ್ಯುವುವು.' *(ಶಿವಮಹಿಮ್ನ ಸ್ತೋತ್ರ)*



## 'ವಿವೇಕಪ್ರಭ' ಪತ್ರಿಕೆಯ ಪೋಷಕರು

| | |
|---|---|
| ಸ್ವಾಮಿ ಗಭೀರಾತ್ಮಾನಂದಜಿ ಮಹರಾಜ್ | ಮೈಸೂರು |
| ಶ್ರೀಮತಿ ಶಾರದಾ ಜೆ. ಶೆಟ್ಟಿ | ಮಂಗಳೂರು |
| ಶ್ರೀ ಕೀರ್ತಿ ಶೆಟ್ಟಿ ಸಿ. ಎನ್. | ಚಳ್ಳಕೆರೆ |
| ಶ್ರೀ ಅರವಿಂದ ಬಾಲಸುಬ್ರಹ್ಮಣ್ಯಮ್ | ಬೆಂಗಳೂರು |
| ಶ್ರೀ ರಾವ್ ಜಿ. ಯು. | ಬೆಂಗಳೂರು |
| ಶ್ರೀ ಅಗಸಿಬಗಲವಾರು ಎಂ. ಹೆಚ್. | ಶಿವಮೊಗ್ಗ |
| ಶ್ರೀ ಸದಾಶಿವ ಭಟ್ ಎಸ್. | ಬೆಂಗಳೂರು |
| ಶ್ರೀಲಕ್ಷ್ಮೀನಾರಾಯಣ ವಿ. ಎಸ್. | ಬೆಂಗಳೂರು |
| ಕು. ಸರಸ್ವತಮ್ಮ ಎಂ. | ಬೆಂಗಳೂರು |
| ಶ್ರೀ ವಿವೇಕಾನಂದ ಎಂ. ಆರ್. | ಬೆಂಗಳೂರು |
| ಶ್ರೀ ರಾಘವೇಂದ್ರ ಐತಾಳ್ ಎಂ. | ಮಂಗಳೂರು |
| ಶ್ರೀ ರಂಗನಾಥ ಎನ್. | ಬೆಂಗಳೂರು |
| ಶ್ರೀಮತಿ ಮಾಚಮಾಡ ಪಾರ್ವತಿ | ಕೊಡಗು |
| ಶ್ರೀ ಅಪ್ಪಯ್ಯ | ಕೊಡಗು |
| ಶ್ರೀ ಕೃಷ್ಣಸ್ವಾಮಿ ಕೆ. ಎನ್. | ಬೆಂಗಳೂರು |
| ಶ್ರೀಮತಿ ವಸಂತಾ ಮಹೇಶ್ | ಯು. ಎಸ್. ಎ. |
| ಶ್ರೀಮತಿ ಸುಧಾ ವಿ. ಹುಡ್ಲಿ | ಬೆಂಗಳೂರು |
| ಶ್ರೀ ವಿಠ್ಠಲ ಶೆಟ್ಟಿ ಎಸ್. ಆರ್. | ಬೆಂಗಳೂರು |
| ಡಾ. ವಸಂತ ಮಾಧವ ಕೆ. ಜಿ. | ದಕ್ಷಿಣ ಕನ್ನಡ |
| ಶ್ರೀ ಸುರೇಶ್ ಜಿ. ಸಿ. | ಬೆಂಗಳೂರು |
| ಶ್ರೀ ಕೃಷ್ಣ ಚಕ್ರವರ್ತಿ | ಬೆಂಗಳೂರು |
| ಡಾ. ರಾಜಣ್ಣ ಜಿ. | ಬೆಂಗಳೂರು |
| ಬಿ. ವಿನಾಯಕ್ ಕಾಮತ್ | ಮೈಸೂರು |


**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಆತ್ಮಜ್ಞಾನಂದ*

**ಸಂಪಾದಕರು**
*ಸ್ವಾಮಿ ಜ್ಞಾನಯೋಗಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಡಾ. ಕೆ. ಎಲ್. ಪ್ರಸನ್ನಾಕ್ಷೀ*
*ಡಾ. ಎಚ್. ಪಾಂಡುರಂಗ ವಿಠಲ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

**ಮುಖಪುಟ:**
**ಆರ್ಟ್ ಇನ್‌ಸ್ಟಿಟ್ಯೂಟ್, ಚಿಕಾಗೋ**


**ಈ ಪತ್ರಿಕೆಯ ಧ್ಯೇಯ**

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ


E-mail: mysuru.vivekaprabha@rkmm.org
Website: www.vivekaprabha.net
ಫೋನ್ : 9481533505



**ಚಂದಾ ವಿವರ**

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

# ಪ್ರಾರ್ಥನೆ

ಮೋದೇರ್ ವಿವೇಕಾನಂದ ತುಮಿ ಗೋ - ವಿಶ್ವವಿವೇಕಾನಂದ ।

ಸ್ವದೇಶ್ ವಿದೇಶ್ ಉಜಲಿ ಉಠಿಛೇ ತೋಮಾರ್ ನವೀನ ತಂತ್ರ
ಆಕಾಶ್ ಬಾತಾಸ್ ಧ್ವನಿಯಾ ತುಲಿಛೇ ತೋಮಾರ್ ಮೋಹನ ಮಂತ್ರ
ನಂದಿತ ಧರಾ ಮಂದಿರ ಮಾಝೆ ಧರ್ಮೇರ ಸ್ರಕ್ ಗಂಧ ॥ ೧ ॥

ಭೂಧರೇ ಸಾಗರೇ ಗಹನೇ ಕಾನನೇ ಯಾಪಿಲೇ ಕೊತೊನಾ ನಿಶಿ
ತುಷಾರ ಹಿಮಾನಿ ಗಿರಿಕಂದರ ಭ್ರಮಿಲೇ ಕೊತೊನಾ ದಿಶಿ
ಅಂಕುರ ಪುನಃ ಶಂಕರ ಜ್ಞಾನ ಶಾಕ್ಯೇರ ತ್ಯಾಗಾನಂದ ॥ ೨ ॥

ಶಿಕಾಗೊ ಸಂಘೇ ಸಂಗೀತ ತವ ಶೀರ್ಷೇ ಉಠಿಲೊ ಭಾಸಿ
ಶುನಿಲೊ ವಿಶ್ವ ಶುನಿಲೊ ನಿಃಸ್ವ ಶುನಿಲೊ ಪ್ರಾಸಾದವಾಸೀ
ಸೃಜಿಲೇ ಶ್ರೀಮಠ ಕುಂಜಕುಟೀರ ತೀರ್ಥ ಮುಖಾರವಿಂದ ॥ ೩ ॥

(ನಮ್ಮ ವಿವೇಕಾನಂದನೆ, ನೀನು ವಿಶ್ವವ್ಯಾಪಿ ವಿವೇಕಾನಂದನಾಗಿರುವೆ!

ಸ್ವದೇಶ, ವಿದೇಶಗಳು ನಿನ್ನ ನವೀನ ವಿಚಾರಗಳಿಂದ ಬೆಳಗುತ್ತಿದೆ. ಆ ನಿನ್ನ ಮನಮೋಹಕವಾದ ಮಂತ್ರಧ್ವನಿಯನ್ನು ಆಕಾಶ, ವಾಯು ಗಳೂ ಕೂಡ ಪ್ರತಿಧ್ವನಿಸಿ ಮೆರೆಯುತ್ತಿವೆ. ಭೂಮಂಡಲವೆಂಬ ಮಂದಿರದಲ್ಲಿ ಧರ್ಮವೆಂಬ ಹೂಮಾಲೆಯ ಸುಗಂಧವು ಆನಂದ ನೀಡುತ್ತಿದೆ ॥ ೧ ॥

ಭೂಶಿರದಲ್ಲಿ, ಸಾಗರದಲ್ಲಿ, ಗಹನವಾದ ಕಾನನದಲ್ಲಿ ಅದೆಷ್ಟು ರಾತ್ರಿಗಳನ್ನು ನೀನು ಕಳೆದಿಲ್ಲ! ಹಿಮಾಚ್ಛಾದಿತವಾದ ಗಿರಿಕಂದರಗಳಲ್ಲಿ ಅದಿಷ್ಟು ದಿನ ನೀನು ಅಲೆದಾಡಿಲ್ಲ! ನಿನ್ನಲ್ಲಿ ಶ್ರೀಶಂಕರರ ಜ್ಞಾನ, ಬುದ್ಧನ ತ್ಯಾಗ-ಆನಂದಗಳು ಮತ್ತೆ ಅಂಕುರಗೊಂಡವು. ॥ ೨ ॥

ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ನಿನ್ನ ಅದ್ಭುತವಾದ ಭಾಷಣವು ಸಂಗೀತದಂತೆ ಆಪ್ಯಾಯಮಾನವಾಗಿ ಬೆಳಗಿ ಉದಯಿಸಿತು. ಇಡೀ ಜಗತ್ತೇ ಅದನ್ನು ಕೇಳಿತು, ಕೇಳಿ ಮೂಕವಿಸ್ಮಿತವಾಯಿತು. ಮನೆ-ಅರಮನೆಗಳಲ್ಲೂ ಅದು ಹರಡಿತು. ಅತ್ಯಂತ ಪವಿತ್ರವಾದ ಮಠವನ್ನು (ರಾಮಕೃಷ್ಣ ಸಂಘವನ್ನು) ಸ್ಥಾಪಿಸಿ,ಸಾಧಕರಿಗೆ ಆಶ್ರಯ ನೀಡಿದೆ. ಈ ತೀರ್ಥಕ್ಷೇತ್ರವನ್ನು ಸೃಷ್ಟಿಸಿದಾಗ ನಿನ್ನ ವದನಾರವಿಂದವು ಆನಂದದಿಂದ ಅರಳಿತು. ॥ ೩ ॥)

*— ಸ್ವಾಮಿ ಅಭೇದಾನಂದ*

## ಸೂಕ್ತಿಪ್ರಭ

# ಚಿಕಾಗೋ ಭಾಷಣದ ಸೂಕ್ತಿಗಳು

**ಪ**ರಧರ್ಮ ಸಹಿಷ್ಣುತೆಯಲ್ಲಿ ನಮಗೆ ನಂಬಿಕೆಯಿದೆ; ಅಷ್ಟೇ ಅಲ್ಲ, ಎಲ್ಲ ಧರ್ಮಗಳೂ ಸತ್ಯ ಎಂಬುದನ್ನು ನಾವು ಒಪ್ಪುತ್ತೇವೆ. ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿ, ಎಲ್ಲ ಧರ್ಮಗಳಲ್ಲಿ ಯಾರು ಯಾರು ಹಿಂಸೆಗೆ ಒಳಗಾದರೋ ಅವರಿಗೆಲ್ಲ ಆಶ್ರಯವನ್ನು ನೀಡಿದ ದೇಶಕ್ಕೆ ಸೇರಿದವನು ನಾನು ಎಂಬ ಹೆಮ್ಮೆ ನನ್ನದು.

**ಮು**ಕ್ತರಾಗಲು, ಪವಿತ್ರಾತ್ಮರಾಗಲು, ದೇವರನ್ನು ಸೇರಲು ಮತ್ತು ದೇವರನ್ನು ನೋಡಲು ಅನವರತ ಹೋರಾಡುವುದೇ ಹಿಂದುಗಳ ಸಿದ್ಧಾಂತದ ಗುರಿ. ಹೀಗೆ ದೇವರನ್ನು ಸೇರುವುದೇ, ದೇವರನ್ನು ನೋಡುವುದೇ, ಪರಂಧಾಮದಲ್ಲಿರುವ ಭಗವಂತನಂತೆ ಪವಿತ್ರಾತ್ಮರಾಗುವುದೇ ಹಿಂದೂಧರ್ಮ.

**ಜ**ಗತ್ತಿನಲ್ಲಿ ಎಂದಾದರೂ ಒಂದು ವಿಶ್ವಧರ್ಮ ಎನ್ನುವುದು ಅಸ್ತಿತ್ವಕ್ಕೆ ಬರುವುದಾದರೆ ಅದು ಕಾಲದೇಶಗಳ ಎಲ್ಲೆಯನ್ನು ಮೀರಿರುವಂಥದ್ದಾಗಿರಬೇಕು; ಅದು ತಾನು ಯಾವ ದೇವರನ್ನು ಕುರಿತು ಬೋಧಿಸುತ್ತದೆಯೋ ಆ ದೇವರಷ್ಟೇ ಅನಂತವಾಗಿರಬೇಕು; ಅಷ್ಟೇ ಅಲ್ಲ, ಸಂತರಿಗೆ ಹೇಗೋ ಹಾಗೆ ಪಾಪಿಗಳಿಗೂ ಅದು ದೊರಕುವಂತಿರಬೇಕು. ಅದರ ವ್ಯಾಪ್ತಿಯೆಲ್ಲವೂ, ಅದರ ದಿವ್ಯ ಶಕ್ತಿಯೆಲ್ಲವೂ ಮಾನವತೆ ತನ್ನ ನೈಜ, ದಿವ್ಯ ಸ್ವಭಾವವನ್ನು ಅರಿಯಲು ನೆರವಾಗುವಂತಿರಬೇಕು.

**ಬ್ರಾ**ಹ್ಮಣನ ಅದ್ಭುತ ಧೀಶಕ್ತಿ ಮತ್ತು ಆ ಮಹಾ ಆಚಾರ್ಯ ಬುದ್ಧನ ಹೃದಯವೈಶಾಲ್ಯ , ಆತ್ಮೌನ್ನತ್ಯ ಮತ್ತು ಅದ್ಭುತವಾದ ವಿಶ್ವಾನುಕಂಪೆ ಇವುಗಳನ್ನು ಸಂಗಮಗೊಳಿಸೋಣ.

**ಪ್ರ**ತಿಯೊಬ್ಬನೂ ಇತರರ ಮನೋಭಾವವನ್ನು ಗ್ರಹಿಸಬೇಕು. ಆದರೆ ತನ್ನ ವೈಯಕ್ತಿಕತೆಯನ್ನು ಉಳಿಸಿಕೊಂಡು ತನ್ನದೇ ಬೆಳವಣಿಗೆಯ ನಿಯಮಗಳಿಗೆ ಅನುಗುಣವಾಗಿ ಬೆಳೆಯಬೇಕು.

# ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್ (ರಿ).

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ.
ಎಂ.ಎಲ್.ಹಳ್ಳಿ, ಸಾಗರ ತಾಲೂಕು,
ಶಿವಮೊಗ್ಗ ಜಿಲ್ಲೆ. ಫೋನ್: 08183-296516
9449921950, 9449774451

ಶ್ರೀ ರಾಮಕೃಷ್ಣ ವಸತಿ ವಿದ್ಯಾಲಯ
ಐ.ಬಿ. ಹತ್ತಿರ, ಹೊಸನಗರ-577418
ಶಿವಮೊಗ್ಗ ಜಿಲ್ಲೆ ಫೋನ್: 08185-221915
9449921950

**(CBSE & State Syllabus)**

ಮಾನ್ಯ ವಿದ್ಯಾಕಾಂಕ್ಷಿಗಳೇ.

**"ನಮಗಿಂದು ಬೇಕಾಗಿರುವುದು ಕಬ್ಬಿಣದಂತಹ ಮಾಂಸಖಂಡಗಳು, ಉಕ್ಕಿನಂತಹ ನರಗಳು, ಯಾವುದಕ್ಕೂ ಜಗ್ಗದ ಪ್ರಚಂಡ ಇಚ್ಛಾಶಕ್ತಿಯಿರುವ ಸಿಂಹ ಸದೃಶ ವ್ಯಕ್ತಿಗಳು. ಇಂತಹ ವ್ಯಕ್ತಿಗಳ ನಿರ್ಮಾಣ, ಸಮಗ್ರ ಶಿಕ್ಷಣದಿಂದ ಮಾತ್ರ ಸಾಧ್ಯ"** ಎಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಶಿಕ್ಷಣದ ಧ್ಯೇಯವನ್ನಿಟ್ಟುಕೊಂಡು ಧೀಮಂತ ಸುಸಂಸ್ಕೃತ, ಶಿಸ್ತುಬದ್ಧವಾದ ಆಧ್ಯಾತ್ಮಿಕ ಮತ್ತು ವೈಜ್ಞಾನಿಕ ಶಿಕ್ಷಣವನ್ನು ನೀಡುತ್ತಿವೆ, ಮೇಲ್ಕಂಡ ಶ್ರೀ ರಾಮಕೃಷ್ಣ ವಿದ್ಯಾಸಂಸ್ಥೆಗಳು.



ನಿರ್ಮಲ ಹಾಗೂ ಪರಿಶುದ್ಧವಾದ ಪ್ರಾಕೃತಿಕ ವಾತಾವರಣದಲ್ಲಿ ನೆಲೆಗೊಂಡಿರುವ ಈ ವಸತಿ ಜ್ಞಾನದೇಗುಲಗಳು ಪರಿಪೂರ್ಣವಾದ ವ್ಯಾಸಂಗದ ವಿಕಾಸಕ್ಕೆ ನಾಂದಿ ಹಾಡುತ್ತಿವೆ. ಆಧ್ಯಾತ್ಮಿಕ, ನೈತಿಕ, ವೈಜ್ಞಾನಿಕ ಮತ್ತು ಕ್ರಿಯಾತ್ಮಕ ಶಿಕ್ಷಣವನ್ನು ಗುರುಕುಲ ಮಾದರಿಯಲ್ಲಿ ನೀಡುತ್ತಿರುವ ಈ ಸಂಸ್ಥೆಗಳು ಮಕ್ಕಳನ್ನು ಅಕ್ಕರೆಯಿಂದ, ಮಮತೆಯಿಂದ ಪೋಷಿಸಿ ಅವರ ಅಂತರಂಗದಲ್ಲಿರುವ ಪ್ರತಿಭೆಯನ್ನು ಚೈತನ್ಯಗೊಳಿಸಿ ಅವರ ಆತ್ಮಬಲವನ್ನು ದೃಢಪಡಿಸಿ ಉತ್ತಮ ವ್ಯಕ್ತಿತ್ವವುಳ್ಳ ಸತ್‌ಪ್ರಜೆಗಳನ್ನು ರೂಪಿಸುತ್ತಿವೆ. ದೇಶಾದ್ಯಂತ ಖ್ಯಾತಿ ಹೊಂದಿರುವ ಈ ಸಂಸ್ಥೆಗಳು ಮಕ್ಕಳನ್ನು ಸಾಧಕರನ್ನಾಗಿ ಪರಿವರ್ತಿಸಿ ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುಗೆಯಾಗಿ ನೀಡಿರುವುದು ಸ್ಮರಣೀಯವಾಗಿದೆ.

1) **ಸಂಸ್ಥೆಯಲ್ಲಿರುವ ಸೌಲಭ್ಯಗಳು:-** ವಿಶಾಲವಾದ ಕಟ್ಟಡಗಳು, ತರಬೇತಿ ಪಡೆದ ಪ್ರತಿಭಾವಂತ ಬೋಧಕ ವರ್ಗ, ವಿಶಾಲವಾದ ಆಟದ ಮೈದಾನ, ಕಂಪ್ಯೂಟರ್ ಲ್ಯಾಬ್, ಗ್ರಂಥಾಲಯದ ವ್ಯವಸ್ಥೆ, ಸ್ಮಾರ್ಟ್ ತರಗತಿ, ಅಬಾಕಸ್, ಉತ್ತಮ ಹಾಗೂ ಶುಚಿ ರುಚಿಯಾದ ಸಸ್ಯಹಾರಿ ಊಟದ ವ್ಯವಸ್ಥೆ ಇತ್ಯಾದಿ.

2) **ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು :-** ಪ್ರಾರ್ಥನೆ, ಧ್ಯಾನ, ಯೋಗ, ಕರಾಟೆ, ಸಂಗೀತ, ಆಟೋಟಗಳು, ಭರತನಾಟ್ಯ, ತಬಲ, ಚಿತ್ರಕಲೆ ಇತ್ಯಾದಿ.

3) **ಶಾಲೆಯಲ್ಲಿ ನಡೆಯುತ್ತಿರುವ ತರಗತಿಗಳು:-** ಎಲ್.ಕೆ.ಜಿ. ಯಿಂದ 10ನೇ ತರಗತಿಯವರೆಗೆ ಆಂಗ್ಲಮಾಧ್ಯಮ (ಸ್ಟೇಟ್ ಮತ್ತು ಸಿಬಿಎಸ್ ಸಿಲಬಸ್).

4) **ಸಂಸ್ಥೆಯ ಸಾಧನೆಗಳು:-**
* ಸ್ಪಷ್ಟವಾಗಿ ಓದಿ ಶುದ್ಧವಾಗಿ ಬರೆಯುವಂತೆ ಮಾಡುತ್ತಿರುವುದು.
* ಮೂಲಭೂತ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದು.
* ಗುರುಕುಲ ಮಾದರಿ ವಾತಾವರಣವನ್ನು ನಿರ್ಮಾಣಮಾಡಿ ಅಕ್ಕರೆಯಿಂದ ಪ್ರತಿಯೊಬ್ಬ ವಿದ್ಯಾರ್ಥಿಗಳ ಬಗ್ಗೆ ಕಾಳಜಿ ವಹಿಸಿರುವುದು.
* ಎಸ್.ಎಸ್.ಎಲ್.ಸಿ ಫಲಿತಾಂಶ ಪ್ರತಿವರ್ಷ ಬಹುತೇಕ ಶೇ.100 ಹೆಚ್ಚು ಡಿಸ್ಟಿಂಕ್ಷನ್ಸ್ ಹಾಗೂ ತಾಲ್ಲೂಕಿಗೆ ಪ್ರಥಮ ಸ್ಥಾನ ಪಡೆಯುತ್ತಿರುವುದು.
* ಕ್ರೀಡಾ ಕ್ಷೇತ್ರದಲ್ಲಿ ರಾಷ್ಟ್ರಮಟ್ಟದವರೆಗೂ ಪ್ರತಿನಿಧಿಸಿರುವುದು.
* ಪ್ರತಿಭಾ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೂ ದಾಖಲೆ ನಿರ್ಮಿಸಿರುವುದು.
* ಶಿಸ್ತು, ಸಂಸ್ಕೃತಿ, ಅಚ್ಚುಕಟ್ಟುತನ, ಜವಾಬ್ದಾರಿ ಈ ಬಗ್ಗೆ ತುಂಬಾ ಕಾಳಜಿ ವಹಿಸಿರುವುದು.

5) **ವಸತಿ ಶಾಲೆಗೆ ಪ್ರವೇಶ:-**
* 4ನೇ ತರಗತಿಯಿಂದ 9ನೇ ತರಗತಿಯವರೆಗೆ ಮಾತ್ರ.
* CBSE & State Syllabus
* ಹೆಣ್ಣು ಮತ್ತು ಗಂಡು ಮಕ್ಕಳಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯಿದೆ.

6) **ಪ್ರವೇಶ ಕ್ರಮ:-**
* ಪ್ರವೇಶ ಪರೀಕ್ಷೆ, ಸಂದರ್ಶನ ಆಧಾರದ ಮೇಲೆ.
* ಪ್ರವೇಶಕ್ಕೆ ಅರ್ಜಿ ಮತ್ತು ಪ್ರಾಸ್ಪೆಕ್ಟಸ್‌ಅನ್ನು ರೂ. 200 ಡಿ.ಡಿ. ಮೂಲಕ **ಶ್ರೀ ರಾಮಕೃಷ್ಣ ಗುರುಕುಲಾಶ್ರಮ ಟ್ರಸ್ಟ್** (ರಿ) ಹೆಸರಿಗೆ ಕಳುಹಿಸಿ ಪಡೆಯಬಹುದು.
* ಪ್ರವೇಶ ಪರೀಕ್ಷೆ : ಹೊಸನಗರದಲ್ಲಿ ದಿ. 28-04-2019 ರಂದು ಬೆಳಿಗ್ಗೆ 10ಕ್ಕೆ.
  : ಎಂ.ಎಲ್. ಹಳ್ಳಿ ಸಾಗರದಲ್ಲಿ ದಿ. 01-05-2019 ರಂದು ಬೆಳಿಗ್ಗೆ 10ಕ್ಕೆ

ಹೆಚ್ಚಿನ ಮಾಹಿತಿಗೆ ಶಾಲೆಯನ್ನು ಸಂಪರ್ಕಿಸಿ:
http://ramakrishnagurukulaashramasag.in/

ವ್ಯವಸ್ಥಾಪಕರು

ನಮ್ಮ CBSE ಶಾಲೆಗಳು : 1. Sri Ramakrishna Vivekananda Residential International School, M.L.Halli, Sagar
2. Sri Ramakrishna Residential School, Hosanagara.





# ಹೊಸ ವರ್ಷದ ಹಾರ್ದಿಕ ಅಭಿನಂದನೆಗಳು – 2019

ಆತ್ಮೀಯ ಬಂಧುಗಳೇ,

ಹೊಸ ವರ್ಷದ ಶುಭಾಶಯಗಳು. ಮತ್ತೊಮ್ಮೆ ನಾವು ಹೊಸ ವರ್ಷದ ಸ್ವಾಗತವನ್ನು ಸಂಭ್ರಮದಿಂದ ಮಾಡೋಣ. ಈ ವರ್ಷವು ನಮಗೆ, ನಮ್ಮ ದೇಶಕ್ಕೆ ಹಾಗೂ ನಮ್ಮ ಎಲ್ಲ ಜನರಿಗೆ ತರಬಹುದಾದ ಸುಖಸಮೃದ್ಧಿಗಳ ಆಶಾದಾಯಕ ಹೊಂಗಿರಣ ವನ್ನು ಕಾಣುತ್ತ, ನಮ್ಮ ಕರ್ತವ್ಯಗಳನ್ನು ಉತ್ಸಾಹದಿಂದ ಪಾಲಿಸುತ್ತ, ಜೀವನದ ಪಯಣದಲ್ಲಿ ಮತ್ತೊಂದು ಮೈಲಿಗಲ್ಲನ್ನು ಯಶಸ್ವಿಯಾಗಿ ದಾಟೋಣ ಎಂಬ ಸಂಕಲ್ಪದೊಂದಿಗೆ ಒಮ್ಮನಸ್ಸಿನಿಂದ ೨೦೧೯ನ್ನು ಬರಮಾಡಿಕೊಳ್ಳೋಣ. ನಮ್ಮ ವೈಯಕ್ತಿಕ ಪ್ರಗತಿ ಹಾಗೂ ಆನಂದವು ಎಷ್ಟು ಲೋಭನೀಯವೋ ಅಷ್ಟೇ ವಾಂಛನೀಯ ದೇಶ ಹಾಗೂ ಸಮಾಜದ ಪ್ರಗತಿ — 'ಸರ್ವೇ ಭವಂತು ಸುಖಿನಃ, ಸರ್ವೇ ಸಂತು ನಿರಾಮಯಾಃ, ಸರ್ವೇ ಭದ್ರಾಣಿ ಪಶ್ಯಂತು, ಮಾ ಕಶ್ಚಿದ್-ದುಃಖಭಾಗ್-ಭವೇತ್' — ಇದು ನಮ್ಮ ಪ್ರಾರ್ಥನೆಯಾಗಲಿ. ಎಲ್ಲರ ಸುಖದಲ್ಲಿ ನಮ್ಮ ಸುಖವನ್ನು ಕಾಣುವ ಉದಾರ-ನಿಃಸ್ವಾರ್ಥ ಮನೋಭಾವ ನಮ್ಮದಾಗಲಿ ಎಂದು ಹಾರೈಸುತ್ತ ನಿಮಗೆಲ್ಲರಿಗೂ ಭಗವಂತನ ಕೃಪೆ-ಆಶೀರ್ವಾದಗಳು ಲಭಿಸಲಿ ಎಂದು ಪ್ರಾರ್ಥಿಸುತ್ತೇವೆ. ಈ ಶುಭಹಾರೈಕೆಗಳೊಂದಿಗೆ 'ಚಿಕಾಗೋ ಉಪನ್ಯಾಸಗಳು – ೧೨೫' ಎಂಬ ಈ ವರ್ಷದ ವಿಶೇಷ ಸಂಚಿಕೆಯನ್ನು ನಿಮ್ಮ ಕೈಯಲ್ಲಿಡುತ್ತಿದ್ದೇವೆ. ಸ್ವಾಮಿ ವಿವೇಕಾನಂದರು ವಿಶ್ವವೇದಿಕೆಯಲ್ಲಿ ೧೮೯೩ರಲ್ಲಿ ಮೊಳಗಿದ ದಿವ್ಯವಾಣಿಯು ಇಂದು ವಿಶ್ವದಾದ್ಯಂತ ಅನುರಣಿಸುತ್ತಿದೆ. ಮತಾಂಧತೆಯ ಕರಾಳ ಶಕ್ತಿಯನ್ನು ಧ್ವಂಸ ಮಾಡಿ ವಿಶ್ವಶಾಂತಿ, ಸಾಮರಸ್ಯ , ಪರಸ್ಪರ ವಿಶ್ವಾಸ -ಗೌರವ, ಭಾವನೆಗಳ ಸ್ವೀಕಾರ ಮುಂತಾದ ಸಾರ್ವತ್ರಿಕ ಮೌಲ್ಯಗಳನ್ನು ಹೊಸ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕಾದ ಅಗತ್ಯ ವನ್ನು ಸ್ವಾಮೀಜಿ ಅಲ್ಲಿ ಸಾರಿದ್ದರು; ಇಂದಿಗೂ ಈ ಆಶಯಗಳು ಜಾಗತಿಕ ಮಟ್ಟದಲ್ಲಿ ಅತ್ಯಂತ ಪ್ರಸ್ತುತವಾಗಿವೆ; ಮಹತ್ವದ್ದಾಗಿವೆ. ಆ ಉಜ್ಜ್ವಲ ಭಾಷಣ ಮೊಳಗಿ ೧೨೫ ವರ್ಷಗಳೇ ಸಂದವು. ಆದರೂ ಸ್ವಾಮೀಜಿಯ ವಾಣಿ ಸಹೃದಯದರ ಹಾಗೂ ಪ್ರಜ್ಞಾ ವಂತರ ಹೃದಯ ಹಾಗೂ ನರನಾಡಿಗಳಲ್ಲಿ ಇಂದಿಗೂ ಮಿಡಿಯುತ್ತಿದೆ.

'ವಿವೇಕಪ್ರಭ' ಪತ್ರಿಕೆಯ ಮೂಲಕ ರಾಮಕೃಷ್ಣ-ವಿವೇಕಾನಂದರ ಸಮನ್ವಯ ವಾಣಿಯನ್ನು ಬಿತ್ತರಿಸುವಲ್ಲಿ ನಮ್ಮೊಂದಿಗೆ ಕೈಜೋಡಿಸಿರುವ ಎಲ್ಲ ಆಶ್ರಮಗಳಿಗೆ, ಸಂಸ್ಥೆಗಳಿಗೆ, ಸ್ವಯಂಸೇವಕರಿಗೆ, ಬಂಧುಮಿತ್ರರಿಗೆ, ಸಿಬ್ಬಂದಿ ವರ್ಗದವರಿಗೆ, ಜಾಹೀರಾತುದಾರರಿಗೆ, ಅಚ್ಚುಕಟ್ಟಾಗಿ ಮುದ್ರಿಸುತ್ತಿರುವ ಮುದ್ರಕರಿಗೆ, ಹಾಗೂ ಸಹಕಾರ ನೀಡುತ್ತಿರುವ ಸರಕಾರಿ ಇಲಾಖೆಗಳಿಗೆ, ಅಂಚೆಕಛೇರಿಯವರಿಗೆ ಪ್ರೀತಿಯ ಧನ್ಯವಾದಗಳು. ತಮ್ಮೆಲ್ಲರ ಸಹಕಾರವು ನಮ್ಮ ಈ ನೆಚ್ಚಿನ ಪತ್ರಿಕೆಯನ್ನು ಮನೆಮನೆಗೆ, ಮನಮನಕ್ಕೆ ಮುಟ್ಟಿಸುವಲ್ಲಿ ಎಂದೆಂದೂ ಇರಲಿ ಎಂದು ಆಶಿಸುತ್ತೇವೆ. ನಿಮ್ಮ ಬೆಂಬಲ ಹಾಗೂ ಪ್ರೋತ್ಸಾಹವು ನಮಗೆ ಹೊಸ ಹೊಸ ಮೈಲಿಗಲ್ಲುಗಳನ್ನು ದಾಟುವಂತೆ ಮಾಡಲಿ.

ಜೈ ರಾಮಕೃಷ್ಣ!

ಭಗವತ್ಸೇವೆಯಲ್ಲಿ ತಮ್ಮ
ಸ್ವಾಮಿ ಆತ್ಮಜ್ಞಾನಂದ
ವ್ಯವಸ್ಥಾಪಕ ಸಂಪಾದಕರು

ಸಂಪಾದಕೀಯ





# ಚಿಕಾಗೋ ಉಪನ್ಯಾಸ: ಒಂದು ನೋಟ

ನೂರ ಇಪ್ಪತ್ತೈದು ವರ್ಷಗಳ ಹಿಂದೆ ಚಿಕಾಗೋ ನಗರದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಮಾಡಿದ ಚಾರಿತ್ರಿಕ ಭಾಷಣ ಇಂದು ಮನೆ ಮಾತಾಗಿದೆ. ಸ್ವಾಗತಕ್ಕೆ ಅವರು ಉತ್ತರ ನೀಡುತ್ತ ''ಅಮೆರಿಕಾದ ನನ್ನ ಸಹೋದರಿಯರೇ ಹಾಗೂ ಸಹೋದರರೇ'' ಎಂದು ಸಂಬೋಧಿಸಿ ಆರಂಭಿಸಿದ ಭಾಷಣ ಕೇವಲ ಆಗಿನ ಸಭಿಕರನ್ನಷ್ಟೇ ಪುಳಕಗೊಳಿಸಿದ್ದಲ್ಲ; ಕಾಲ - ದೇಶ ಬದ್ಧವಾದ ಆ ಒಂದು ಸನ್ನಿವೇಶಕ್ಕಷ್ಟೇ ಸೀಮಿತವಾದದ್ದಲ್ಲ. ಅನಂತವೂ ನಿತ್ಯವೂ ಆದ ಸನಾತನ ತತ್ತ್ವಗಳ ಗರ್ಭದಿಂದ ಹೊರ ಹೊಮ್ಮಿದ ಒಂದು ದೈವೀಸಂಕಲ್ಪದ ಕಿರಣವದು; ಪ್ರಪಂಚದ ನಶ್ವರ ಬದುಕಿನ ಪ್ರವಾಹದಲ್ಲಿ ಅಸೀಮ ಕರುಣೆಯ ಬೆಳಕಾಗಿ ಹೊರಹೊಮ್ಮಿದ ದಿವ್ಯಸ್ರೋತವದು. ಸಮಸ್ತ ಭೂಮಂಡಲವನ್ನೇ ಆವರಿಸಿದ ಮಾಯಾ ಆವರಣದಲ್ಲಿ ನಿತ್ಯನೂತನ ಧ್ವನಿಯಿಂದ ಮೂಡಿಬಂದ ಶಬ್ದಬ್ರಹ್ಮನ ಸಿಂಹಗರ್ಜನೆಯಾಗಿತ್ತು ಅದು. ಅಮೆರಿಕದ ಚಿಕಾಗೋ ನಗರ, ಭಾರತದ ಹಿಂದೂಧರ್ಮದ ಪ್ರತಿನಿಧಿಯಾಗಿ ಸ್ವಾಮೀಜಿ, ಗೈರಿಕನೇ ಇಸವಿ, ವಿಶ್ವಧರ್ಮಸಮ್ಮೇಳನ — ಈ ವಿವರಗಳೆಲ್ಲ ತಾತ್ಕಾಲಿಕವಾಗಿ ಮೂಡಿಬಂದ ಪ್ರಪಂಚದ ಅಂಶಗಳು. ಆದರೆ ಅಲ್ಲಿ ಪ್ರಕಟಗೊಂಡ ಆ ದಿವ್ಯ ಸಂದೇಶ ಮಾತ್ರ ಇವೆಲ್ಲವನ್ನೂ ಮೀರಿದ ಸನಾತನ ಸತ್ಯದ ಆವಿರ್ಭಾವ; ಸ್ವಾಮಿ ವಿವೇಕಾನಂದರು ಅದನ್ನು ಸಾರಿದ ಪ್ರವಾದಿ; ದಿವ್ಯ ಸಂದೇಶವನ್ನು ಮೊಳಗಿದ ಮಹಾದ್ಭುತ ತೇಜಸ್ಸು.

## ದೈವೀ ಸಂಕಲ್ಪ - ಹಿನ್ನೆಲೆ

ಶ್ರೀರಾಮಕೃಷ್ಣರ ಮಹಾಸಮಾಧಿಯ ನಂತರ ಸ್ವಾಮಿ ವಿವೇಕಾನಂದರ ನೇತೃತ್ವದಲ್ಲಿ ಸಂನ್ಯಾಸಿಗಳ ತಂಡವೊಂದು ನಿರ್ಮಾಣಗೊಂಡು, ಅನವರತ ಸಾಧನೆ-ಭಜನೆಗಳಲ್ಲಿ ನಿರತವಾಗಿತ್ತು. ಆದರೂ ಆಗಾಗ ತೀವ್ರ ವೈರಾಗ್ಯ, ತಪಸ್ಸಿನ ತುಡಿತದಿಂದ ಒಬ್ಬರಲ್ಲ ಒಬ್ಬರು ಪರಿವ್ರಾಜಕರಾಗಿ ಅಲೆದಾಡುತ್ತ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತ ತಮ್ಮ ಗುರುದೇವನ ಪರಮಾದರ್ಶವಾದ ಸಂನ್ಯಾಸೀ ಜೀವನವನ್ನು ನಡೆಸುತ್ತಿದ್ದರು. ಸ್ವಾಮಿ ವಿವೇಕಾನಂದರು ಭಾರತದ ಉದ್ದಗಲಕ್ಕೂ ಸಂಚರಿಸಿ ನಗರ-ಗ್ರಾಮ, ಗುಡಿಸಲು, ಮಹಲು ಎಂಬ ಬೇಧವಿಲ್ಲದೆ ಭಾರತದ ಜನಸಾಮಾನ್ಯರ ಬದುಕನ್ನು ಅರ್ಥ ಮಾಡಿಕೊಳ್ಳುತ್ತಾ ಅಲೆದಾಡುತಿದ್ದರು. ಈ ಸಂದರ್ಭದಲ್ಲಿ ಎಲ್ಲಿಂದಲೋ ವಿಶ್ವಧರ್ಮ ಸಮ್ಮೇಳನದ ವಿಷಯ ಅವರ ಕಿವಿಗೂ ಬಿತ್ತು; ಅದರಲ್ಲಿ ಸ್ವಾಮೀಜಿಯವರೇ ಭಾರತವನ್ನು ಸಮರ್ಥವಾಗಿ ಪ್ರತಿನಿಧಿಸಬೇಕು ಎಂಬ ಒತ್ತಡವೂ ಸಮಾಜದ ಉನ್ನತ ಸ್ಥಾನಗಳಲ್ಲಿರುವ ವ್ಯಕ್ತಿಗಳಿಂದ ಕೇಳಿ ಬಂದಿತ್ತು. ಆದರೆ ಈ ಕುರಿತು ಸ್ವಾಮೀಜಿ ಇನ್ನೂ ನಿಶ್ಚಿತವಾಗಿ ಏನನ್ನೂ ಹೇಳುವಂತಿರಲಿಲ್ಲ; ಆ ಕುರಿತು ಆಲೋಚನೆಗಳು ಮಾತ್ರ ಅವರಲ್ಲಿ ಏಳುತ್ತಿದ್ದವು. ಹಲವು ಬಾರಿ ಅವರ ಆತಿಥೇಯರು, ವಿದ್ವಾಂಸರು, ಅಧಿಕಾರಿಗಳು ಹಾಗೂ ಸ್ನೇಹಿತರು ಸ್ವಾಮೀಜಿಯವರಲ್ಲಿ ಈ ಕುರಿತು ಪ್ರಸ್ತಾಪಿಸಿ ಚರ್ಚಿಸಿದರೂ, ಸ್ವಾಮೀಜಿ ಖಚಿತವಾಗಿ ಏನನ್ನೂ ಹೇಳದಿದ್ದುದು ಅವರಿಗೆ ವಿಸ್ಮಯವನ್ನುಂಟುಮಾಡಿತು. ಅದಕ್ಕೆ ಸ್ವಾಮೀಜಿಯವರ ಕಾರಣ ಬೇರೆಯೇ ಇತ್ತು. ಭಾರತದ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಅಧಃಪತನವಾಗಿ, ರಾಜಕೀಯವಾಗಿಯೂ ಪರಕೀಯರ ಆಳ್ವಿಕೆಯಿಂದ ತತ್ತರಿಸಿ ಹೋಗಿರುವಾಗ ದೇಶದ ಸಾಂಸ್ಕೃತಿಕ-ಆಧ್ಯಾತ್ಮಿಕ ಹಿರಿಮೆಯನ್ನು ವಿಶ್ವವೇದಿಕೆಯ ಮುಂದೆ ಪ್ರಸ್ತುತಪಡಿಸಲು ಇದು ಅತ್ಯಂತ ಯೋಗ್ಯವಾದ ಅವಕಾಶವೆಂಬುದು ಅವರ ಅಂತರಂಗಕ್ಕೂ ಗೋಚರವಾಗಿತ್ತು. ಆದರೆ ಇದು ದೈವೀ ಸಂಕಲ್ಪವಾಗಿದ್ದರೆ ಮಾತ್ರ ತಾನು ಮುಂದುವರಿಯಬೇಕು; ಅಲ್ಲಿಯತನಕ ಕಾಯುತ್ತೇನೆ ಎಂಬ ಮನೋಭಾವ ಹೊಂದಿದ್ದರು ಸ್ವಾಮೀಜಿ. ಈ ಸಂದರ್ಭದಲ್ಲೇ ಅವರಿಗೆ ಕನಸಿನಲ್ಲಿ ಶ್ರೀರಾಮಕೃಷ್ಣರು ಕಾಣಿಸಿಕೊಂಡು, ಸಮುದ್ರದ ಮೇಲೆ ತಾವು ನಡೆದು ಹೋಗುತ್ತಿರುವಂತೆಯೂ, ತಮ್ಮನ್ನು ಅನುಸರಿಸುವಂತೆಯೂ ಸೂಚನೆಯಿತ್ತರು. ಇದನ್ನು ದೃಢೀಕರಿಸುವುದಕ್ಕಾಗಿ ಸ್ವಾಮೀಜಿ, ಅಮೆರಿಕಾಗೆ ಹೋಗುವುದಕ್ಕೆ ಅನುಮತಿ ಕೋರಿ ಶ್ರೀಮಾತೆ ಶಾರದಾದೇವಿಯವರಿಗೆ ಪತ್ರಬರೆದರು. ಸ್ವಾಮೀಜಿ ಮುಂದೆ ಪ್ರಪಂಚಕ್ಕೆ ಗುರುದೇವರ ಸಂದೇಶವನ್ನು ಹರಡಲಿರುವುದನ್ನು ಅರಿತಿದ್ದ ಶ್ರೀಮಾತೆ, ತಮ್ಮ ಆಶೀರ್ವಾದಗಳೊಂದಿಗೆ ಅನುಮತಿ ನೀಡಿ ಉತ್ತರ ಬರೆದರು. ಅವರ ಪತ್ರ ಕೈಸೇರಿದ್ದೇ ತಡ, ಅಮೆರಿಕಾಗೆ ಹೋಗಲು ಸ್ವಾಮೀಜಿ ನಿರ್ಧರಿಸಿದರು.

ಅಮೆರಿಕಾಗೆ ಹೋಗುವ ವಿಷಯದಲ್ಲಿ ತಮ್ಮ ಇಚ್ಛೆಗಿಂತ ದೈವೀ ಸಂಕಲ್ಪವೇ ಮಹತ್ವದ್ದು ಎಂದು, ಅದಕ್ಕೆ ಮಣಿದರು ಸ್ವಾಮೀಜಿ. ಆ ಸಮಯದಲ್ಲಲೇ ಅವರು ದೈವೀ ಸಂದೇಶದ ವಾಹಕ ರಾಗಿ ರೂಪುಗೊಂಡಿದ್ದರು ಎಂಬುದನ್ನು ಇದು ಸೂಚಿಸುತ್ತದೆ. ಮುಂದೊಮ್ಮೆ, ತಮ್ಮ ಸೋದರ ಸಂನ್ಯಾಸಿಯೊಂದಿಗೆ ಮಾತ ನಾಡುತ್ತ ಸ್ವಾಮೀಜಿ, ''ಅಲ್ಲಿ ನಡೆಯುತ್ತಿರುವುದೆಲ್ಲಾ 'ಇದ' ಕ್ಕಾಗಿ'' ಎಂದು ತಮ್ಮ ಎದೆಯನ್ನು ಮುಟ್ಟಿ ತೋರಿಸಿದರಂತೆ. ಈ ವೇಳೆಗೆ ತಾವು ಅಮೆರಿಕಾಗೆ ಹೋಗುವುದು ದೈವೇಚ್ಛೆಯಂತೆಯೇ ಎಂದು ಅವರಿಗೆ ಖಚಿತವಾಗಿ ತಿಳಿದಿತ್ತು — ಎಂಬುದನ್ನು ಈ ಮಾತು ತಿಳಿಸಿಕೊಡುತ್ತದೆ.

## ರಾಜಕೀಯ ಹಿನ್ನೆಲೆ

ಶತಮಾನಗಳ ದಾಸ್ಯ ಭಾರತದ ರಾಜಕೀಯ ಕ್ಷೇತ್ರವನ್ನು ಆವರಿಸಿಕೊಂಡು, ೧೯ನೇ ಶತಮಾನದಲ್ಲಿ ನಮ್ಮ ದೇಶದಲ್ಲಿ ಎಲ್ಲೂ 'ಒಂದು ದೇಶ' ವೆಂಬ ರಾಷ್ಟ್ರೀಯ ಭಾವನೆ ಕಂಡುಬರು ತ್ತಿರಲಿಲ್ಲ. ಬ್ರಿಟಿಷರ ಆಡಳಿತದಲ್ಲಂತೂ ವ್ಯವಸ್ಥಿತವಾಗಿ ಈ ದೇಶದ ಸಾಂಸ್ಕೃತಿಕ, ರಾಜಕೀಯ ಅಸ್ಮಿತೆಯನ್ನು ನಾಶಮಾಡಲಾ ಗಿತ್ತು. ದಾಸ್ಯವನ್ನು ಒಪ್ಪಿಕೊಂಡ, ಬ್ರಿಟಿಷರ ದಬ್ಬಾಳಿಕೆಯನ್ನು ಸಹಿಸುತ್ತ ಒದಾಡುತ್ತಿದ್ದ ಹೊಸ ನೌಕರವರ್ಗ ಸೃಷ್ಟಿಯಾಗಿತ್ತು. ಪಾಶ್ಚಾತ್ಯ ಜನಜೀವನ, ವಿಚಾರಧಾರೆ, ಆಧುನಿಕ ನಾಸ್ತಿಕ ಭಾವ ಎಲ್ಲೆಡೆ ಹಬ್ಬಿಕೊಂಡಿತ್ತು. ಭಾರತದ ಸನಾತನ ತತ್ತ್ವ, ಸಾಂಸ್ಕೃತಿಕ ಹಿರಿಮೆ, ವೈವಿಧ್ಯಮಯವಾದ ಧಾರ್ಮಿಕ ಶ್ರೀಮಂತಿಕೆ, ಶಾಂತಿ- ಸಹಬಾಳ್ವೆ - ಸಾರ್ವತ್ರಿಕ ಭಾವಗಳ ಆದರ್ಶ ಇವೆಲ್ಲವೂ ಕಣ್ಮರೆ ಯಾಗಿ ಬಿಟ್ಟಿದ್ದವು. ಶ್ರೀರಾಮಕೃಷ್ಣರ ಮೂಲಕ ಹೊಸದಾಗಿ ಮೈದೋರಿಬಂದ ಈ ಭಾರತೀಯ ಆದರ್ಶದ ದಿವ್ಯ ಬೆಳಕು ಜಗತ್ತನ್ನೆಲ್ಲ ವ್ಯಾಪಿಸುವುದಕ್ಕಾಗಿ ಕಾಲ ಪಕ್ವವಾಗಿ ಬಂದಿತ್ತು. ಈ ದಿವ್ಯ ಸಂದೇಶದ ಪ್ರಭಾವ ಎಲ್ಲೆಡೆ ಹಬ್ಬಲು 'ವಿಶ್ವಧರ್ಮ ಸಮ್ಮೇಳನ' ಒಂದು ಅಭೂತಪೂರ್ವ ವೇದಿಕೆಯಾಗಿತ್ತು. ಹಿಂದೂ ಧರ್ಮದ ಸನಾತನ ಸಂದೇಶವನ್ನು ಸಾರಲು ಹೊರಟುನಿಂತ ಮಹಾತ್ಮ ಸಾಮಾನ್ಯ ವ್ಯಕ್ತಿಯಲ್ಲ; ಸಾಕ್ಷಾತ್ ಪರಶಿವನ ಅವ ತಾರವೇ ಆದ ಸ್ವಾಮಿ ವಿವೇಕಾನಂದರು!

ಬ್ರಿಟಿಷ್ ಆಧಿಪತ್ಯಕ್ಕೆ ವಿರುದ್ಧವಾಗಿ ನಡೆದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ ಹಲವು ಮಂದಿ ನಾಯಕರು, ಯುವಕರು, ಕ್ರಾಂತಿಕಾರಿಗಳು, ಚಿಂತಕರು ಒಂದಲ್ಲ ಒಂದು ರೀತಿಯಲ್ಲಿ ಸ್ವಾಮಿ ವಿವೇಕಾನಂದರ ಕಿಡಿನುಡಿಗಳಿಂದ ಪ್ರಭಾವಿತ ರಾಗಿದ್ದರು; ತ್ಯಾಗ, ಬಲಿದಾನಗಳ ಅಭೂತಪೂರ್ವ ಹೋರಾಟ ದಲ್ಲಿ ಸ್ವಾಮೀಜಿಯವರೇ ಅವರಿಗೆ ಆದರ್ಶವಾಗಿದ್ದರು.

## ಸಾಂಸ್ಕೃತಿಕ ಹಿನ್ನೆಲೆ

ಒಂದು ದೇಶದಲ್ಲಿ ಯಾವಾಗ ರಾಜಕೀಯ ದಾಸ್ಯವಿರುವುದೋ, ಆಗ ಅಲ್ಲಿನ ಎಲ್ಲ ಕ್ಷೇತ್ರಗಳಲ್ಲೂ ಅವನತಿಯುಂಟಾಗುವುದು. ಸಾಂಸ್ಕೃತಿಕ ಕ್ಷೇತ್ರಕ್ಕೂ ಇದು ಅನ್ವಯಿಸುವುದು. ಮೊಗಲರ, ಬ್ರಿಟಿಷರ ಆಳ್ವಿಕೆಯಿಂದಾಗಿ ಭಾರತೀಯ ಸಂಸ್ಕೃತಿ ಜರ್ಝರಿತ ವಾಗಿತ್ತು. ಧರ್ಮ, ಕಲೆ, ಜನಜೀವನ, ಸಾಹಿತ್ಯ ವ್ಯಾಪಾರ ವಿನಿ ಮಯ, ಸಾಮಾಜಿಕ ನಡವಳಿಕೆ, ವಿದ್ಯಾಭ್ಯಾಸ — ಈ ಎಲ್ಲ ಕ್ಷೇತ್ರಗಳಲ್ಲಿ ಉಂಟಾದ ಅವನತಿ ಸಾಂಸ್ಕೃತಿಕ ಭಾರತವನ್ನು ಇನ್ನಿಲ್ಲ ದಂತೆ ಘಾಸಿಗೊಳಿಸಿತ್ತು. ಭಾರತೀಯರೇ ಇಲ್ಲಿನ ಸಂಸ್ಕೃತಿಯನ್ನು ಹೀಗೆಳೆಯುವ ವಿಲಕ್ಷಣ ಪ್ರವೃತ್ತಿ ತಲೆದೋರಿತ್ತು. ಪಾಶ್ಚಾತ್ಯರ ಅಂಧಾನುಕರಣೆ, ಮತಾಂತರ, ದಾಸ್ಯ ಮನೋಭಾವ ಇವು ಎಲ್ಲೆಡೆ ತಾಂಡವವಾಡುತ್ತಿದ್ದವು. ಇಂಥ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯ ಸತ್ವವನ್ನು ಎತ್ತಿ ಹಿಡಿಯುವ, ಆ ಮೂಲಕ ಒಟ್ಟು ಭಾರತೀಯ ಜನಜೀವನದಲ್ಲಿ ಹೊಸ ಚೈತನ್ಯ ಹರಿದಾಡುವಂತೆ ಮಾಡುವ ಅಗತ್ಯ ತೀವ್ರವಾಗಿ ಇತ್ತು. ಆದರೆ ಅದನ್ನು ಮಾಡಬಲ್ಲ ಒಬ್ಬ ಪ್ರಭಾವಶಾಲೀ ವ್ಯಕ್ತಿ ಯಾರು? ಪ್ರಬಲರಾಗಿದ್ದ ಬ್ರಿಟಿಷರ ಪ್ರತಿರೋಧವನ್ನೆಲ್ಲಾ ಎದುರಿಸಿ ನಿಂತು ಮುನ್ನುಗ್ಗುವ ಮಹಾಶಕ್ತಿ ಅದಾವುದು? ಮಾನವಮಾತ್ರನಾದವನಿಗೆ ಅಸಾಧ್ಯವಾದ ಈ ಕಾರ್ಯ ದೈವೀಸಂಕಲ್ಪದಂತೆ ನಡೆದುದು ಇತಿಹಾಸದಲ್ಲಿನ ರೋಚಕ ವಾದ ಅಂಶ. ಭಾರತದ ಸಾಂಸ್ಕೃತಿಕ ಪುನರುತ್ಥಾನ ಕಾರ್ಯದಲ್ಲಿ ಮೊದಲಿಗೆ ಎದ್ದು ಕಾಣುವ ಹೆಸರು ಸ್ವಾಮಿ ವಿವೇಕಾನಂದರದು. ಚಿಕಾಗೋ ಭಾಷಣದಲ್ಲಿ ಅವರಿಗುಂಟಾದ ಅಭೂತಪೂರ್ವ ವಿಜ ಯದ ಪ್ರಭಾವ ಮುಂದೆ ಭಾರತದೆಲ್ಲೆಡೆ ಕಾಡ್ಗಿಚ್ಚಿನಂತೆ ಹರ ಡಿತು. ಅದರೊಂದಿಗೆ ಹೊಸ ಚೈತನ್ಯ, ಹೊಸ ಹುಟ್ಟು, ಹೊಸ ಸ್ಫೂರ್ತಿ ಎಲ್ಲೆಡೆ ಹರಿದಾಡಿದವು. 'ಭಾರತೀಯ'ವಾದದ್ದನ್ನೇ ಎಲ್ಲೆಡೆ ಕಂಡುಕೊಳ್ಳುವ ಉತ್ಸಾಹ ನಮ್ಮ ಜನರಲ್ಲಿ ಕಂಡುಬಂತು. 'ಕೊಲೊಂಬೊ ಇಂದ ಆಲ್ಮೋರಕೆ' ಕೃತಿಯಲ್ಲಿ ಸಂಗ್ರಹಿಸಲ್ಪಟ್ಟಿ ರುವ ಭಾಷಣಗಳು ಸ್ವಾಮೀಜಿ ಅಮೆರಿಕದಿಂದ ಮರಳಿ ಬಂದ ಮೇಲೆ ಭಾರತದುದ್ದಕ್ಕೂ ಸಂಚರಿಸಿ ನೀಡಿದ ಪ್ರವಚನಗಳು; ಅಲ್ಲಿ ಭಾರತೀಯ ಸಂಸ್ಕೃತಿಯ ಪುನರುತ್ಥಾನದ ಕುರುಹುಗಳನ್ನು ದಟ್ಟ ವಾಗಿ ಕಾಣಬಹುದು.

## ಸಾಮಾಜಿಕ ಹಿನ್ನೆಲೆ

ಭಾರತವೆಂದರೆ ಬಡವರ ದೇಶವೆಂದು ಆ ಸಮಯದಲ್ಲೇ ಪ್ರಪಂಚದಾದ್ಯಂತ ಪ್ರಚಾರವಾಗಿಬಿಟ್ಟಿತ್ತು. ಒಂದು ಕಾಲಕ್ಕೆ ಪ್ರಪಂಚದ ಎಲ್ಲೂ ಸಂಸ್ಕೃತಿಗಳೇ ಇಲ್ಲದಾಗ, ಅಲ್ಲೆಲ್ಲ ಜನರು ಆದಿವಾಸಿಗಳಂತೆ ಬದುಕುತ್ತಿದ್ದಾಗ ಭಾರತ ಸುಸಂಸ್ಕೃತವಾದ, ಸಮೃದ್ಧವಾದ ಹಾಗೂ ಅತ್ಯುಚ್ಚ ಧಾರ್ಮಿಕ-ಆಧ್ಯಾತ್ಮಿಕ ಮೌಲ್ಯ ಗಳನ್ನು ಕಂಡುಕೊಂಡಿದ್ದ ಒಂದು ದೇಶವಾಗಿತ್ತು. ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಇನ್ನೆಲ್ಲೂ ಇಲ್ಲದಷ್ಟು ವೈಭವ ಇಲ್ಲಿ ಕಂಡುಬಂದಿತ್ತು. ಆದರೆ ಇತಿಹಾಸದ ವ್ಯಂಗ್ಯ — ಹಿಮಾಲಯದೆತ್ತರ ಏರಿದ ಎಲ್ಲವೂ ಪಾತಾಳಕ್ಕೆ ಇಳಿಯಲೇಬೇಕು. ಒಳಜಗಳ, ಅಸೂಯೆ, ದ್ವೇಷ, ಅಸಮಾನತೆ, ಅಸ್ಪೃಶ್ಯತೆ ಮುಂತಾದ ಪಿಡುಗುಗಳಿಂದ ಸಮಾಜ ತತ್ತರಿಸಿತು. ಪರಕೀಯರ ದಾಳಿಗಳನ್ನು

ಎದುರಿಸಲಾಗದ ಶಕ್ತಿಹೀನತೆಯಿಂದಾಗಿ ದೇಶ ಸುಲಭವಾಗಿ ವಿದೇಶೀಯರಿಗೆ ಬಲಿಯಾಯಿತು. ಅದರ ಪರಿಣಾಮವೇ ರಾಜಕೀಯ ದಾಸ್ಯ, ಸಾಂಸ್ಕೃತಿಕ ಅಧಃಪತನ ಹಾಗೂ ಸಾಮಾಜಿಕ ಅವನತಿ.

ಸಾಮಾಜಿಕ ಪರಿಸ್ಥಿತಿಯನ್ನು ಸುಧಾರಿಸುವುದು ಸ್ವತಂತ್ರವಾಗಿ ಅಸಾಧ್ಯ; ರಾಜಕೀಯ, ಸಾಂಸ್ಕೃತಿಕ ಶಕ್ತಿಗಳಿಂದಲೇ ಅದನ್ನು ಮೇಲೆತ್ತಬೇಕು ಎಂಬ ಸತ್ಯ ಸ್ವಾಮೀಜಿಯವರಿಗೆ ಸ್ಪಷ್ಟವಾಗಿ ಮನವರಿಕೆಯಾಗಿತ್ತು. ರಾಜಕೀಯ ಪುನರುತ್ಥಾನದ ಕಾರ್ಯಕ್ಕಿಂತ, ಸಾಂಸ್ಕೃತಿಕ ಪುನರುತ್ಥಾನವೇ ಭಾರತದ ಏಳಿಗೆಗೆ ಅತ್ಯಂತ ಸಮರ್ಥವೂ, ದೂರಗಾಮಿಯೂ, ಶಾಶ್ವತವೂ ಆದ ಪರಿಹಾರವನ್ನು ನೀಡಬಲ್ಲದು ಎಂದು ಅವರು ಅರಿತಿದ್ದರು. ನಮ್ಮ ದೇಶವನ್ನು ಒಗ್ಗೂಡಿಸುವ ಶಕ್ತಿ ಇಲ್ಲಿನ ಸಂಸ್ಕೃತಿ; ಸಂಸ್ಕೃತಿಯ ಬೆನ್ನೆಲುಬು ಆಧ್ಯಾತ್ಮಿಕತೆ — ಆದ್ದರಿಂದ ಈ ದಿಕ್ಕಿನಿಂದಲೇ ಪುನರುತ್ಥಾನ ಕಾರ್ಯ ನಡೆಯಬೇಕು ಎಂದು ಸ್ವಾಮೀಜಿ ಮನಗಂಡಿದ್ದರು. ಇದಕ್ಕೆ ಪೂರಕವಾಗಿ ಚಿಕಾಗೋ ವಿಶ್ವಧರ್ಮಸಮ್ಮೇಳನ ಅತ್ಯಂತ ಸೂಕ್ತ ವೇದಿಕೆಯಾಗಿ ಒದಗಿ ಬಂತು. ಅಲ್ಲಿ ಭಾಗವಹಿಸಿದ ಸ್ವಾಮೀಜಿ ಹಿಂದೂಧರ್ಮವನ್ನು ಹೇಗೆ ಹೊಸದಿಕ್ಕಿನತ್ತ ಮುನ್ನಡೆಸಿದರು ಎಂಬುದು ಮುಂದೆ ನಡೆದ ಐತಿಹಾಸಿಕ ಘಟನೆಗಳಾಗಿವೆ.

### ಹೊಸ ಆದರ್ಶದ ಅಗತ್ಯ

ಭಾರತದ ದೃಷ್ಟಿಯಿಂದ ಎಲ್ಲ ರೀತಿಯ ಪುನರುತ್ಥಾನ, ಹೊಸ ಜಾಗೃತಿ, ಕಳೆದುಹೋದ ವೈಭವದ ಮರುಸ್ಥಾಪನೆ ಅತ್ಯಗತ್ಯವಾಗಿತ್ತು; ಅದನ್ನು ನಿಚ್ಚಳವಾಗಿ ಮನಗಂಡ ಸ್ವಾಮೀಜಿ ಚಿಕಾಗೋ ಸಮ್ಮೇಳನದ ಮೂಲಕ ಇದನ್ನು ಸಾಧಿಸಿದರು. ಆದರೆ ಸ್ವಾಮೀಜಿಯವರ ಅಭೂತಪೂರ್ವವಾದ ಕಾರ್ಯ ಕೇವಲ ಭಾರತಕ್ಕೆ ಮಾತ್ರ ಸೀಮಿತವಾದುದೆಂದರೆ ಅವರ ಮಹತ್ವವನ್ನು ಮಿತಿಗೊಳಿಸಿದಂತಾಗುವುದು. ಅವರ ವಿಶ್ವವಿಶಾಲ, ಸಾರ್ವತ್ರಿಕ ಹಾಗೂ ಸರ್ವವ್ಯಾಪಕ ವ್ಯಕ್ತಿತ್ವ ಎಲ್ಲ ಮಿತಿಯನ್ನೂ ಮೀರಿಹೋಗಿ, ಸಮಸ್ತ ಮನುಕುಲನ್ನೇ ತನ್ನ ತೆಕ್ಕೆಯಲ್ಲಿ ತಬ್ಬಿಕೊಳ್ಳುವಂತಹದಾಗಿತ್ತು. ಆದ್ದರಿಂದ ಭಾರತೀಯ, ಹಿಂದೂ ತತ್ತ್ವ, ಪರಂಪರೆ, ಆದರ್ಶ, ಸಂಸ್ಕೃತಿಗಳನ್ನು ಸಮಗ್ರವಾದ, ವಿಶ್ವವಿಶಾಲವಾದ, ಸರ್ವವ್ಯಾಪಕವಾದ ನೆಲೆಯಲ್ಲಿ ಕಂಡುಕೊಳ್ಳುವುದೇ ಅವರ ಹೊಸ ದೃಷ್ಟಿಕೋನ; ಅದನ್ನೇ ಅವರು ವಿಶ್ವಧರ್ಮಸಮ್ಮೇಳನದ ವೇದಿಕೆಯಲ್ಲಿ ಸಾರಿದರು. ವಿವಿಧ ದೇಶಗಳ, ಧರ್ಮಗಳ, ಸಂಸ್ಕೃತಿಗಳ ನಡುವಿನ ದ್ವೇಷ, ಪೈಪೋಟಿ, ಕಚ್ಚಾಟ, ಒಳಜಗಳಗಳ ಪ್ರಸ್ತಾಪದೊಂದಿಗೆ, ಇದಕ್ಕೆ ಪರಿಹಾರವಾಗಿ ವಿಶ್ವಭ್ರಾತೃತ್ವ, ಪರಸ್ಪರ ಸಹಕಾರ, ಶಾಂತಿ, ಸಹಬಾಳ್ವೆ — ಇವುಗಳನ್ನು ಕಲಿಯುವ ಅಗತ್ಯವನ್ನು ಸ್ವಾಮೀಜಿ ಪ್ರತಿಪಾದಿಸಿದರು. ಸ್ವಾಮೀಜಿ ಸಾರಿದ ಹೊಸ ಆದರ್ಶ ವಿಶ್ವಮಾನ್ಯವಾಯಿತು; ಧಾರ್ಮಿಕ ಸಂಕುಚಿತತೆಗಳ ನಡುವೆ ಜಗತ್ತನ್ನು ಒಂದಾಗಿ ಕಾಣುವ, ಬದುಕನ್ನು ಹಾರೈಸುವ ಈ ಸಂದೇಶಗಳ ಆಶಯವು ತಮ್ಮ ಗುರುದೇವ ಶ್ರೀರಾಮಕೃಷ್ಣರಿಂದಲೇ ಬಂದಿವೆ ಎಂದು ಅವರು ಎಲ್ಲೆಡೆ ಸಾರಿದರು. ಶ್ರೀರಾಮಕೃಷ್ಣರು ಕೂಡ ಸನಾತನ ಧರ್ಮದ, ಹಿಂದೂ ಪರಂಪರೆಯ ಶ್ರೇಷ್ಠ ಪ್ರತಿನಿಧಿಯೆಂಬಂತೆಯೇ ಅವರು ಎಲ್ಲೆಡೆ ಬಿಂಬಿಸಿದರು. ಸ್ವಾಮಿ ವಿವೇಕಾನಂದರ ಆಧ್ಯಾತ್ಮಿಕ ಹಿನ್ನೆಲೆ, ಆಧುನಿಕ ಮನೋಭಾವ, ಪ್ರಚಂಡ ಬುದ್ಧಿಶಕ್ತಿ, ಅಗಾಧ ಜ್ಞಾನ ಹಾಗೂ ಇತರರಿಗಾಗಿ ಮಿಡಿಯುವ ಹೃದಯ — ಈ ಎಲ್ಲ ಅಂಶಗಳು ಇಂಥ ನೂತನ ಸಂದೇಶವನ್ನು ಎಲ್ಲೆಡೆ ಪಸರಿಸುವಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ಕೆಲಸ ಮಾಡಿದವು.

### ಹಳೆಯ-ಹೊಸ ಪ್ರಪಂಚಗಳ ಸಮಾಗಮ

ಪ್ರಪಂಚಕ್ಕೆ ಹೊಸತನವೆಂಬುದು ಯಾವಾಗಲೂ ಅಗತ್ಯವಾಗಿ ಬೇಕಾಗಿರುವ ಒಂದು ಮನೋಭಾವ. ಸದಾ ಹೊಸತನ್ನು ಕಾಣುವ, ಹೊಸ ಬದುಕನ್ನು ಅರಸುವ ಮಾನವನ ಪ್ರವೃತ್ತಿ ಹಳೆಯದನ್ನು ಮರೆಯುತ್ತದೆ; ಅಂತೆಯೇ ಕಾಲಗರ್ಭದಲ್ಲಿ ಹಲವು ಸಂಗತಿಗಳು ಅಡಗಿಹೋಗುತ್ತವೆ. ಆದರೆ ಕಳೆದುಹೋದ ಸಂಗತಿಗಳಲ್ಲಿ ಕೆಲವು ಅತ್ಯಮೂಲ್ಯವಾದ, ಚಿರನೂತನವಾದ, ಶಾಶ್ವತವಾದ ಮೌಲ್ಯಗಳು, ತತ್ತ್ವ-ವಿಚಾರಗಳು ಅಡಗಿರುತ್ತವೆ ಎಂದು ಅರಿತುಕೊಳ್ಳುವವರು ಕೆಲವೇ ಮಂದಿ ಮಾತ್ರ. ಹಾಗೆ ಅರಿತು ಅದನ್ನು ಬದಲಾಗುತ್ತಿರುವ ಜಗತ್ತಿನಲ್ಲಿ ಉಳಿಸಿಕೊಳ್ಳಲು ಹೋರಾಡುವರು ಇನ್ನು ಕೆಲವರು. ಅವರಲ್ಲಿಯೂ ಅನೇಕರು ಸರಿಯಾದ ಸಲಕರಣೆ - ತಂತ್ರಗಳ ಅಭಾವದಿಂದ ವಿಫಲರಾಗುತ್ತಾರೆ. ಆದರೆ ಬದಲಾಗುತ್ತಿರುವ ಜಗತ್ತಿಗೆ ಯೋಗ್ಯವಾದ ರೀತಿಯಲ್ಲಿ ಹಳೆಯ ವಿಚಾರಗಳನ್ನು ಅಳವಡಿಸಿಕೊಳ್ಳುವ, ಹೊಸ ವಿಚಾರಗಳೊಂದಿಗೆ ಸಮನ್ವಯಗೊಳಿಸಿಕೊಳ್ಳುವ, ಹಾಗೂ ಸಮರ್ಥವಾದ ರೀತಿಯಲ್ಲಿ ಆ ಹಳೆಯ ವಿಚಾರಗಳನ್ನು ಸಮೃದ್ಧಗೊಳಿಸಿಕೊಳ್ಳುವ ಕಲೆ ಕೆಲವೇ ಮಂದಿಗೆ ಮಾತ್ರ ಸಾಧ್ಯವಾಗುವುದು. ವಿಶ್ವಧರ್ಮ ಸಮ್ಮೇಳನದ ವೇದಿಕೆಯಲ್ಲಿ ಸ್ವಾಮಿ ವಿವೇಕಾನಂದರು ಇದನ್ನು ಸಾಧಿಸಿದರು. ಆಧುನಿಕ ಪ್ರಪಂಚದಲ್ಲಿ ಹಿಂದೂಧರ್ಮ ತನ್ನೆಲ್ಲ ವೈಭವದೊಂದಿಗೆ ಸದೃಢ ಹೆಜ್ಜೆಗಳೊಂದಿಗೆ ತಲೆಯೆತ್ತಿ ನಿಲ್ಲುವಂತೆ ಅವರು ಮಾಡಿದರು; ಅದು ಇನ್ನಷ್ಟು ಉಜ್ಜ್ವಲವಾಗಿ ಬೆಳಗುವಂತೆ ಮಾಡಿದರು. ಇದರಿಂದ ಜಾಗತಿಕ ಧರ್ಮದ ಆದರ್ಶ, ಸಮನ್ವಯ-ಸ್ವೀಕಾರಗಳ ಸಾಧ್ಯತೆ, ಶಾಂತಿ-ಸೌಹಾರ್ದ-ಸಹಬಾಳ್ವೆ ಹಳೆಯ-ಹೊಸ ವಿಚಾರಗಳ ಸಮಾಗಮ ಸಾಧ್ಯವಾಯಿತು.

ಭಾರತದ ಸಂಸ್ಕೃತಿ, ಆಧ್ಯಾತ್ಮಿಕತೆ, ಧರ್ಮ — ಇವುಗಳ ಪುನರುತ್ಥಾನ ಕಾರ್ಯದಲ್ಲಿ ಸ್ವಾಮಿ ವಿವೇಕಾನಂದರು ಮಾಡಿದ ಚಿಕಾಗೋ ಭಾಷಣಗಳು ಅತ್ಯಂತ ಮಹತ್ವದ್ದೆಂದು ಪರಿಗಣಿಸಲಾಗುತ್ತಿವೆ. ೧೨೫ ವರ್ಷಗಳ ದೀರ್ಘ ಅವಧಿಯುದ್ದಕ್ಕೂ ಈ ಭಾಷಣ ಮಾಡಿದ ಪ್ರಭಾವ ಅಸಾಧಾರಣ ಹಾಗೂ ಅನನ್ಯ. ಈ ಸಂದರ್ಭದಲ್ಲಿ ಚಿಕಾಗೋ ಭಾಷಣಗಳ ಹಿನ್ನೆಲೆ, ಅವುಗಳ ಪ್ರಭಾವ, ಹಿರಿಮೆ ಹಾಗೂ ಮಹತ್ವವನ್ನು ಅರಿತುಕೊಳ್ಳುವ, ಅವುಗಳನ್ನು ನವಭಾರತದ ಯುವಕ-ಯುವತಿಯರೆಡೆಗೆ ಕೊಂಡೊಯ್ಯುವ ಕಾರ್ಯ ಅಗತ್ಯವಾಗಿ ನಡೆಯಬೇಕಾಗಿದೆ. 



# ಚಿಕಾಗೊ ಸರ್ವಧರ್ಮ ಸಮ್ಮೇಳನದ ಹಿನ್ನೆಲೆ

**ಸರಗೂರು ರಮೇಶ್**

*ಚಿಕಾಗೋದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಸಾಧಿಸಿದ ವಿಜಯವು ಭಾರತದ ಧಾರ್ಮಿಕ, ಆಧ್ಯಾತ್ಮಿಕ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಈ ಮಹತ್ವಪೂರ್ಣ ಘಟನೆಗೆ ಹಿನ್ನೆಲೆಯಾಗಿರುವ ಹಲವು ಸಂಗತಿಗಳನ್ನು ಕುರಿತು ವಿಶ್ಲೇಷಿಸಿರುವ ಲೇಖಕರು ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲೆಯಲ್ಲಿ ಆಂಗ್ಲ ಉಪನ್ಯಾಸಕರು; ಅವರು ಉತ್ತಮ ಭಾಷಣಗಾರರು ಹಾಗೂ ಬರಹಗಾರರಾಗಿದ್ದಾರೆ.*

ಸನಾತನ ಧರ್ಮ ಪ್ರಸಾರಕ್ಕಾಗಿ ಸ್ವಾಮಿ ವಿವೇಕಾನಂದರು ಅಮೆರಿಕಾದ ಚಿಕಾಗೋ ನಗರಕ್ಕೆ ತೆರಳಬೇಕಾದುದು ದೈವ ಸಂಕಲ್ಪವೇ ಆಗಿದ್ದರೂ, ಅದು ಸಂಭವಿಸಿದ ಹಿನ್ನೆಲೆಯ ಹಲವಾರು ಘಟನೆಗಳು ಅಚ್ಚರಿ ಮೂಡಿಸುತ್ತವೆ. ಅಂತಹ ಸಂದರ್ಭಗಳನ್ನು ಅವಲೋಕಿಸಿ ಮೆಲಕು ಹಾಕುವುದು ಪ್ರಸ್ತುತ ಔಚಿತ್ಯಪೂರ್ಣವೂ, ಅತ್ಯಗತ್ಯವೂ ಆಗಿದೆ. ಮದರಾಸಿನ ಭಕ್ತರು ಸ್ವಾಮೀಜಿಯವರ ದಾರ್ಶನಿಕ ಪ್ರತಿಭೆ ಮತ್ತು ವೈಚಾರಿಕತೆಯ ಓಘದ ಸೆಳವಿಗೆ ಆಗಲೇ ಸಿಲುಕಿ ಮಂತ್ರಮುಗ್ಧರಾಗಿದ್ದರು. ಅಂತರರಾಷ್ಟ್ರೀಯ ವೇದಿಕೆಯಲ್ಲಿ ಸ್ವಾಮೀಜಿ ಜಯ ಗಳಿಸುವುದರಲ್ಲಿ ಅವರಿಗೆ ಪರಮ ವಿಶ್ವಾಸವಿತ್ತು. ಆದ್ದರಿಂದ ತಮ್ಮ ಸಂಪೂರ್ಣ ಬೆಂಬಲವನ್ನು ವ್ಯಕ್ತಪಡಿಸಿ, ಸ್ವಾಮೀಜಿಯವರು ಆ ವಿಶ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಬೇಕೆಂದು ವಿನಮ್ರತೆಯಿಂದಲೇ ಒತ್ತಾಯಿಸುತ್ತಿದ್ದರು. ಅವರ ಖರ್ಚುವೆಚ್ಚಗಳಿಗಾಗಿ ವಂತಿಗೆ ಸಂಗ್ರಹಿಸಲು ಉತ್ಸಾಹದಿಂದ ಮುಂದಾದರು. ಆದರೆ ಸ್ವಾಮೀಜಿಯವರ ಮನಸ್ಸಿನಲ್ಲಿ ಈ ವಿಷಯದ ಬಗ್ಗೆ ಅನಿಶ್ಚಿತತೆಯಿತ್ತು; ಅದೇ ಭಗವಂತನ ಇಚ್ಛೆಯಾಗಿದೆಯೆಂದೂ, ಸಮಂಜಸವಾದ ತಮ್ಮ ಮುಂದಿನ ಹೆಜ್ಜೆಯೆಂದು ಅವರಿಗಿನ್ನೂ ಖಚಿತವಾದ ಮಾರ್ಗದರ್ಶನವಾಗಲೀ, ದಿವ್ಯದಿಕ್ಸೂಚಿಯಾಗಲೀ ಒದಗಿಬಂದಿರಲಿಲ್ಲ. ಹಾಗೆಂದರೆ ಸ್ವಾಮೀಜಿಯವರ ನಿರ್ಧಾರವನ್ನು ಧೃಢಗೊಳಿಸಿದ, ಹೊಯ್ದಾಡುತ್ತಿದ್ದ ಅವರ ಮನಸ್ಸಿಗೆ ಅನಂತ ವಿಶ್ವಾಸವನ್ನು ತುಂಬಿದ ಆಧ್ಯಾತ್ಮಿಕ ಸಂಗತಿಗಳಾವುವು ಎಂದು ನಾವು ಸ್ಪಷ್ಟವಾಗಿ ಅರಿಯಬೇಕಾಗಿದೆ. ಮೇಲ್ನೋಟಕ್ಕೆಯಲ್ಲಿ ಕಾಣಬರುವ ಚಾರಿತ್ರಿಕ ಅಂಶಗಳ ಹಿಂದಿನ ಅಲೌಕಿಕ ಹೇತುಗಳಿವು ಎಂದು ದಾಖಲಿತ ವಾಸ್ತವಾಂಶಗಳನ್ನು ಅಧ್ಯಯನ ಮಾಡಿದಾಗ ತಿಳಿದು ಬರುತ್ತದೆ.

ಶ್ರೀರಾಮಕೃಷ್ಣ ಪರಮಹಂಸರು ಯಾವುದಾದರೂ ಒಂದು ರೂಪದಲ್ಲಿ ತಮಗೆ ಮುಂದಿನ ಕಾರ್ಯಪ್ರಣಾಳಿಕೆಯನ್ನು ಸೂಚಿಸಿದರೆ ಸಂಶಯರಹಿತರಾಗಿ, ನಿಶ್ಚಿಂತರಾಗಿ ಪ್ರಯಾಣ ಹೊರಡಬಹುದು ಎಂದು ಸಾಮೀಜಿಯವರ ಒಳಮನಸ್ಸು ಕಾತರಿಸಿ ಹಂಬಲಿಸುತ್ತಿತ್ತು. ಅತಿ ಉತ್ಸಾಹ, ಉದ್ರೇಕಗಳಲ್ಲಿ ಎಡವಿಬಿಡಬಾರದೆಂಬ ವಿವೇಕಪೂರ್ಣ ಎಚ್ಚರಿಕೆಯೂ ಇತ್ತು. ಸರ್ವಾಂತರ್ಯಾಮಿಯೂ, ವಿಶ್ವಸಾರಥಿಯೂ ಆದ ಗುರುದೇವರಿಗೆ ತಮ್ಮ ಅಂತರಂಗ ಶಿಷ್ಯನ ಅಂತರಂಗ ತಿಳಿಯದಿರುತ್ತದೆಯೆ?

ಒಂದು ದಿನ ಸ್ವಾಮೀಜಿಯವರು ಅರೆನಿದ್ರೆಯಲ್ಲಿದ್ದಾರೆ. ಸಂದೇಹಕ್ಕೆ ಆಸ್ಪದವೇ ಇಲ್ಲದಂತೆ ಅವರ ಒಳಗಣ್ಣಿಗೆ ಶ್ರೀರಾಮಕೃಷ್ಣರ ಜ್ಯೋತಿರ್ಮಯ ರೂಪವು ಪ್ರತ್ಯಕ್ಷವಾಯಿತು. ಶ್ರೀರಾಮಕೃಷ್ಣರು ಸಮುದ್ರದ ದಡದಿಂದ ಅಲೆಗಳ ಮೇಲೆ ಸಾಗುತ್ತಾ ಮುನ್ನಡೆಯುತ್ತಿದ್ದಾರೆ; ತಮ್ಮನ್ನು ಅನುಸರಿಸಿ ಹಿಂಬಾಲಿಸುತ್ತಾ ಬರುವಂತೆ ಕೈಬೀಸಿ ಸ್ವಾಮೀಜಿಯವರನ್ನು ಕರೆಯುತ್ತಿದ್ದಾರೆ. ಈ ದರ್ಶನದ ಪರಿಣಾಮವಾಗಿ ಸ್ವಾಮೀಜಿಯವರ ಮೈ–ಮನಗಳಲ್ಲಿ ಅನಿರ್ವಚನೀಯ ಶಾಂತಿ, ಆನಂದಗಳು ತುಂಬಿ ನಿಂತವು. ಬಾಹ್ಯ

ಪ್ರಶ್ನೆಗೆ ಮರಳಿದರು. ದೈವದ ಆದೇಶವೇನು ಎಂಬುದು ಗುರು ದರ್ಶನದಿಂದ ಸುಸ್ಪಷ್ಟವಾಗಿ ಹೋಯಿತು. ಶ್ರೀರಾಮಕೃಷ್ಣರ ಸಂಕಲ್ಪ ಮತ್ತು ಜಗನ್ಮಾತೆಯ ಇಚ್ಛೆಯೂ ತಾವು ವಿಶ್ವಧರ್ಮ ಸಮ್ಮೇಳನದಲ್ಲಿ ಪಾಲ್ಗೊಳ್ಳಬೇಕು ಎಂಬುದೇ ಆಗಿದೆ ಎಂದು ಸ್ವಾಮೀಜಿಯವರಿಗೆ ಮನವರಿಕೆಯಾಗಿ ಹೋಯಿತು.

ಅಮೇರಿಕಾಗೆ ಪ್ರಯಾಣ ಆರಂಭಿಸುವ ಮುನ್ನ ಆದಿಶಕ್ತಿ ಸ್ವರೂಪರಾದ ಶ್ರೀಮಾತೆಯವರ ಆಶೀರ್ವಾದವನ್ನು ಪಡೆಯ ಬೇಕೆಂದು ಸ್ವಾಮೀಜಿಯವರ ಹೃದಯ ಹಸಿದು ಹಂಬಲಿಸಿತು. ಅನುಗ್ರಹ ಮತ್ತು ಅನುಮತಿಯನ್ನು ಬೇಡಿಕೊಂಡು ಶ್ರೀಮಾತೆ ಯವರಿಗೆ ಅವರು ಒಂದು ಪತ್ರ ಬರೆದರು. ಈ ಪತ್ರವನ್ನು ಓದಿದ ಶ್ರೀಮಾತೆಯವರು ಆನಂದಪಟ್ಟರು. ಆ ಸಮ್ಮೇಳನದಲ್ಲಿ ಅವರಿಗೆ ತಾವು ಕಂಡ ಒಂದು ದರ್ಶನದ ನೆನಪು ನಿಚ್ಚಳವಾಗಿ ಗೋಚರಿಸಿತು. ಆ ದರ್ಶನದ ಪೂರ್ಣ ಅರ್ಥವು ಮುಂದೆ ನಡೆಯಲಿರುವ ಘಟನೆಗಳ ವೈಶ್ವಿಕ ಆಯಾಮವನ್ನು ಅನಾವರಣ ಗೊಳಿಸಿತ್ತು. ಆ ದಿವ್ಯದರ್ಶನದ ಅನುಭವ ಶ್ರೀಮಾತೆಯವರಿ ಗಾಗಿದ್ದು ಶ್ರೀರಾಮಕೃಷ್ಣರ ಮಹಾಸಮಾಧಿಯ ನಂತರ. ಶ್ರೀಮಾತೆ ಯವರು ಕಂಡಿದ್ದೇನು? ಶ್ರೀರಾಮಕೃಷ್ಣರ ಮಹಾಸಮಾಧಿಯ ದಿವ್ಯಚೇತನವು ನರೇಂದ್ರನ ದೇಹವನ್ನು ಪ್ರವೇಶಿಸಿತು; ಅವರನ್ನು ತನ್ನ ದಿವ್ಯ ಕರ್ಮದ ಉಪಕರಣವನ್ನಾಗಿ ಪರಿವರ್ತಿಸಿತು; ನರೇಂ ದ್ರನ ಮೂಲಕ ಶ್ರೀರಾಮಕೃಷ್ಣರು ಜಗತ್ಕಲ್ಯಾಣಕಾರ್ಯದಲ್ಲಿ ತೊಡಗಿದಂತೆ ಭಾಸವಾಯಿತು. ಆದ್ದರಿಂದ ಸ್ವಾಮೀಜಿಯವರು ವಿದೇಶಕ್ಕೆ ಹೋಗುವುದು ಸ್ವಯಂ ಶ್ರೀರಾಮಕೃಷ್ಣರ ಇಚ್ಛೆಯೇ ಆಗಿದೆ ಎಂದು ಅರಿತ ಶ್ರೀಮಾತೆಯವರು, ತಮ್ಮ ಆಶೀರ್ವಾದ ಮತ್ತು ಅನುಮತಿಯನ್ನು ಪತ್ರಮುಖೇನ ಸ್ವಾಮೀಜಿಯವರಿಗೆ ಬರೆದು ಕಳಿಸಿದರು.

ಶ್ರೀರಾಮಕೃಷ್ಣರ ಆ ದರ್ಶನ, ಶ್ರೀಮಾತೆಯವರ ವಾತ್ಸಲ್ಯಾ ಮೃತ ತುಂಬಿದ ಈ ಪತ್ರ ಸ್ವಾಮೀಜಿಯವರ ಮನಸ್ಸಿನಲ್ಲಿ ಅಲ್ಲಲ್ಲಿ ಕವಿದಿದ್ದ ಕಾರ್ಮೋಡಗಳನ್ನು ಚೆದುರಿಸಿ ನಿರ್ನಾಮ ಮಾಡಿದವು. ಮುಂದಿನ ಕಾರ್ಯದ ಬಗ್ಗೆ ಸಂದೇಹ, ಜಿಜ್ಞಾಸೆಗಳು ಇನ್ನಿಲ್ಲದಂತೆ ದೂರವಾಗಿ ಹೋದವು. ಸ್ವಾಮೀಜಿ ಅನೇಕ ಶಿಷ್ಯರಿಗೆ ಹೇಳಿದರು: ''ನಾನೀಗ ಸಿದ್ಧನಾಗಿದ್ದೇನೆ. ಸ್ವಯಂ ಜಗನ್ಮಾತೆಯೇ ತನ್ನ ಅನು ಮತಿಯನ್ನು ನೀಡಿದ್ದಾಳೆ! ನಾವೆಲ್ಲ ತಡಮಾಡದೆ ಕಾರ್ಯಮಗ್ನ ರಾಗಬೇಕು.'' ಬಾಹ್ಯ ಭೌತಿಕ ಸಂದರ್ಭ ಸನ್ನಿವೇಶಗಳ ಹಿನ್ನೆಲೆ ಯಲ್ಲಿ ಪರಮಾತ್ಮನ ಇಚ್ಛೆಯು ಚಾಲಕಶಕ್ತಿಯಾಗಿ ಕಾರ್ಯನಿರತ ವಾಗಿರುತ್ತದೆ ಎಂಬ ಆಧ್ಯಾತ್ಮಿಕ ಸತ್ಯವನ್ನು ಮನಗಾಣಲು ಇವೆಲ್ಲಾ ವಿವರಗಳ ಅವಲೋಕನವು ಅಗತ್ಯವಾಯಿತು. ಸ್ವಾಮೀಜಿಯವ ರಲ್ಲಿ ನಂತರ ಯಾವ ಪ್ರಮಾಣದ ಅಚಲ ಆತ್ಮವಿಶ್ವಾಸವು ನೆಲೆ ಗೊಂಡಿತೆಂದರೆ, ಅವರೊಮ್ಮೆ ಸ್ವಾಮಿ ತುರೀಯಾನಂದರಿಗೆ ಹೇಳು ತ್ತಾರೆ: ''ಹರಿಭಾಯ್, **ಅಲ್ಲಿ** ಏನೇನು ನಡೆಯುತ್ತಿದೆಯೆಂದು ನೀನು ಕೇಳಿದ್ದೀಯೋ ಅವೆಲ್ಲಾ **ಇದಕ್ಕಾಗಿ** (ತಮ್ಮ ಎದೆಯನ್ನು ತಟ್ಟಿ ತೋರಿಸುತ್ತಾ). **ಇದಕ್ಕಾಗಿಯೇ** ಪ್ರತಿಯೊಂದು ವ್ಯವಸ್ಥೆಯೂ **ಅಲ್ಲಿ** (ಅಮೇರಿಕಾದಲ್ಲಿ) ಆಗುತ್ತಿದೆ!''

ಕಾಲಾತೀತವಾದ ಋತಚಿತ್ ಸಂಕಲ್ಪವನ್ನು ಅನುಸರಿಸಿ ಕಾಲ ದಲ್ಲಿರುವ ಜೀವನ ಮತ್ತು ಕರ್ಮಕ್ಷೇತ್ರಗಳಲ್ಲಿ ಘಟನೆಗಳು ಸಂಭ ವಿಸುತ್ತವೆ. ಆ ದೃಷ್ಟಿಯಂತೆ ಈ ಸೃಷ್ಟಿ. ಈಗ ಸ್ವಾಮೀಜಿ ತ್ಯಾಗ ಭೂಮಿಯಿಂದ ಭೋಗಭೂಮಿಯೆಡೆಗೆ ಹೊರಡಲು ಅನು ವಾಗುತ್ತಿದ್ದಾರೆ. ಅದಕ್ಕೆ ಒದಗಿಬಂದ ನಮ್ಮ ನೆಲದ ನೆರವಿನ ವಿವರ ಗಳನ್ನು ಸ್ವಲ್ಪ ಹೆಕ್ಕಿ ನೋಡೋಣ. ಹೈದರಾಬಾದಿನ ನವಾಬ ಖುರ್ಷಿದ್ ಝಾ, ರಾಜ್ಯದ ಪ್ರಧಾನಮಂತ್ರಿ ಸರ್ ಅಶ್ಮಾನ್ ಝಾ, ಉಪದಿವಾನನಾದ ನರೇಂದ್ರ ಕೃಷ್ಣ ಬಹಾದ್ದೂರ್, ಅಧಿ ಕಾರಿ ಶಿವರಾಜ್ ಬಹಾದ್ದೂರ್ ಮುಂತಾದವರು ಸ್ವಾಮೀಜಿಯವ ರನ್ನು ಭೇಟಿ ಮಾಡುವ ಸಂದರ್ಭ ಒದಗಿಬಂದಿತ್ತು. ಈ ಎಲ್ಲಾ ಗಣ್ಯರು ಸ್ವಾಮೀಜಿಯವರ ಧರ್ಮಪ್ರಸಾರ ಕಾರ್ಯದಲ್ಲಿ ಹೃತ್ಪೂರ್ವಕವಾದ ನೆರವು ನೀಡುವುದಾಗಿ ವಾಗ್ದಾನ ಮಾಡಿದರು. ಪ್ರಸಿದ್ಧ ಬ್ಯಾಂಕರ್‌ಗಳು ಸೇಠ್ ಮೋತಿಲಾಲ್‌ರ ನೇತೃತ್ವದಲ್ಲಿ ಸ್ವಾಮೀಜಿಯವರನ್ನು ಸಂದರ್ಶಿಸಿ, ಅವರ ದಾರಿಖರ್ಚನ್ನು ವಹಿಸಿ ಕೊಳ್ಳುವುದಾಗಿ ಆಶ್ವಾಸನೆ ನೀಡಿದರು.

ಹೈದರಾಬಾದಿನ ಜನರ ಮೇಲೆ ಅಪಾರ ಪ್ರಭಾವ ಬೀರಿದ ಸ್ವಾಮೀಜಿಯವರು ಮದ್ರಾಸಿಗೆ ಹೊರಟು ನಿಂತಾಗ ವಿದಾಯ ಹೇಳಲು ಸಹಸ್ರಾರು ಜನ ನೆರೆದಿದ್ದರು. ಮದರಾಸಿನ ಭಕ್ತರು, ಶಿಷ್ಯರ ಉತ್ಸಾಹವಂತೂ ವರ್ಣಿಸಲು ಅಸದಳವಾಗಿತ್ತು. ಅಳಸಿಂಗ ಪೆರುಮಾಳರ ಮುಂದಾಳತ್ವದಲ್ಲಿ ಶಿಷ್ಯರು ಸಮಿತಿಯೊಂದನ್ನು ರಚಿಸಿಕೊಂಡರು. ಅತ್ಯಂತ ಆನಂದದಿಂದ ಕಾರ್ಯ ಮಗ್ನರಾಗಿ ನಿಧಿ ಸಂಗ್ರಹಣೆ ಮಾಡುವುದರಲ್ಲಿ ನಿರತರಾದರು. ಮೈಸೂರು, ಬೆಂಗಳೂರು, ಹೈದರಾಬಾದ್, ರಾಮನಾಡುಗಳಂತಹ ಸ್ಥಳ ಗಳಿಗೂ ಹೋಗಿ, ಸಾಕಷ್ಟು ಜನರನ್ನೂ, ಶಿಷ್ಯರನ್ನೂ ಸಂಪರ್ಕಿಸಿ ವಂತಿಗೆ ಸಂಗ್ರಹಿಸಿದರು. ಇವರೆಲ್ಲರ ಅಮಿತ ಉತ್ಸಾಹಕ್ಕೆ ಕಾರಣ ಸ್ವಾಮೀಜಿಯವರು ಅವರಿಗೆಲ್ಲಾ ನೀಡಿದ್ದ ಸಂದರ್ಭೋಚಿತ ಸಲಹೆ. ಸ್ವಾಮೀಜಿ ಸೂಚಿಸಿ ಹೇಳಿದ ಮಾತಿದು: ''ನಾನು ಪಾಶ್ಚಾತ್ಯ ರಾಷ್ಟ್ರಗಳಿಗೆ ಹೋಗಬೇಕೆಂಬುದು ಜಗನ್ಮಾತೆಯ ಇಚ್ಛೆಯೇ ಆಗಿ ದ್ದರೆ, ಜನರಿಂದಲೇ ಹಣ ಬರುವಂತಾಗಲಿ. ಏಕೆಂದರೆ ನಾನು ಅಲ್ಲಿಗೆ ಹೋಗುತ್ತಿರುವುದು ಬಡವರಿಗಾಗಿ ಮತ್ತು ಜನಸಾಮಾನ್ಯ ರಿಗಾಗಿ.'' ಮಧ್ಯಮವರ್ಗದ ಜನರು ಸಾಕಷ್ಟು ಧನಸಹಾಯ ಮಾಡಿದರು.

ರಾಮನಾಡಿನ ದೊರೆ, ಮೈಸೂರಿನ ಮಹಾರಾಜರು, ಬೆಂಗ ಳೂರಿನ ನಂಜುಂಡರಾವ್, ಮದರಾಸಿನ ಮನ್ಮಥಬಾಬು ಮತ್ತು ಸುಬ್ರಹ್ಮಣ್ಯ ಅಯ್ಯರ್ ಮುಂತಾದವರು ಉದಾರವಾಗಿ ವಂತಿಗೆ ನೀಡಿ ಸಹಕರಿಸಿದರು. ಇದೆಲ್ಲದರ ಜೊತೆಗೆ ಅಮೇರಿಕಾಗೆ ಹೋದಾಗ ಸರ್ವಧರ್ಮ ಸಮ್ಮೇಳನದಲ್ಲಿ ಪಾಲ್ಗೊಳ್ಳಲು ಸ್ವಾಮೀಜಿಯವರಿಗೆ ಒಂದು ಪರಿಚಯ ಪತ್ರದ ಅಗತ್ಯವಿತ್ತು. ಅದಕ್ಕಾಗಿ ಅವರು


ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮೀಜಿ

ಪ್ರಸಿದ್ಧ ಸಂಸ್ಥೆಯ ಥಿಯೊಸಾಫಿಕಲ್ ಸೊಸೈಟಿಯ ಅಧ್ಯಕ್ಷ ಕರ್ನಲ್ ಓಲ್ಕಾಟ್‌ರನ್ನು ಭೇಟಿಮಾಡಿದರು. ಆದರೆ ಅವರು ತಮ್ಮ ಸಂಸ್ಥೆಗೆ ಸ್ವಾಮೀಜಿ ಸೇರಿಕೊಂಡರೆ ಮಾತ್ರ ಏನಾದರೂ ನೆರವು ನೀಡಬಹುದೆಂಬ ಷರತ್ತನ್ನು ಹಾಕಿಬಿಟ್ಟರು. ಸ್ವಾಮೀಜಿಯವರಿಗೆ ತಾತ್ತ್ವಿಕ ಭಿನ್ನಾಭಿಪ್ರಾಯವಿದ್ದುದರಿಂದ ಥಿಯೊಸಾಫಿಕಲ್ ಸೊಸೈಟಿ ಸೇರುವುದು ಸಾಧ್ಯವಿಲ್ಲ ಎಂದು ತಿಳಿಸಿದರು. ಸಂಸ್ಥೆಯ ಅಧ್ಯಕ್ಷರೂ ಕೂಡ ಅತ್ಯಂತ ಸಂಕುಚಿತ ಮನಸ್ಸಿನಿಂದ ಸ್ವಾಮೀಜಿಯವರಿಗೆ ಯಾವುದೇ ರೀತಿಯ ನೆರವು ನೀಡಲು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿಬಿಟ್ಟರು. ಸ್ವಾಮೀಜಿಯವರು ಎದೆಗುಂದಲೂ ಇಲ್ಲ, ನಿರಾಶರಾಗಲೂ ಇಲ್ಲ. ಇಷ್ಟೆಲ್ಲಾ ಸಂಭ್ರಮದಿಂದ ಸಿದ್ಧತೆಗಳು ಮದ್ರಾಸಿನಲ್ಲಿ ನಡೆಯುತ್ತಿದ್ದಾಗ, ರಾಜಸ್ಥಾನದ ಖೇತ್ರಿಯ ದೊರೆ ಅಜಿತ್ ಸಿಂಗ್, ಸ್ವಾಮೀಜಿಯವರು ತನ್ನ ಅರಮನೆಗೆ ಭೇಟಿ ನೀಡಲೇಬೇಕೆಂದು ಆತ್ಮೀಯವಾಗಿ ಆಮಂತ್ರಿಸಿದನು. ಈ ಕಾರ್ಯಕ್ಕಾಗಿ ತನ್ನ ಆಪ್ತಕಾರ್ಯದರ್ಶಿಯಾದ ಜಗಮೋಹನ್ ಎಂಬಾತನನ್ನು ಖೇತ್ರಿಯಿಂದ ಮದರಾಸಿಗೆ ಕಳುಹಿಸಿದ್ದನು. ಎರಡು ವರ್ಷಗಳ ಹಿಂದೆ ಸ್ವಾಮೀಜಿಯವರು ಖೇತ್ರಿಗೆ ಹೋಗಿದ್ದಾಗ, ತನಗೆ ಪುತ್ರ ಸಂತಾನ ಪ್ರಾಪ್ತವಾಗುವಂತೆ ಆಶೀರ್ವದಿಸಿ ಎಂದು ಅಜಿತ್‌ಸಿಂಗ್ ಸ್ವಾಮೀಜಿಯವರಲ್ಲಿ ಪ್ರಾರ್ಥಿಸಿದ್ದನು. ಸ್ವಾಮೀಜಿಯವರು ದೈವಾನುಗ್ರಹವಾಗಲೆಂದು ಹರಸಿದ್ದರು. ಅವರ ಅನುಗ್ರಹದಿಂದ ಜನಿಸಿದ ಗಂಡುಮಗುವಿಗೆ 'ಜೈಸಿಂಗ್' ಎಂದು ನಾಮಕರಣ ಮಾಡಿ, ವಿಜೃಂಭಣೆಯ ಸಮಾರಂಭವನ್ನು ಆಯೋಜಿಸಿದ್ದನು ದೊರೆ ಅಜಿತ್‌ಸಿಂಗ್. ಅದಕ್ಕಾಗಿಯೇ ಸ್ವಾಮೀಜಿಯವರ ದಿವ್ಯಸಾನ್ನಿಧ್ಯವನ್ನು ಕೋರಿ ಆಹ್ವಾನ ಕಳುಹಿಸಿದ್ದನು. ಜಗಮೋಹನ್ ಸ್ವಾಮೀಜಿಯವರನ್ನು ಭೇಟಿ ಮಾಡಿ ಅಮೆರಿಕಾದ ಖರ್ಚುವೆಚ್ಚದ ಬಗ್ಗೆ ಚಿಂತಿಸಬೇಕಾಗಿಲ್ಲವೆಂದೂ, ಖೇತ್ರಿಗೆ ಬರದೆ ಮಹಾರಾಜರನ್ನು ದುಃಖ, ನಿರಾಶೆಗಳಿಗೆ ದೂಡಬಾರದೆಂದೂ ಪರಿಪರಿಯಾಗಿ ವಿನಂತಿಸಿಕೊಂಡನು. ಒಲ್ಲೆ ಎನ್ನಲಾಗದೆ ಸ್ವಾಮೀಜಿ ಒಪ್ಪಿಕೊಳ್ಳಲೇಬೇಕಾಯಿತು. ಶ್ರದ್ಧಾವಿನಯ ಸಂಪನ್ನನಾದ ಅಜಿತ್‌ಸಿಂಗ್ ಸ್ವಾಮೀಜಿಯವರನ್ನು ಭಕ್ತಿಯಿಂದ ಗೌರವಿಸಿ, ಸತ್ಕರಿಸಿ, ಆರಾಧಿಸಿ ಆನಂದಪಟ್ಟನು. ಇದೆಲ್ಲಾ ನಡೆದದ್ದು ೧೮೯೩ರ ಏಪ್ರಿಲ್-ಮೇ ಕಾಲದಲ್ಲಿ. ಮುಂಬಯಿಯಿಂದ 'ಪೆನಿನ್ಸುಲಾರ್' ಎಂಬ ಹಡಗಿನಲ್ಲಿ ಪಯಣಿಸಲು ಸಕಲ ವ್ಯವಸ್ಥೆಗಳನ್ನೂ ಮಾಡಿಕೊಡಲು ಮುನ್ಷಿ ಜಗನ್‌ಮೋಹನ್‌ಲಾಲ್‌ಗೆ ರಾಜನು ಆಜ್ಞಾಪಿಸಿದನು. ರಾಜನು ಸ್ವಾಮೀಜಿಯವರು ಇನ್ನು ಮುಂದೆ 'ಸ್ವಾಮಿ ವಿವೇಕಾನಂದ'' ಎಂಬ ಹೆಸರಿನಿಂದಲೇ ವ್ಯವಹರಿಸುವಂತೆ ಬೇಡಿಕೊಂಡನು. ಅದಕ್ಕೆ ಸ್ವಾಮೀಜಿ ಸಮ್ಮತಿಸಿದರು.

ಸ್ವಾಮೀಜಿಯವರನ್ನು ಬೀಳ್ಕೊಡುವುದಾಗಿ ಭಕ್ತನೂ, ಪರಮ ನಿಷ್ಠಾವಂತನೂ ಆದ ಅಳಸಿಂಗ ಪೆರುಮಾಳ್ ಮದರಾಸಿನಿಂದ ಮುಂಬಯಿಗೆ ಬಂದಿದ್ದನು. ಹೊರಡುವ ಮುನ್ನ ಸ್ವಾಮೀಜಿಯವರ ಅಗತ್ಯಗಳನ್ನೆಲ್ಲಾ ಅರಿತು, ಅತ್ಯುತ್ಸಾಹದಿಂದ ಸಕಲ ಸಿದ್ಧತೆಗಳನ್ನೂ ಮಾಡಿಕೊಟ್ಟು ಸೇವೆ ಮಾಡಿದವರು ರಾಜಾ ಅಜಿತ್‌ಸಿಂಗ್‌ನ ಆಪ್ತಕಾರ್ಯದರ್ಶಿ ಜಗಮೋಹನ್‌ಲಾಲ್ ಮತ್ತು ಸ್ವಾಮೀಜಿಯವರ ಚರಣಗಳಲ್ಲಿ ತನ್ನ ಬಾಳನ್ನು ಸರ್ವ ಸಮರ್ಪಣೆ ಮಾಡಿದ ಅಳಸಿಂಗ ಪೆರುಮಾಳ್. ಸಾಕಷ್ಟು ಧನಸಹಾಯ

ವನ್ನು ಮಾಡಿ ಪ್ರಯಾಣವನ್ನು ನಿರಾತಂಕಗೊಳಿಸಿದವನು ರಾಜ ಅಜಿತ್‌ಸಿಂಗ್. ''ಮಹಾರಾಜರ ಗುರುಗಳು ಮಹಾರಾಜರಂತೆಯೇ ಪಯಣಿಸಬೇಕು'' ಎಂದು ಜಗಮೋಹನ್‌ಲಾಲ್ 'ಪೆನಿನ್ಸುಲಾರ್' ಹಡಗಿನ ಪ್ರಥಮ ದರ್ಜೆಯ ಟಿಕೇಟನ್ನು ಸ್ವಾಮೀಜಿಯವರಿಗೆ ನೀಡಿ, ಪರ್ಸ್ ತುಂಬ ಹಣವನ್ನೂ ಅರ್ಪಿಸಿದನು. ಅಮೆರಿಕಾ ಪ್ರಯಾಣ ಆರಂಭವಾದದ್ದು ೧೮೯೩ರ ಮೇ ೩೧ರಂದು. ಎಂಟು ಸಾವಿರ ಮೈಲಿಗಳ ಎರಡು ತಿಂಗಳ ಅವಧಿಯ ಸುದೀರ್ಘ ಪ್ರಯಾಣ! ಅವರು ಕೊಲೊಂಬೊ, ಸಿಂಗಪೂರ್, ಹಾಂಗ್‌ಕಾಂಗ್, ಜಪಾನ್ ಮಾರ್ಗವಾಗಿ ಪ್ರಯಾಣ ಮಾಡಿದರು. ಯೊಕೊಹಾಮ ನಗರದಲ್ಲಿ 'ಎಂಪ್ರೆಸ್ ಆಫ್ ಇಂಡಿಯಾ' ಎಂಬ ಹಡಗನ್ನೇರಿ ಮೈಕೊರೆಯುವ ಚಳಿಯನ್ನು ಎದುರಿಸುತ್ತಾ ಉತ್ತರ ಅಮೆರಿಕಾದ ವ್ಯಾಂಕೋವರ್ ತಲುಪಿದರು. ಈ ಮಾರ್ಗದಲ್ಲಿಯೇ ಭಾರತದ ಕೈಗಾರಿಕಾ ಪಿತಾಮಹಾರೆನಿಸಿದ ಜೆಮ್‌ಶೇಟ್‌ಜಿ ಟಾಟಾರವರು ಸ್ವಾಮೀಜಿಯವರೊಂದಿಗೆ ಸಹಪ್ರಯಾಣಿಕರಾಗಿದ್ದರು. ಇಬ್ಬರು ದಿಗ್ಗಜರೂ ಭಾರತದ ಅಭಿವೃದ್ಧಿ ಮತ್ತು ಭವಿಷ್ಯ ಕುರಿತಂತೆ ವಿಚಾರ ವಿನಿಮಯ ಮಾಡಿಕೊಂಡರು. ಸ್ವಾಮೀಜಿಯವರು ವ್ಯಾಂಕೋವರ್ ತಲುಪಿದ್ದು ಜುಲೈ ೨೫, ೧೮೯೩ರಂದು. ಅಲ್ಲಿಂದ ೨೦೦೦ ಮೈಲಿಗಳಷ್ಟು ದೂರ ರೈಲು ಪ್ರಯಾಣ ಮಾಡಿ, ಸ್ವಾಮೀಜಿ ಜುಲೈ ೩೦ರಂದು ಚಿಕಾಗೋ ತಲುಪಿದರು.

ಅಮೆರಿಕಾದ ದಿನಗಳು ಸ್ವಾಮೀಜಿಯವರ ಪಾಲಿಗೆ ಸುಖದ ಸುಪ್ಪತ್ತಿಗೆಯೇನೂ ಆಗಿರಲಿಲ್ಲ. ವಿದೇಶಿಯರ ಕಣ್ಣುಗಳಿಗೆ ಅವ ರೊಬ್ಬ ವಿಚಿತ್ರ ವ್ಯಕ್ತಿಯಾಗಿಯೂ, ಕೆಲವರಿಗೆ ವಿಲಕ್ಷಣ ವ್ಯಕ್ತಿ ಯಾಗಿಯೂ ಕಂಡರು. ಅಲ್ಲಿ ಜನ ಅವರನ್ನು ನಾನಾ ವಿಧದಲ್ಲಿ ಕಾಡಿಸಿದರು, ಪೀಡಿಸಿದರು, ವಂಚಿಸಿದರು. ಅಲ್ಲದೆ ಅವರನ್ನು ತೊಂದರೆಗೀಡು ಮಾಡಿದರು, ಕುಚೋದ್ಯ ಮಾಡಿದರು, ಶಾರೀ ರಿಕವಾಗಿ ಆಕ್ರಮಣ ಮಾಡಲು ಯತ್ನಿಸಿದರು, ನಿಂದಿಸಿದರು. ನಾನಾ ವಿಧವಾಗಿ ಕಿರುಕುಳ ನೀಡಿದರು. ಇದು ಸ್ವಾಮೀಜಿಯವ ರಿಗೆ ಸತ್ವಪರೀಕ್ಷೆಯ ಕಾಲ. ತಮ್ಮ ಅಪಾರವಾದ ಅಂತರಂಗದ ತಪಸ್ಸು ಮತ್ತು ತಿತಿಕ್ಷೆಗಳಿಂದ ಸ್ವಾಮೀಜಿ ಈ ಅಗ್ನಿದಿವ್ಯಗಳನ್ನು ಅಧೀರರಾಗದೆ ಎದುರಿಸಿದರು. ಗುರುದೇವರ ಕೃಪೆಯ ರಕ್ಷಾ ಕವಚ ಅವರನ್ನು ಕಾಪಾಡಿತು. ಎಲ್ಲ ಎಡರು ತೊಡರುಗಳ ನಡು ವೆಯೂ ಭಗವಂತನ ಸಂಕಲ್ಪಶಕ್ತಿಯು ಸ್ವಾಮೀಜಿಯವರನ್ನು ಸರ್ವವಿಧದಿಂದಲೂ ಮುನ್ನಡೆಸಿತು. ಮಂಜಿನಂತೆ ಕರಗುತ್ತಿದ್ದ ಹಣ, ದುಬಾರಿ ಜೀವನಶೈಲಿ, ಅಪರಿಚಿತ ಸ್ಥಳದ ಅನಿರೀಕ್ಷಿತ ಸುಲಿಗೆಗಳು, ವಿದೇಶದ ವಿಚಿತ್ರ ಪರಿಸರ, ಹೃದಯವನ್ನು ಹಂಚಿ ಕೊಳ್ಳಲು ಆತ್ಮೀಯರಾರೂ ಇಲ್ಲದ ಒಂಟಿತನದ ಬೇಗೆ ಮುಂತಾದ ಅನೇಕ ಸಮಸ್ಯೆಗಳ ಪೆಟ್ಟುಗಳನ್ನು ಅನಂತ ಸಹನೆಯಿಂದ ಸ್ವಾಮೀಜಿ ಸಹಿಸಿಕೊಂಡರು. ವಿಶ್ವಧರ್ಮ ಸಮ್ಮೇಳನವು ಪ್ರಾರಂಭವಾಗು ವುದು ಸೆಪ್ಟೆಂಬರ್ ಎರಡನೇ ವಾರದಲ್ಲಿ ಎಂದು ತಿಳಿದ ಸ್ವಾಮೀಜಿ ಖರ್ಚನ್ನು ಕಡಿಮೆ ಮಾಡಿಕೊಳ್ಳಲು ಬಾಸ್ಟನ್‌ಗೆ ಹೋದರು. ಸಮ್ಮೇಳನದಲ್ಲಿ ಭಾಷಣ ಮಾಡುವವರು ಯಾವುದಾದರೂ ಸಂಘ-ಸಂಸ್ಥೆಯ ಪ್ರತಿನಿಧಿಯಾಗಿರಬೇಕಿತ್ತು ಅಥವಾ ಯಾವು ದಾದರೂ ಸುಪ್ರಸಿದ್ಧ ವ್ಯಕ್ತಿಗಳಿಂದ ಪರಿಚಯ ಪತ್ರವನ್ನಾದರೂ ತಂದಿರಬೇಕಾಗಿತ್ತು. ಸ್ವಾಮೀಜಿಯವರಿಗೆ ಈ ಸೌಲಭ್ಯಗಳಿರಲಿಲ್ಲ. ಪ್ರತಿನಿಧಿಗಳನ್ನು ದಾಖಲು ಮಾಡಿಕೊಳ್ಳುವ ವಾಯಿದೆಯೂ ಮುಗಿದುಹೋಗಿದೆ ಎಂದು ತಿಳಿದ ಸ್ವಾಮೀಜಿಯವರ ಮನಸ್ಸಿ ನಲ್ಲಿ ನಿರಾಶೆಯ ಕಾರ್ಮೋಡ ಕವಿಯಿತು. ಔಪಚಾರಿಕವಾಗಿ ಪೂರೈಸಬೇಕಾದ ಇಷ್ಟೊಂದು ರೀತಿನೀತಿಗಳನ್ನು ಕುರಿತು ಸಾಕಷ್ಟು ಸಿದ್ಧತೆ ಮಾಡಿಕೊಳ್ಳಲಿಲ್ಲವಲ್ಲಾ ಎಂದು ಚಿಂತಿಸಿ ಅಸಹಾಯಕ ರಾದರು. ಆಗ ಸಹಾಯ ಹಸ್ತ ಒದಗಿ ಬಂದದ್ದು ಮಿಸ್ ಕ್ಯಾಥರಿನ್ ಅಬಟ್ ಸ್ಯಾನ್‌ಬರ್ನ್ ಎಂಬ ಮಹಿಳೆಯ ಮೂಲಕ. ಬಾಸ್ಟನ್ ಮಾರ್ಗದ ರೈಲಿನಲ್ಲಿ ಸ್ವಾಮೀಜಿಯವರನ್ನು ಭೇಟಿ ಮಾಡಿ, ಅವರ ಆಧ್ಯಾತ್ಮಿಕ ವರ್ಚಸ್ಸಿನ ಪ್ರಭಾವಕ್ಕೆ ಒಳಗಾದ ಆಕೆ, ಸ್ವಾಮೀಜಿ ಯವರನ್ನು ತನ್ನ ಮನೆಗೆ ಆಮಂತ್ರಿಸಿದ್ದಳು. ಸ್ವಾಮೀಜಿ ಒಪ್ಪಿ ದರು. ಆಕೆಯು ಒಬ್ಬ ಅಧ್ಯಾಪಕಿ ಮತ್ತು ಗ್ರಂಥಕರ್ತೆ. ಆಕೆಯೇ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಗ್ರೀಕ್ ಸಾಹಿತ್ಯ ಪ್ರಾಧ್ಯಾಪಕ ರಾದ ಡಾ. ಜಾನ್ ಹೆನ್ರಿ ರೈಟ್‌ರವರಿಗೆ ಸ್ವಾಮಿ ವಿವೇಕಾನಂದರನ್ನು ಪರಿಚಯಿಸಿದಳು. ಸ್ವಾಮೀಜಿಯವರ ಅಸಾಧಾರಣ ಮೇಧಾ ಶಕ್ತಿಗೆ ಮಾರುಹೋದ ಪ್ರೊ. ರೈಟ್ ಹೇಳಿದರು: ''ಸ್ವಾಮೀಜಿ, ನಿಮ್ಮನ್ನು ಅರ್ಹತಾಪತ್ರ ತೋರಿಸುವಂತೆ ಕೇಳುವುದೆಂದರೆ, ಸೂರ್ಯನನ್ನು 'ಬೆಳಗಲು ನಿನಗೇನು ಅಧಿಕಾರ' ಎಂದು ಕೇಳಿ ದಂತೆ!''

ಪ್ರೊ. ರೈಟ್‌ರವರು ಪ್ರತಿನಿಧಿಗಳ ಆಯ್ಕೆ ಸಮಿತಿಯ ಅಧ್ಯಕ್ಷ ರಾದ ಡಾ.ಜಾನ್ ಹೆನ್ರಿ ಬರೋಸ್‌ರವರಿಗೆ ಪತ್ರ ಬರೆದು, ಸ್ವಾಮೀಜಿ ಯವರ ಅದ್ಭುತ ಪ್ರತಿಭೆ ಮತ್ತು ಸಾಮರ್ಥ್ಯವನ್ನು ಮನಗಾಣಿ ಸಲು ಹೇಳಿದ ಮಾತಿದು: ''ನಮ್ಮ ಮೇಧಾವಿಗಳಾದ ಪ್ರೊಫೆಸರ್ ಗಳನ್ನೆಲ್ಲ ಒಟ್ಟುಗೂಡಿಸಿದರೆ ಅವರೆಲ್ಲರನ್ನೂ ಮೀರಿಸುವಂಥವರು ಇವರು.'' ಹೀಗೆ ಮಿಸ್ ಸ್ಯಾನ್‌ಬಾರ್ನ್ ಮತ್ತು ಪ್ರೊ. ಜಾನ್ ಹೆನ್ರಿ ರೈಟ್‌ರವರು ತಮ್ಮ ಅಮೂಲ್ಯವಾದ ಸಹಕಾರ ಮತ್ತು ನೆರ ವನ್ನು ಸ್ವಾಮೀಜಿಯವರಿಗೆ ಸಕಾಲದಲ್ಲಿ ನೀಡಿದರು. ಸ್ವಾಮೀಜಿ ಯವರು ರೈಟ್ ಕುಟುಂಬದವರೆಲ್ಲರ ಮೇಲೆ ಬೀರಿದ ಪ್ರಭಾವ ಗಾಢವಾಗಿತ್ತು. ಶ್ರೀಮತಿ. ರೈಟ್‌ರವರು ಸ್ವಾಮೀಜಿಯವರನ್ನು ಕುರಿತು ಬರೆಯುತ್ತಾ ಒಂದು ಪತ್ರದಲ್ಲಿ ಹೇಳುತ್ತಾರೆ: ''ವಯ ಸ್ಸಿನ ದೃಷ್ಟಿಯಿಂದ ಅವರಿಗೆ ಸುಮಾರು ಮೂವತ್ತು ವರ್ಷ, ಆದರೆ ಸಂಸ್ಕೃತಿಯ ದೃಷ್ಟಿಯಲ್ಲಿ ಅವರು ಯುಗಯುಗಗಳಷ್ಟು ಹಿರಿಯರು.''

೧೮೯೩ರ ಸೆಪ್ಟೆಂಬರ್ ೧೧ ರಿಂದ ೨೭ರವರೆಗೆ ಚಿಕಾಗೋದಲ್ಲಿ ''ಕೊಲಂಬಿಯನ್ ಜಾಗತಿಕ ಮೇಳ''ದ ಅಂಗವಾಗಿ ವಿಶ್ವಧರ್ಮ ಸಮ್ಮೇಳನವನ್ನು ಆಯೋಜಿಸಲಾಗಿತ್ತು. ಅದರ ಅಧ್ಯಕ್ಷರನ್ನಾಗಿ ಸುಪ್ರಸಿದ್ಧ ವಕೀಲ ಮತ್ತು ಲೇಖಕ ಚಾರ್ಲ್ಸ್ ಬಾನಿಯವರನ್ನು

ನೇಮಿಸಲಾಗಿತ್ತು. ಸಮಗ್ರ ಮನುಕುಲದ ಧಾರ್ಮಿಕ ದರ್ಶನಗಳನ್ನು ಒಂದು ವೇದಿಕೆಯ ಮೇಲೆ ತರುವ ಒಂದು ಅಭೂತಪೂರ್ವ ಸದುದ್ದೇಶ ಮತ್ತು ಸದಾಶಯ ಚಾರ್ಲ್ಸ್ ಬಾನಿಯವರಿಗಿತ್ತು. ವಿಜ್ಞಾನ, ಸಂಗೀತ, ಸರ್ಕಾರ, ಆಧುನಿಕ ಆವಿಷ್ಕಾರಗಳು, ಕಾನೂನು ಸುಧಾರಣೆ, ವಿದ್ಯಾಭ್ಯಾಸ, ಸ್ತ್ರೀಯರ ಪ್ರಗತಿ ಮತ್ತು ವೈದ್ಯಕೀಯ ಸಂಶೋಧನೆಗಳನ್ನು ಕುರಿತು ಜಾಗತಿಕ ಮಟ್ಟದ ಸಮ್ಮೇಳನಗಳು ನಡೆಯುವಾಗ, 'ಧರ್ಮ' ಎಂಬ ಪ್ರಧಾನ ವಿಚಾರವನ್ನು ನಿರ್ಲಕ್ಷಿಸಬಾರದು ಎಂಬುದು ಚಾರ್ಲ್ಸ್ ಬಾನಿ, ರೆವರೆಂಡ್ ಜಾನ್ ಹೆನ್ರಿ ಬರೋಸ್ ಮುಂತಾದ ಪ್ರಗತಿಶೀಲ ಚಿಂತಕರ ಅಭಿಪ್ರಾಯವಾಗಿತ್ತು. ಮಾನವನ ಬೌದ್ಧಿಕ ಮತ್ತು ನೈತಿಕ ಬೆಳವಣಿಗೆಗೆ ಆಧಾರಭೂತ ಶಕ್ತಿಯಾದ ಮತ್ತು ಭಗವಂತನ ಮೇಲಿನ ಶ್ರದ್ಧೆಯನ್ನು ಸ್ಥಿರಗೊಳಿಸಿ ವೃದ್ಧಿಸುವ ಧಾರ್ಮಿಕ ಚಿಂತನೆಗಳನ್ನು ಕುರಿತು ವಿಶ್ವಸಮ್ಮೇಳನವನ್ನು ನಡೆಸುವುದು ಸಂದರ್ಭೋಚಿತವೂ, ಔಚಿತ್ಯಪೂರ್ಣವೂ ಆಗಿದೆ ಎಂದು ಅವರೆಲ್ಲಾ ನಂಬಿದ್ದರು. ಅಸಹಿಷ್ಣುತೆ ಮತ್ತು ಇಂದ್ರಿಯಭೋಗಗಳಲ್ಲಿನ ಮಗ್ನತೆ ವ್ಯಾಪಕವಾಗಿರುವ ಸನ್ನಿವೇಶದಲ್ಲಿ ಧರ್ಮ ಸಮ್ಮೇಳನದ ಮಹತ್ತರವಾದ ಪಾತ್ರವನ್ನು ಅವರೆಲ್ಲಾ ಮನಗಂಡಿದ್ದರು. ವಿಶ್ವಭ್ರಾತೃತ್ವದ ನಿರ್ಮಾಣ, ವಿಭಿನ್ನ ಜಾಗತಿಕ ಧರ್ಮಗಳ ನಡುವೆ ಪರಸ್ಪರ ಅರಿವು ಮತ್ತು ಸಾಮರಸ್ಯವನ್ನು ಸಾಧಿಸುವುದು, ವಿಶ್ವಶಾಂತಿಯ ಸಂದೇಶವನ್ನು ಪಸರಿಸುವುದು ಮುಂತಾದ ಉನ್ನತ ಉದ್ದೇಶಗಳನ್ನಿಟ್ಟುಕೊಂಡು ಸಮ್ಮೇಳನವು ರೂಪುಗೊಂಡಿತ್ತು. ಅವ್ಯಕ್ತವೂ ಅಗೋಚರವೂ ಅಲೌಕಿಕವೂ ಆದ ದಿವ್ಯಸಂಕಲ್ಪವು ಹಲವು ಮನಸ್ಸುಗಳನ್ನು ಚೋದಿಸುತ್ತಾ ಮಾನವ ಪ್ರಜ್ಞೆಯನ್ನು ಪ್ರಗತಿಪಥದತ್ತ ಕೊಂಡೊಯ್ಯುವಲ್ಲಿ ಉದ್ಯುಕ್ತವಾಗಿದೆ ಎಂದು ಅನೇಕರಿಗೆ ಅಂತಃಸ್ಫುರಣೆಯಾಗುತ್ತಿತ್ತು.

ಆದರೆ ಕ್ರೈಸ್ತಧರ್ಮ ಪ್ರಚಾರಕರನೇಕರ ಒಳಮನಸ್ಸಿನಲ್ಲಿ ಸ್ವಾರ್ಥಸಾಧನೆಯ ವಿಷಬೀಜಗಳು ಸುಪ್ತವಾಗಿದ್ದವು ಎಂಬುದನ್ನೂ ಅಗತ್ಯವಾಗಿ ಗಮನಿಸಬೇಕಾಗಿದೆ. ಅನ್ಯಧರ್ಮೀಯರನ್ನೆಲ್ಲಾ ಒಂದೆಡೆ ಸೇರಿಸಿ ಕ್ರೈಸ್ತಧರ್ಮದ ಮೇಲ್ಮೆಯನ್ನೂ, ಪಾರಮ್ಯವನ್ನೂ ಸಾಧಿಸಿ ಮನದಟ್ಟು ಮಾಡಿಕೊಡುವ ವ್ಯಾವಹಾರಿಕ ಜಾಣ್ಮೆಯ ಪ್ರದರ್ಶನಕ್ಕಾಗಿ ಅವರೆಲ್ಲಾ ಕಾಯುತ್ತಿದ್ದರು. ಕೆಲವು ಧಾರ್ಮಿಕ ಪೂರ್ವಾಗ್ರಹಗಳಿಂದ ಮತ್ತು ಸ್ವಾರ್ಥಪ್ರೇರಿತ ಭಾವನೆಗಳಿಂದ ತುಂಬಿದ ಮನಸ್ಸುಗಳು ಪ್ರತಿಭಟನೆಯ, ಅತೃಪ್ತಿಯ ಪ್ರತಿಕ್ರಿಯೆಗಳನ್ನೂ ನೀಡಿದರು. ಉಳಿದ ಧರ್ಮೀಯರಿಗೂ ಗೌರವದ ಮತ್ತು ಸಮನಾದ ಸ್ಥಾನವನ್ನು ನೀಡುವುದೆಂದರೆ ಏಕಮಾತ್ರ ದೇವಪುತ್ರನೂ ಅವತಾರ ಪುರುಷನೂ ಆದ ಏಸುಕ್ರಿಸ್ತನಿಗೆ ಮತ್ತು ಜಗತ್ತನ್ನೇ ತನ್ನ ವ್ಯಾಪ್ತಿಗೆ ಆಕ್ರಮಿಸಿ ವಶಪಡಿಸಿಕೊಳ್ಳಬೇಕೆಂದಿರುವ ಕ್ರೈಸ್ತಧರ್ಮಕ್ಕೆ ಅಪಚಾರ ಮಾಡಿದಂತಾಗುತ್ತದೆ ಎಂದು ಹಲವು ಕ್ರೈಸ್ತ ಸಂಸ್ಥೆಗಳು ಬೊಬ್ಬಿಟ್ಟವು. ಕ್ಯಾಂಟರ್‌ಬರಿಯ ಆರ್ಚ್ ಬಿಷಪ್ ಮುಂತಾದವರು ''ಧರ್ಮವೆಂದರೆ ಕ್ರೈಸ್ತಧರ್ಮವೊಂದೇ'' ಎಂದು ತಾವು ನಂಬಿರುವುದರಿಂದ ಸರ್ವ ಧರ್ಮ ಸಮ್ಮೇಳನದಲ್ಲಿ ಭಾಗವಹಿಸಲು ಸಾಧ್ಯವಿಲ್ಲ ಎಂದು ಪಾಲ್ಗೊಳ್ಳಲು ನಿರಾಕರಿಸಿಯೂ ಇದ್ದರು. ಹಾಂಗ್‌ಕಾಂಗಿನ ಪಾದ್ರಿಯೊಬ್ಬರು ''ಪೊಳ್ಳುಧರ್ಮಗಳೊಂದಿಗೆ ಹುಡುಗಾಟವಾಡಿ ನಿಮ್ಮ ಅಮೂಲ್ಯ ಆತ್ಮವನ್ನು ಗಂಡಾಂತರಕ್ಕೆ ಸಿಕ್ಕಿಸಿಕೊಳ್ಳಬೇಡಿ. ನೀವು ನಿಮಗೆ ಅರಿವಿಲ್ಲದಂತೆ ಕ್ರಿಸ್ತನ ವಿರುದ್ಧ ಪಿತೂರಿ ನಡೆಸುತ್ತಿದ್ದೀರಿ.'' ಎಂದು 'ಧಾರ್ಮಿಕ ಸಲಹೆ'ಯನ್ನು ನೀಡಿ ತಮ್ಮ ಪ್ರತಿಭಟನೆಯನ್ನು ಸಮರ್ಥಿಸಿಕೊಂಡಿದ್ದೂ ಉಂಟು. ಅಮೆರಿಕದ ಪಾದ್ರಿಯೊಬ್ಬರು ಸಮ್ಮೇಳನದಲ್ಲಿ ಜನಸಮೂಹದ ವೇದಿಕೆಯಲ್ಲಿ ಕ್ರಿಸ್ತನ ಮುಂದೆ ಅನ್ಯಧರ್ಮಕ್ಕೆ ಸೇರಿದ ಪ್ರತಿಯೊಬ್ಬ ಪ್ರತಿನಿಧಿಯೂ ಮುಂಡಿಯೂರಿ ತಲೆಬಾಗಿಸಿಬಿಡುತ್ತಾನೆ ಎಂಬ 'ಪರಮ ವಿಶ್ವಾಸ'ವನ್ನೇ ವ್ಯಕ್ತಪಡಿಸಿದ್ದರು. ಒಟ್ಟಿನಲ್ಲಿ ಕ್ರೈಸ್ತಧರ್ಮದ ದೊಡ್ಡಸ್ತಿಕೆಯ ಜಾಹೀರಾತಿನ ದೃಷ್ಟಿಯಿಂದ, ಸಂಕುಚಿತ ಮನಸ್ಸಿನ 'ಬಾವಿಕಪ್ಪೆ'ಗಳಿಗಾಗಿ ಸಹಸ್ರಾರು ಜನ ಸರ್ವಧರ್ಮ ಸಮ್ಮೇಳನವನ್ನು ಬೆಂಬಲಿಸಿದ್ದರು. ಅದು 'ಸರ್ವಧರ್ಮ' ಸಮ್ಮೇಳನವೆಂಬ ಹಣೆಪಟ್ಟಿಯನ್ನೇ ಬಾಹ್ಯದಲ್ಲಿ ಹೊಂದಿದ್ದರೂ, ವಾಸ್ತವವಾಗಿ ತಮ್ಮ ಏಕೈಕ ಸರ್ವಶ್ರೇಷ್ಠ ಕ್ರೈಸ್ತಧರ್ಮದ 'ಪೀಠಾರೋಹಣ'ಕ್ಕಾಗಿ ಆ ಜಾಗತಿಕ ವೇದಿಕೆ ಸಿದ್ಧವಾಗುತ್ತಿದೆ ಎಂದು ಒಳನಿರೀಕ್ಷೆಗಳನ್ನು ತುಂಬಿಕೊಂಡಿದ್ದರು. ಹಿನ್ನೆಲೆಯಲ್ಲಿ ಸುಪ್ತವಾಗಿರುವ ಈ ಅಂಶಗಳು ಸ್ವಾಮಿ ವಿವೇಕಾನಂದರಿಗೆ ತಿಳಿದಿದ್ದವು. ಒಂದು ಸಂದರ್ಶನದಲ್ಲಿ ಸ್ವಾಮೀಜಿಯವರು ಸಮ್ಮೇಳನದ ಹಿಂದಿನ ಉದ್ದೇಶದ ಕಠೋರ ಸತ್ಯವನ್ನು ಬಯಲು ಮಾಡಿದ್ದಾರೆ. ಸ್ವಾಮೀಜಿ ಹೇಳುತ್ತಾರೆ: ''ನನಗೆ ತೋರುವಂತೆ, ಸರ್ವಧರ್ಮ ಸಮ್ಮೇಳನದ ಹಿನ್ನೆಲೆಯಲ್ಲಿ ಪ್ರಪಂಚದ ಮುಂದೆ 'ಕ್ರೈಸ್ತೇತರ ಅನಾಗರಿಕ'ರನ್ನು ಪ್ರದರ್ಶಿಸುವ ಉದ್ದೇಶವಿತ್ತು.''

ಜಗದೀಶ್ವರನ ಸಾಮ್ರಾಜ್ಯದಲ್ಲಿ ವಿದ್ಯಾಶಕ್ತಿ ಮತ್ತು ಅವಿದ್ಯಾ ಶಕ್ತಿಗಳು ಕೂಡಿಯೇ ಕಾರ್ಯಮಾಡುತ್ತಿರುತ್ತವೆ. ಈಶ್ವರನು ಸಕಲ ಶಕ್ತಿಗಳ ಸಂಯೋಜಕನಾಗಿ ಕರ್ಮಕ್ಷೇತ್ರದಲ್ಲಿ ತನ್ನ ಸಂಕಲ್ಪವನ್ನು ಈಡೇರಿಸಿಕೊಳ್ಳುತ್ತಾನೆ. ಗುರುದೇವ ಶ್ರೀರಾಮಕೃಷ್ಣರು ಕಾಳಿಯ ಮುಂದೆ ಹಾಡುತ್ತಿದ್ದ ಹಾಡಿನ ಮೊದಲ ಸಾಲು ನೆನಪಾಗುತ್ತಿದೆ: 'ನಿನ್ನ ಇಚ್ಛೆಯ ನೀನು ಪೂರೈಸುತ್ತಿರಲು ತಮ್ಮ ಗೈಮೆಯಿದೆಂದು ತಿಳಿವರೀ ಜನರು.' ಎಲ್ಲರ ನಿರೀಕ್ಷೆಗೂ ಮೀರಿ ಉದಾರ ದೃಷ್ಟಿಯ ಮತ್ತು ಮತಾಂಧತೆಯ ವಿನಾಶದ ಅಗತ್ಯವನ್ನು ಸ್ವಾಮಿ ವಿವೇಕಾನಂದರು ಉದ್ಘೋಷಿಸಿದರು. ಚಿಕಾಗೋದ ಮಿಚಿಗನ್ ಅವೆನ್ಯೂನಲ್ಲಿರುವ 'ಆರ್ಟ್ ಇನ್‌ಸ್ಟಿಟ್ಯೂಟ್' ಎಂಬ ಭವ್ಯ ಕಟ್ಟಡದ 'ಹಾಲ್ ಆಫ್ ಕೊಲಂಬಸ್' ಎಂಬ ಸಭಾಭವನದಲ್ಲಿ ೧೮೯೩ ಸೆಪ್ಟೆಂಬರ್ ೧೧ ರ ಸೋಮವಾರದಂದು ವೀರವೇದಾಂತಿ ಸ್ವಾಮಿ ವಿವೇಕಾನಂದರು ಅಭೂತಪೂರ್ವವೂ, ಐತಿಹಾಸಿಕವೂ, ಸಾರ್ವಕಾಲಿಕವೂ, ಸಾರ್ವತ್ರಿಕವೂ ಆದ ವಿಶ್ವಸಂದೇಶವನ್ನು ಗುರುದೇವರ ಅನುಗ್ರಹದಿಂದ ಸರ್ವಧರ್ಮ ಸಮ್ಮೇಳನದಲ್ಲಿ ಹೇಗೆ ಮುಟ್ಟಿಸಿದರು ಎಂಬುದು ಈಗ ಸರ್ವವಿದಿತವಾಗಿದೆ. ❁

# ಚಿಕಾಗೋದಲ್ಲಿ ಸ್ವಾಮಿ ವಿವೇಕಾನಂದರು

**ಸೇವಂತಿ ಡಿ. ರೈ**

ಸ್ವಾಮಿ ವಿವೇಕಾನಂದರು ಪ್ರಪಂಚದುದ್ದಕ್ಕೂ ಸಂಚರಿಸಿ, ಇಡೀ ಮನುಕುಲಕ್ಕೆ ಅತ್ಯುನ್ನತವಾದ ಆದರ್ಶ, ಸಂದೇಶಗಳನ್ನು ನೀಡಿದರು. ಈ ಸಂದೇಶವನ್ನು ಬಿತ್ತರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಚಿಕಾಗೋ ಉಪನ್ಯಾಸಗಳ ಹಿನ್ನೆಲೆ, ಅದಕ್ಕೆ ವೇದಿಕೆ ಯಾವ ರೀತಿ ಸಿದ್ಧ ವಾಯಿತು ಮುಂತಾದ ವಿಷಯಗಳನ್ನು ಈ ಲೇಖನದಲ್ಲಿ ವಿವರಿಸಲಾಗಿದೆ. ಲೇಖಕಿ ನಿವೃತ್ತ ಉಪನ್ಯಾಸಕಿ ಉತ್ತಮ ಬರಹಗಾರರು. ಹಲವು ಗ್ರಂಥಗಳನ್ನು ಪ್ರಕಟಿಸಿರುವ ಇವರು ಹಾಗೂ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.



## ಹಿನ್ನೆಲೆ

ಸ್ವಾಮಿ ವಿವೇಕಾನಂದರನ್ನು ಯಾವ ಸರ್ವಧರ್ಮ ಸಮ್ಮೇಳನ ವಿಶ್ವವಿಖ್ಯಾತರನನ್ನಾಗಿ ಮಾಡಿಸಿತೋ, ಯಾವ ಸರ್ವಧರ್ಮ ಸಮ್ಮೇಳನ ಹಿಂದೂಧರ್ಮಕ್ಕೆ ವಿಶ್ವಮಾನ್ಯತೆ ದೊರಕಿಸಿಕೊಟ್ಟಿತೋ ಆ ಸರ್ವಧರ್ಮ ಸಮ್ಮೇಳನ ಸಮಾವೇಶಗೊಂಡಿದ್ದು ಅಮೆರಿಕದ ಚಿಕಾಗೋ ನಗರದಲ್ಲಿ, ೧೮೯೩ ಸೆಪ್ಟೆಂಬರ್ ತಿಂಗಳಲ್ಲಿ.

ನಾವಿಕ ಕೊಲಂಬಸ್ ಅಮೆರಿಕ ಭೂಖಂಡ ಕಂಡುಹಿಡಿದು ೪೦೦ ವರ್ಷಗಳು ಸಂದಿರುವ ಶುಭ ಸಂದರ್ಭವನ್ನು ಆಚರಿಸುವ ಕಾರ್ಯಕ್ರಮದ ಅಂಗವಾಗಿ, ಬೃಹತ್ ವಸ್ತುಪ್ರದರ್ಶನವನ್ನು (World's Colombian Exposition) ೧೮೯೩ರಲ್ಲಿ ಅಮೆರಿಕದ ಚಿಕಾಗೋ ನಗರದಲ್ಲಿ ಏರ್ಪಡಿಸಲಾಯಿತು. ಇದರ ಅಂಗವಾಗಿ ೧೮೯೩, ಸೆಪ್ಟೆಂಬರ್ ತಿಂಗಳಲ್ಲಿ ಸರ್ವಧರ್ಮ ಸಮ್ಮೇಳನ (Parliament of Religions) ನಡೆಯಿತು. ವಿಶ್ವದಾದ್ಯಂತ ಹೆಚ್ಚಿನ ಪ್ರಚಾರವಿದ್ದ ಈ ಸಮ್ಮೇಳನಕ್ಕೆ ಪ್ರಪಂಚದ ಹಲವಾರು ದೇಶಗಳ, ವಿವಿಧ ಧರ್ಮಗಳ ಪ್ರತಿನಿಧಿಗಳು ತಮ್ಮ ಧರ್ಮದ ಮೇಲ್ಮೆಯ ಬಗ್ಗೆ ಮಾತಾಡಲು ಆಗಮಿಸುವವರಿದ್ದರು.

ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಭಾರತದಾದ್ಯಂತ ಕಾಲ್ನಡಿಗೆಯಲ್ಲಿ ಸಂಚರಿಸಿ ಭಾರತದ ಸಾಮಾನ್ಯ ಪ್ರಜೆಗಳ ಬಡತನ, ಕಷ್ಟಕಾರ್ಪಣ್ಯಗಳನ್ನು ಅರ್ಥಮಾಡಿಕೊಂಡಿದ್ದರು. ಸಾಮಾನ್ಯ ಭಾರತೀಯರು ಕಷ್ಟಜೀವಿಗಳು, ಸೌಮ್ಯ ಸ್ವಭಾವದವರು, ಅವರ ದುಡಿತಕ್ಕೆ ಸರಿಯಾದ ವರಮಾನವಿಲ್ಲ. ಈ ಕಷ್ಟಜೀವಿಗಳಿಗೆ ಏನಾದರೂ ದಾರಿ ತೋರಿಸಬೇಕೆಂದು ಅವರು ಬಯಸಿದರು. ಭಾರತದ ಅರಸರು, ಶ್ರೀಮಂತರು, ಜನಸಾಮಾನ್ಯರು, ಸ್ತ್ರೀಪುರುಷರೆನ್ನದೆ ಎಲ್ಲರೂ ಸ್ವಾಮೀಜಿಯವರ ಕಾಳಜಿಯನ್ನು ಅರ್ಥಮಾಡಿಕೊಂಡರೂ, ಅವರಾರೂ ಸ್ವಾಮೀಜಿಯವರ ಯೋಜನೆಗಳನ್ನು ಕಾರ್ಯಗತಗೊಳಿಸುವಷ್ಟು ಸ್ಪಂದಿಸಲಿಲ್ಲ.

ಸ್ವಾಮಿ ವಿವೇಕಾನಂದರು ಸಂಚರಿಸುತ್ತಾ ಭಾರತದ ದಕ್ಷಿಣದ ತುತ್ತತುದಿಯಲ್ಲಿದ್ದ ಕನ್ಯಾಕುಮಾರಿಯ ಸಮುದ್ರ ತೀರ ತಲುಪಿದರು. ಮೂರು ಸಮುದ್ರಗಳು ಸಂಧಿಸುವ ಆ ಪುಣ್ಯಸ್ಥಳದಲ್ಲಿ ನಿಂತುಕೊಂಡು ಸಮುದ್ರದ ಮಧ್ಯದಲ್ಲಿದ್ದ ಒಂದು ಬೃಹತ್ ಶಿಲೆಯನ್ನೇ ದಿಟ್ಟಿಸಿದರು. ಧ್ಯಾನಮಾಡಲು ಪ್ರಶಸ್ತವಾದ ಆ ಬಂಡೆಯತ್ತ ಈಜಿಕೊಂಡು ಹೋಗಿ, ಆ ಬೃಹತ್ ಬಂಡೆಯನ್ನೇರಿ ಅಲ್ಲಿ ಧ್ಯಾನಾಸಕ್ತರಾಗಿ ಕುಳಿತರು. ಅವರ ಮನಸ್ಸಿನ ಕಣ್ಣಮುಂದೆ ಭಾರತದ ಸಹಸ್ರಾರು ವರ್ಷಗಳ ಇತಿಹಾಸ, ಭವ್ಯಸಂಸ್ಕೃತಿ, ಸಾಮಾಜಿಕ

ಧಾರ್ಮಿಕ ಪರಿಸ್ಥಿತಿ ಹಾದುಹೋಯಿತು.ಅಷ್ಟೇ ಅಲ್ಲದೆ ಭಾರತದ ಅಂದಿನ ಪ್ರಜೆಗಳ ಸ್ಥಿತಿ, ಬಡತನ, ಅವರ ಮೇಲೆ ನಡೆಯುವ ದೌರ್ಜನ್ಯ, ಇವೆಲ್ಲಾ ಸ್ವಾಮೀಜಿ ಕಣ್ಣಮುಂದೆ ಸುಳಿಯಿತು. ಈ ಬಡ ಜನರಿಗಾಗಿ ಏನಾದರೂ ಮಾಡಬೇಕೆಂದು ಸ್ವಾಮೀಜಿ ಬಯಸಿದರು. ಪಶ್ಚಿಮ ದೇಶಗಳಿಗೆ ಹೋಗಿ, ಅಲ್ಲಿಯ ಜನರ ನೆರವಿನಿಂದ ಭಾರತದ ಸಾಮಾನ್ಯ ಜನರ ಸ್ಥಿತಿಯನ್ನು ಸುಧಾರಿಸ ಬೇಕೆಂದು ಅವರು ಬಯಸಿದರು.

ಸನಾತನ ಹಿಂದೂಧರ್ಮದ ಜ್ಞಾನಸುಧೆಯನ್ನು ಅಮೆರಿಕಾ ದಂತಹ ದೇಶದಲ್ಲಿ ಹರಿಸಿದರೆ ಅಲ್ಲಿಯ ಜನರಿಗೆ ಭಾರತದ ಶ್ರೇಷ್ಠ ತೆಯು ತಿಳಿಯುವುದು. ಪ್ರಾಚೀನ ಸಂಸ್ಕೃತಿ ಹೊಂದಿದ್ದ ಭಾರತದ ಮೌಲ್ಯದ ಅರಿವಾಗಿ, ಭಾರತದ ಬಗ್ಗೆ ಗೌರವ ಬೆಳೆಯುವುದು. ಹಿಂದೂಧರ್ಮದ ಅರಿವು ಮೂಡುವುದು — ಎಂಬುದೆಲ್ಲಾ ಸ್ವಾಮೀಜಿ ಮನಸ್ಸಿನಲ್ಲಿ ಹೊಳೆಯಿತು.

ಅಮೆರಿಕದ ಚಿಕಾಗೋ ನಗರದಲ್ಲಿ ವಿಶ್ವಧರ್ಮಗಳ ಸಮ್ಮೇಳನ ನಡೆಯುವ ವಿಚಾರ ೧೮೯೨ರಲ್ಲೇ ಸ್ವಾಮೀಜಿಯವರ ಅರಿವಿಗೆ ಬಂದಿತ್ತು. ಅವರ ಅನುಯಾಯಿಗಳು, ಅಭಿಮಾನಿಗಳು, ವಿಶ್ವ ಧರ್ಮ ಸಮ್ಮೇಳನದಲ್ಲಿ ಹಿಂದೂಧರ್ಮವನ್ನು ಪ್ರತಿನಿಧಿಸಲು ಅವರನ್ನು ಒತ್ತಾಯಿಸುತ್ತಿದ್ದರು. ಕೆಲವರು ಚಂದಾ ಎತ್ತಿ ಸ್ವಾಮೀಜಿ ಅಮೆರಿಕಾಕ್ಕೆ ಹೋಗಲು ಬೇಕಾದಷ್ಟು ನಿಧಿ ಸಂಗ್ರಹಿಸಿದರು.

ಆದರೂ ಸ್ವಾಮೀಜಿಯವರ ಮನಸ್ಸು ಡೋಲಾಯಮಾನ ವಾಗಿತ್ತು. ಅವರು ಶ್ರೀಮಾತೆ ಶಾರದಾದೇವಿಗೆ ತನ್ನ ತುಮುಲ ವನ್ನು ತಿಳಿಸುವ ಪತ್ರ ಬರೆದು ಸಲಹೆ ಕೇಳಿದರು. ಶ್ರೀಮಾತೆ ಸ್ವಾಮೀಜಿಗೆ ಪತ್ರ ಬರೆದು, ''ದೇವರ ದಯೆ ಇದೆ; ಗುರು ಮಹಾರಾಜರ ಆಶೀರ್ವಾದ ಇದೆ. ಖಂಡಿತವಾಗಿ ಹೋಗಿ ಬಾ. ನಿನಗೆ ಜಯವಾಗುವುದು'' ಎಂದು ಆಶೀರ್ವದಿಸಿ, ಮೂವತ್ತರ ಹರಯದ, ಕೈಯಲ್ಲಿ ಕಾಸಿಲ್ಲದ ಸಂನ್ಯಾಸಿಗೆ ತಿಳಿಸಿದರು.

೧೮೯೩ರ ಏಪ್ರಿಲ್ ತಿಂಗಳ ಒಂದು ದಿನ ಸ್ವಾಮೀಜಿ, ಧ್ಯಾನದ ಸ್ಥಿತಿಯಲ್ಲಿದ್ದಾಗ ಅವರಿಗೆ ಸಮುದ್ರದ ಮೇಲೆ ನಡೆದುಕೊಂಡು ಹೋಗುತ್ತಿರುವ ತನ್ನ ಗುರುದೇವ ಶ್ರೀರಾಮಕೃಷ್ಣ ಪರಮಹಂಸರು, ತಮ್ಮನ್ನು ಹಿಂಬಾಲಿಸಲು ಅವರನ್ನು ಕರೆಯುತ್ತಿರುವಂತೆ ಭಾಸ ವಾಯಿತು. ವಿಶ್ವಧರ್ಮ ಸಮ್ಮೇಳನಕ್ಕೆ ಹೋಗಲು ತನಗೆ ಗುರು ದೇವರ ಆಶೀರ್ವಾದ ದೊರೆಯಿತೆಂದು ಭಾವಿಸಿ ಸ್ವಾಮೀಜಿಯವರ ಡೋಲಾಯಮಾನವಾಗಿದ್ದ ಮನಸ್ಸು ಸ್ಥಿರವಾಯಿತು. ಶ್ರೀಮಾ ತೆಯ ಪತ್ರವೂ ಅವರಲ್ಲಿ ಧೈರ್ಯ ತುಂಬಿತು.

ಮದ್ರಾಸಿನಲ್ಲಿ ಆಳಸಿಂಗ ಪೆರುಮಾಳ್ ಎಂಬವರ ನೇತೃತ್ವದಲ್ಲಿ ಸ್ವಾಮೀಜಿಯವರ ಶಿಷ್ಯರು ಸ್ವಾಮೀಜಿಯ ಅಮೆರಿಕಾ ಪ್ರವಾಸಕ್ಕೆ ಹಣ ಸಂಗ್ರಹಿಸಿದರು. ಬೊಂಬಾಯಿ ತಲುಪಿದ ಸ್ವಾಮೀಜಿಯವ ರನ್ನು ಬೀಳ್ಕೊಡಲು ಮದ್ರಾಸಿನಿಂದ ಆಳಸಿಂಗ ಪೆರುಮಾಳ್ ಮತ್ತು ಕೆಲವು ಹಳೆಯ ಸ್ನೇಹಿತರು ಬಂದಿದ್ದರು. ಅಮೆರಿಕಾದಲ್ಲಿ ಹಾಕಿಕೊಳ್ಳುವುದಕ್ಕೆ ಸರಿಯಾದ ಉಡುಪು, ತಲೆಗೆ ಸುತ್ತಲು ಕಾವಿ ಬಣ್ಣದ ಉದ್ದವಾದ ಬಟ್ಟೆ ಎಲ್ಲವನ್ನೂ ಸಿದ್ಧಮಾಡಿಕೊಟ್ಟರು.

P.O.C. ಗೆ ಸೇರಿದ ಪೆನಿನ್ಸುಲಾರ್ (S.S. Peninsular) ಹಡಗಿನಲ್ಲಿ ಮೊದಲಿನ ದರ್ಜೆಯ ಟಿಕೆಟ್ ಮತ್ತು ಖರ್ಚಿಗೆ ಹಣ ಎಲ್ಲವನ್ನೂ ಖೇತ್ರಿ ಮಹಾರಾಜರೇ ಒದಗಿಸಿದ್ದರು.

### ಅಮೆರಿಕಾಗೆ ಪ್ರಯಾಣ

ಎಲ್ಲ ಮತಧರ್ಮಗಳೂ ಪರಮಸತ್ಯದೆಡೆಗೆ ಕೊಂಡೊಯ್ಯು ತ್ತವೆ ಎಂಬ ಉದಾರ ದೃಷ್ಟಿಯುಳ್ಳ ದೇಶದಿಂದ, ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಮುಂದುವರಿದ, ಸುಖಭೋಗಕ್ಕೆ ಆದ್ಯತೆ ಕೊಟ್ಟಿರುವ ಅಮೇರಿಕಾ ದೇಶಕ್ಕೆ, ಅಲ್ಲಿಯ ಜನರ ಕಣ್ಣುತೆರೆಯಿಸಿ, ಅವರಿಗೆ ಭಾರತದ ಸತ್ಯದರ್ಶನ ಮಾಡಿಸಲು ಸ್ವಾಮಿ ವಿವೇಕಾ ನಂದರನ್ನು ಹೊತ್ತ ಹಡಗು, ೧೮೯೩ರ ಮೇ ೩೧ನೇ ತಾರೀಖಿಗೆ ಬೊಂಬಾಯಿ ಬಂದರಿನಿಂದ ಹೊರಟಿತು. ಕೊಲೊಂಬೊ, ಸಿಂಗಾ ಪುರ ಮಾರ್ಗವಾಗಿ ಜಪಾನಿನ ಯೊಕೊಹಾಮ ತಲಪಿದರು. ಅಲ್ಲಿ S S Empress of India ಎಂಬ ಹಡಗನ್ನು ಏರಿ ಜುಲೈ ೨೫ರಂದು ಕೆನಡಾದ ವ್ಯಾಂಕೋವರ್ ಬಂದರನ್ನು ತಲುಪಿದರು. ಅಲ್ಲಿಂದ ರೈಲಿನಲ್ಲಿ ಪ್ರಯಾಣಿಸಿ, ಜುಲೈ ೩೦ರಂದು ಚಿಕಾಗೊ ನಗರವನ್ನು ಪ್ರವೇಶಿಸಿದರು.

ಸ್ವತಂತ್ರ ಅಮೆರಿಕ ಸಂಯುಕ್ತ ಸಂಸ್ಥಾನ ರೂಪುಗೊಂಡು (ಕ್ರಿ.ಶ. ೧೭೭೬) ಅಂದಿನಿಂದ ಇಂದಿನವರೆಗೆ (೧೮೯೩) ಆ ದೇಶ ದಲ್ಲಿ ಏನೆಲ್ಲಾ ಸಾಧನೆಗಳಾದವು, ಅಮೆರಿಕನ್ನರು ಏನೆಲ್ಲಾ ಸಾಧಿ ಸಿದ್ದಾರೆ ಎಂಬುದನ್ನು ಜಗತ್ತಿಗೆ ತೋರಿಸಲು, ಬಹಳ ಬೃಹತ್ತಾದ ಒಂದು ವಸ್ತು ಪ್ರದರ್ಶನವನ್ನು ಚಿಕಾಗೋದಲ್ಲಿ ಏರ್ಪಡಿಸ ಲಾಗಿತ್ತು. ಅಷ್ಟು ದೊಡ್ಡ ಪ್ರದರ್ಶನವನ್ನು ನೋಡಲು ಎಂಟು ಹತ್ತು ದಿನಗಳಾದರೂ ಬೇಕಾಗುತ್ತಿತ್ತು. ಸ್ವಾಮೀಜಿ ಆ ಪ್ರದರ್ಶನ ವನ್ನು ನೋಡಲು ಹೋದರು. ಅಲ್ಲಿ ಅಮೆರಿಕದ ಆಧುನಿಕ ತಂತ್ರ ಜ್ಞಾನವನ್ನು ಕಂಡು ಬೆರಗಾದರು.

ಅಲ್ಲಿಂದ ವಿಶ್ವಧರ್ಮ ಸಮ್ಮೇಳನದ ಬಗ್ಗೆ ವಿಚಾರಿಸಲು, ಅದರ ಕಚೇರಿಗೆ ಹೋಗಿದ್ದ ಸ್ವಾಮೀಜಿಗೆ ಆಘಾತವಾಗುವಂತಹ ಸುದ್ದಿ ಸಿಕ್ಕಿತು. ವಿಶ್ವಧರ್ಮ ಸಮ್ಮೇಳನ ಸೆಪ್ಟೆಂಬರ್ ತಿಂಗಳಲ್ಲಿ ನಡೆ ಯುವುದು; ಅಲ್ಲದೆ ಸಮ್ಮೇಳನಕ್ಕೆ ಸದಸ್ಯರಾಗಬೇಕಾದರೆ, ಅವರು ಯಾವ ದೇಶದವರೋ, ಆ ದೇಶದ ಒಂದು ಸಂಸ್ಥೆಯ ಮೂಲಕ ಬಂದಿರಬೇಕು ಮತ್ತು ಪರಿಚಯ ಪತ್ರ ಇರಬೇಕು ಎಂಬ ವಿಷಯ ತಿಳಿಯಿತು. ಸ್ವಾಮೀಜಿಯ ಬಳಿ ಪರಿಚಯ ಪತ್ರ ಇರಲಿಲ್ಲ. ಅವರ ಶಿಷ್ಯರು ಯಾರೂ ಪರಿಚಯ ಪತ್ರದ ಬಗ್ಗೆ ಯೋಚಿಸಿರ ಲಿಲ್ಲ. ಸ್ವಾಮೀಜಿಯವರ ವ್ಯಕ್ತಿತ್ವವೇ ಅವರಿಗೊಂದು ಪರಿಚಯ ಪತ್ರ ಎಂಬ ಭಾವನೆ ಶಿಷ್ಯರಲ್ಲಿತ್ತು.

ಇಂತಹ ಪರಿಸ್ಥಿತಿಯಲ್ಲಿ ಸ್ವಾಮೀಜಿ ಮದ್ರಾಸಿನಲ್ಲಿದ್ದ ತನ್ನೊಬ್ಬ ಶಿಷ್ಯನಿಗೆ ಬರೆದ ಪತ್ರ, ಅವರ ಎದೆಗಾರಿಕೆಯನ್ನು ತೋರಿಸುತ್ತದೆ.

''ನಾನು ಇಂಡಿಯಾ ದೇಶದಿಂದ ಹೊರಡುವುದಕ್ಕೆ ಮುಂಚೆ ಕಟ್ಟಿದ ಕನಸುಗಳೆಲ್ಲಾ ಈಗ ಮಾಯವಾಗಿವೆ.. ಈ ದೇಶವನ್ನು ಬಿಟ್ಟು ಇಂಡಿಯಾ ದೇಶಕ್ಕೆ ಹಿಂತಿರುಗಬೇಕೆಂದು ಮೂರು ಸಲ ಮನಸ್ಸು ಮಾಡಿದೆನು. ಆದರೆ ಈಗ ಹೋಗುವುದಿಲ್ಲವೆಂದು ಶಪಥ ಮಾಡಿರುವೆನು. ದೇವರೇ ನನಗೆ ಅಪ್ಪಣೆ ಮಾಡಿರುವನು. ನನಗೆ ದಾರಿಕಾಣದೆ ಇರಬಹುದು. ಆದರೆ ಕಣ್ಣಿಗೆ ಎಲ್ಲವೂ ಕಾಣುತ್ತದೆ. ಸಾಯಲಿ ಬದುಕಲಿ ಹಿಡಿದುದನ್ನು ಬಿಡುವುದಿಲ್ಲ.'' *('ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆ', ಸ್ವಾಮಿ ಸೋಮನಾಥಾನಂದಜಿ, ಪು.೧೮೯, ೧೯ ನೇ ಮುದ್ರಣ ೨೦೧೮)*

### ಬಾಸ್ಟನ್ ನಗರಕ್ಕೆ

ಸರ್ವಧರ್ಮ ಸಮ್ಮೇಳನಕ್ಕೆ ಇನ್ನೂ ಬಹಳಷ್ಟು ದಿನಗಳಿತ್ತು. ಸ್ವಾಮೀಜಿಯವರ ಕೈಯಲ್ಲಿದ್ದ ಹಣವೆಲ್ಲಾ ಖರ್ಚಾಗುತ್ತಿತ್ತು. ಚಿಕಾಗೋ ಬಹಳ ದುಬಾರಿ ನಗರವಾಗಿದ್ದುದರಿಂದ, ಬಹಳ ಕಡಿಮೆ ಖರ್ಚಿನಿಂದ ಇರಲು ಬಾಸ್ಟನ್ ನಗರಕ್ಕೆ ರೈಲಿನಲ್ಲಿ ಹೊರಟರು. ಅವರು ಕುಳಿತ ಬೋಗಿಯಲ್ಲಿದ್ದ ಮಿಸ್ ಕೇಟ್ ಸ್ಯಾನ್ ಬಾರ್ನ್ ಎಂಬ ಮಹಿಳೆ ಸ್ವಾಮೀಜಿಯವರ ವ್ಯಕ್ತಿತ್ವದಿಂದ ಪ್ರಭಾವಿತಳಾಗಿ ಅವರನ್ನು ಮಾತಾಡಿಸಿದಳು, ಮತ್ತು ಅವರನ್ನು ತನ್ನ ಮನೆಗೆ ಆಹ್ವಾನಿಸಿದಳು. ಸ್ವಾಮೀಜಿ ಅವಳ ಆಹ್ವಾನವನ್ನು ಸ್ವೀಕರಿಸಿ ಬಾಸ್ಟನ್ನಿನಲ್ಲಿ ಇರುವಾಗ ಅವಳ ಮನೆಯಲ್ಲೇ ತಂಗಿದ್ದರು. ಅಲ್ಲಿ ಅವಳ ಸ್ನೇಹಿತರ ಪರಿಚಯವಾಯಿತು.

ಬಾಸ್ಟನಿನಲ್ಲಿ ಸ್ವಾಮೀಜಿ ಅಲ್ಲಲ್ಲಿ ಭಾಷಣ ಮಾಡುತ್ತ ಭಾರತದ ಆಚಾರ, ವಿಚಾರ, ಹಿಂದೂಧರ್ಮ, ಸ್ತ್ರೀಯರು, ಮಕ್ಕಳು ಮೊದಲಾದ ವಿಷಯಗಳ ಮೇಲೆ ಹೇಳುತ್ತಿದ್ದರು. ಜನರು ಬಹಳ ಉತ್ಸಾಹದಿಂದ ಅವರ ಮಾತುಗಳನ್ನು ಕೇಳುತ್ತಿದ್ದರು. ಇಂತಹ ಒಂದು ಸಂದರ್ಭದಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯದ ಪ್ರೊಫೆಸರ್ ಜಾನ್ ಹೆನ್ರಿ ರೈಟ್ ಅವರ ಪರಿಚಯವಾಯಿತು. ಪ್ರೊ.ರೈಟ್ ಸ್ವಾಮೀಜಿಯವರನ್ನು ತನ್ನ ಮನೆಗೆ ಆಮಂತ್ರಿಸಿ ಕೆಲವು ಗಂಟೆಗಳ ಕಾಲ ಮಾತಾಡಿದರು. ಪ್ರೊ. ರೈಟ್ ಅವರ ಬೇಡಿಕೆಯಂತೆ, ಸ್ವಾಮೀಜಿ ಅಲ್ಲಿಯ ಚರ್ಚಿನಲ್ಲಿ ಉಪನ್ಯಾಸ ಮಾಡಿದರು. ಅಲ್ಲಿಗೆ ಬಂದಿದ್ದ ಪತ್ರಿಕಾ ಪ್ರತಿನಿಧಿಗಳು ತಮ್ಮ ಪತ್ರಿಕೆಗಳಲ್ಲಿ ಅವರ ಮಾತುಗಳನ್ನು ಬರೆಯುತ್ತಿದ್ದರು.

ಸ್ವಾಮೀಜಿಯ ಮಾತಿನ ಮೋಡಿಗೆ ಒಳಗಾದ ಪ್ರೊ. ರೈಟ್, ತನ್ನ ಇಡೀ ದೇಶಕ್ಕೆ ಸ್ವಾಮೀಜಿಯನ್ನು ಪರಿಚಯಿಸಬೇಕು, ಅವರ ಮಾತನ್ನು ತಮ್ಮ ಜನ ಕೇಳಬೇಕೆಂದು ಬಯಸಿದರು. ವಿಶ್ವಧರ್ಮ ಸಮ್ಮೇಳನದಲ್ಲಿ ಅವರು ಮಾತಾಡಬೇಕೆಂದೂ ಕೇಳಿಕೊಂಡರು. ಅದಕ್ಕೆ ಸ್ವಾಮೀಜಿ, ತನ್ನ ಉದ್ದೇಶವೂ ಅದೇ ಆಗಿದ್ದರೂ, ತನ್ನಲ್ಲಿ ಪರಿಚಯ ಪತ್ರವಿಲ್ಲ; ಸಮ್ಮೇಳನದ ಕಮಿಟಿಯವರು ರುಜುವಾತು ಪತ್ರ ಕೇಳುತ್ತಾರೆ ಎಂದರು. ಅದಕ್ಕೆ ಪ್ರೊ. ರೈಟ್, ''ಸ್ವಾಮೀಜಿ, ನಿಮ್ಮಿಂದ ರುಜುವಾತು ಕೇಳುವುದು ಮತ್ತು ಸೂರ್ಯನಿಗೆ



**ಪ್ರೊ . ಜಾನ್ ಹೆನ್ರಿ ರೈಟ್**

'ನಿನ್ನನ್ನು ಯಾರು ಬೆಳಗುವಂತೆ ಹೇಳಿದರು' ಎಂದು ಕೇಳುವುದು ಎರಡೂ ಒಂದೆ. ನಿಮ್ಮನ್ನು ವಿಶ್ವಧರ್ಮ ಸಮ್ಮೇಳನದ ಸದಸ್ಯರನ್ನಾಗಿ ಮಾಡುವ ಹೊಣೆ ನನ್ನದು'' ಎಂದರು. ಸ್ವಾಮೀಜಿ ಕೈಯಲ್ಲಿ ಒಂದು ಪರಿಚಯ ಪತ್ರ ಕೊಟ್ಟು ಚಿಕಾಗೋ ನಗರಕ್ಕೆ ಹೋಗುವ ರೈಲಿನ ಟಿಕೇಟನ್ನೂ ತೆಗೆದುಕೊಟ್ಟರು. ತನ್ನ ಇತರ ಸ್ನೇಹಿತರಿಗೂ ಪರಿಚಯ ಪತ್ರಗಳನ್ನು ಬರೆದುಕೊಟ್ಟರು. ಪರಿಚಯ ಪತ್ರದಲ್ಲಿ ಪ್ರೊ. ರೈಟ್ ಹೀಗೆ ಬರೆದಿದ್ದರು: ''ಸ್ವಾಮೀಜಿಯವರು ನಮ್ಮಂತಹ ಎಲ್ಲಾ ಪ್ರೊಫೆಸರ್‌ಗಳನ್ನು ಒಟ್ಟಿಗೆ ಸೇರಿಸಿದರೂ ಮೀರಿ ತೂಗುವ ವಿದ್ವಾಂಸರು.''

### ಚಿಕಾಗೋದಲ್ಲಿ

ಸ್ವಾಮೀಜಿ ರೈಲಿನಲ್ಲಿ ಚಿಕಾಗೋ ತಲುಪಿದಾಗ, ವಿಶ್ವಧರ್ಮ ಸಮ್ಮೇಳನ ನಡೆಯುವ ಸ್ಥಳದ ವಿಳಾಸ ಕಳೆದುಕೊಂಡರು. ರೈಲ್ವೆ ಸ್ಟೇಷನ್ನಿನಲ್ಲಿ ವಿಶ್ವಧರ್ಮ ಸಮ್ಮೇಳನ ನಡೆಯುವ ಸ್ಥಳದ ವಿಳಾಸ ವಿಚಾರಿಸಿದಾಗ, ಅದು ಯಾರಿಗೂ ತಿಳಿದಿರಲಿಲ್ಲ. ಆ ಅಪರಿಚಿತ ಸ್ಥಳದಲ್ಲಿ ತಂಗಲು ವ್ಯವಸ್ಥೆ ಇಲ್ಲದೆ, ಅಲ್ಲಿಯ ರೈಲು ನಿಲ್ದಾಣದ ಒಂದು ಖಾಲಿ ಪೆಟ್ಟಿಗೆಯೊಳಗೆ ಮಲಗಿ ರಾತ್ರಿ ಕಳೆದರು.

ಮರುದಿನ, ಅಂದರೆ ಸೆಪ್ಟೆಂಬರ್ ೧೦, ವಿಶ್ವಧರ್ಮ ಸಮ್ಮೇಳನ ಆರಂಭವಾಗುವ ಒಂದು ದಿನ ಮೊದಲು, ಸ್ವಾಮಿ ವಿವೇಕಾನಂದರು ಹಸಿವೆ ಮತ್ತು ಬಳಲಿಕೆಯಿಂದ ಚಿಕಾಗೋ ನಗರದ ಬೀದಿಯಲ್ಲಿ ಆಹಾರಕ್ಕಾಗಿ ಅಲೆದರು. ಧರ್ಮ ಸಮ್ಮೇಳನ ನಡೆಯುವ ಸ್ಥಳದ ವಿಳಾಸ ವಿಚಾರಿಸಿದರು. ಯಾರಿಂದಲೂ ಉತ್ತರ ಸಿಗಲಿಲ್ಲ. ಶ್ರೀಮಂತರ ದೊಡ್ಡ ದೊಡ್ಡ ಮನೆಗಳೂ, ಉದ್ಯಾನ

ಗಳೂ ಇದ್ದ ಆ ಬೀದಿಯಲ್ಲಿ, ಮಾಸಿದ, ಮುದುಡಿದ ಬಟ್ಟೆಯ ವಿಚಿತ್ರ ಉಡುಪಿನ ಭಿಕ್ಷೆ ಬೇಡುವ ಸಂನ್ಯಾಸಿಯನ್ನು ಯಾರೂ ವಿಚಾರಿಸಲಿಲ್ಲ. ಚಿಕಾಗೋದಲ್ಲಿ ಯಾರೂ ಭಿಕ್ಷೆ ಬೇಡುತ್ತಿರಲಿಲ್ಲ. ಆಹಾರ ಕೇಳಿ ಯಾವುದಾದರೂ ಮನೆಯ ಮುಂದೆ ನಿಂತರೆ ಇವರ ಮುಖಕ್ಕೆ ಬಾಗಿಲು ಹಾಕುತ್ತಿದ್ದರು. ಹಸಿವಿನಿಂದ ಬಳಲಿ ನಡೆದು, ದಣಿದು, ಕೊನೆಗೆ ಡಿಯರ್ ಬೋರ್ನ್ ಬೀದಿಯ ರಸ್ತೆ ಬದಿಯಲ್ಲಿ ದಿಣ್ಣೆಯ ಮೇಲೆ ದೇವರ ಮೇಲೆ ಭಾರ ಹಾಕಿ ಕುಳಿತರು. ಈಗ ಅಲ್ಲಿ ಸಂತ ಕ್ರಿಸೊಸ್ಟಾಮ್ ಚರ್ಚ್ ಇದೆ.

### ಹೇಲ್ ಕುಟುಂಬ

ಸ್ವಾಮೀಜಿ ಕುಳಿತಿದ್ದ ಸ್ಥಳದ ಎದುರುಗಡೆ ರಸ್ತೆಯ ಇನ್ನೊಂದು ಬದಿಯಲ್ಲಿ ಒಂದು ದೊಡ್ಡ ಮನೆ ಇತ್ತು. ಸ್ವಲ್ಪ ಹೊತ್ತಿನಲ್ಲೇ ಆ ಮನೆಯ ಮುಂಬಾಗಿಲು ತೆರೆಯಲ್ಪಟ್ಟಿತು. ಅಲ್ಲಿಂದ ಒಬ್ಬ ಗೌರವಾನ್ವಿತ ಮಹಿಳೆ ಹೊರಬಂದು, ನೇರವಾಗಿ ಸ್ವಾಮೀಜಿ ಬಳಿ ಸಾರಿ, ''ತಾವು ವಿಶ್ವಧರ್ಮ ಸಮ್ಮೇಳನಕ್ಕೆ ಬಂದಿರುವ ಸದಸ್ಯರೆ?'' ಎಂದು ವಿಚಾರಿಸಿದಳು. ಸ್ವಾಮೀಜಿ ತನ್ನ ಸಮಸ್ಯೆಯನ್ನು ಆಕೆಯಲ್ಲಿ ಹೇಳಿದಾಗ, ಆಕೆ ಸ್ವಾಮೀಜಿಯನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ''ತಾವು ಸ್ನಾನ ಊಟಾದಿಗಳನ್ನು ಮುಗಿಸಿ, ವಿಶ್ರಾಂತಿ ತೆಗೆದುಕೊಳ್ಳಿ. ಮಧ್ಯಾಹ್ನದ ಮೇಲೆ ತಮ್ಮನ್ನು ನಾನೇ ವಿಶ್ವಧರ್ಮ ಸಮ್ಮೇಳನದ ಕಛೇರಿಗೆ ಕರೆದುಕೊಂಡು ಹೋಗುತ್ತೇನೆ'' ಎಂದಳು. ಈಕೆಯೇ ಶ್ರೀಮತಿ ಎಲೆನ್ ಜಾರ್ಜ್ ಡಬ್ಲ್ಯು. ಹೇಲ್. ಈಕೆ ತನ್ನ ಪತಿ ಜಾರ್ಜ್ ಹೇಲ್ ಮತ್ತು ನಾಲ್ವರು ಹೆಣ್ಣು ಮಕ್ಕಳ ಜತೆ ಆ ಮನೆಯಲ್ಲಿ ವಾಸಿಸುತ್ತಿದ್ದಳು. ಮುಂದೆ ಸ್ವಾಮೀಜಿಯ ಅಗತ್ಯಗಳನ್ನು ಗಮನವಿಟ್ಟು ಪೂರೈಸುತ್ತಿತ್ತು ಆ ಕುಟುಂಬ. ಆ ಕುಟುಂಬದ ಸದಸ್ಯರು ಸ್ವಾಮೀಜಿಗೆ ಬಹಳ ಹತ್ತಿರದ ಸ್ನೇಹಿತರಾದರು. ಸ್ವಾಮೀಜಿ ಶ್ರೀಮತಿ ಹೇಲ್ ಅವರನ್ನು ಮದರ್ ಚರ್ಚ್ ಎಂದೂ, ಜಾರ್ಜ್ ಹೇಲ್ ಅವರನ್ನು ಫಾದರ್ ಚರ್ಚ್ ಎಂದೂ, ಅವರ ನಾಲ್ಕು ಜನ ಹೆಣ್ಣುಮಕ್ಕಳನ್ನು ಸಹೋದರಿಯರೆಂದೂ ಕರೆಯುತ್ತಿದ್ದರು. ಸ್ವಾಮೀಜಿಗೆ ಪಾಶ್ಚಾತ್ಯರಲ್ಲಿ ಹೆಚ್ಚಿನ ಬಂಧುಗಳಂತೆ ಇದ್ದ ಕುಟುಂಬ ಇದು. ಸ್ವಾಮೀಜಿ ತಮ್ಮ ಅಮೆರಿಕದ ಪ್ರವಾಸದಲ್ಲಿ ಬೇರೆ ಬೇರೆ ಪ್ರದೇಶಗಳಿಗೆ ಹೋಗಿದ್ದರೂ, ಅವರ ಮುಖ್ಯ ಕೇಂದ್ರ ಚಿಕಾಗೋ ಆಗಿತ್ತು. ಹೇಲ್ ಅವರ ಮನೆಯೇ ಮುಖ್ಯ ವಾಸಸ್ಥಳವಾಗಿತ್ತು. ಸ್ವಾಮೀಜಿಗೆ ಬರುವ ಎಲ್ಲ ಪತ್ರಗಳು ಹೇಲ್ ಅವರ ವಿಳಾಸಕ್ಕೆ ಬರುತಿದ್ದವು.

ಹೇಲ್ ಅವರ ಮನೆಯಲ್ಲಿದ್ದ ೬ ವರ್ಷದ ಪುಟ್ಟ ಹುಡುಗಿ ಆಗ್ನಿಸ್ ಇವಿಂಗ್ ಜತೆ ಸ್ವಾಮೀಜಿ ತುಂಬಾ ಸಮಯ ಕಳೆಯುತ್ತಿದ್ದರು. ಲಿಂಕನ್ ಪಾರ್ಕ್ ಒಳಗೆ ವಾಯು ವಿಹಾರಕ್ಕೆ ಹೋದಾಗ ಆ ಮಗು ಜತೆಯಲ್ಲಿರುತ್ತಿತ್ತು. ಈಕೆ ಮುಂದೆ ಸ್ವಾಮಿ ಅಖಿಲಾನಂದರ ಶಿಷ್ಯೆಯಾದಳು.

ಅದೇ ದಿನ, ಅಂದರೆ ಸೆಪ್ಟೆಂಬರ್ ೧೧ರ ಮಧ್ಯಾಹ್ನ ಶ್ರೀಮತಿ ಹೇಲ್ ಸ್ವಾಮೀಜಿಯವರನ್ನು ವಿಶ್ವಧರ್ಮ ಸಮ್ಮೇಳನ ನಡೆಯುವ ಕೇಂದ್ರಕ್ಕೆ ಕರೆದುಕೊಂಡು ಹೋದರು. ಅಲ್ಲಿ ಸ್ವಾಮೀಜಿಯವರನ್ನು ವಿಶ್ವಧರ್ಮ ಸಮ್ಮೇಳನದ ಸದಸ್ಯರನ್ನಾಗಿ ಮಾಡಲಾಯಿತು, ಮತ್ತು ಸದಸ್ಯರಿಗೆ ನಿಗದಿತವಾದ ಮನೆಗೆ ಅವರನ್ನು ಕಳುಹಿಸಲಾಯಿತು. ಆದುದರಿಂದ ಸಮ್ಮೇಳನದ ಅವಧಿಯಲ್ಲಿ ಸ್ವಾಮೀಜಿ ಲಿಯಾನ್ಸ್ ಕುಟುಂಬದ ಅತಿಥಿಯಾಗಿದ್ದರು. ಆ ಕುಟುಂಬದಲ್ಲಿ ಲಿಯಾನ್ಸ್ ದಂಪತಿಗಳಲ್ಲದೆ, ಅವರ ಮಕ್ಕಳು ಮತ್ತೊಬ್ಬ ಮೊಮ್ಮಗಳು ಇದ್ದರು. ಸಮ್ಮೇಳನ ನಡೆಯುವ ಸ್ಥಳ ಆ ಮನೆಯಿಂದ ಕೇವಲ ೬೦೦ ಗಜಗಳಷ್ಟು ದೂರದಲ್ಲಿತ್ತು. (ಈಗ ಆ ಮನೆಯನ್ನು ಕೆಡವಿ ಆ ಸ್ಥಳದಲ್ಲಿ ೨೫ ಮಹಡಿಗಳ ಹಿಲ್ಟನ್ ಚಿಕಾಗೋ ಎಂಬ ಹೋಟೆಲನ್ನು ತೆರೆಯಲಾಗಿದೆ.)

ಲಿಯಾನ್ಸ್ ದಂಪತಿಗಳ ಮೊಮ್ಮಗಳಾಗಿದ್ದ ಕಾರ್ನೆಲಿಯಾ ಸ್ವಾಮೀಜಿಯನ್ನು ತುಂಬಾ ಹಚ್ಚಿಕೊಂಡಿದ್ದಳು. ಸ್ವಾಮೀಜಿ ಆಕೆಗೆ ಕಾಡು, ಬೆಟ್ಟ, ನದಿ, ಪಶುಪಕ್ಷಿ ಬಯಲುಗಳಿಂದ ಕಂಗೊಳಿಸುವ ಭಾರತದ ಕಥೆ ಹೇಳುತ್ತಿದ್ದರು. ಇದನ್ನೆಲ್ಲಾ ಕೇಳಿ ಪುಳಕಿತಳಾದ ಆಕೆಗೆ ತಾನೊಂದು ಸ್ವಪ್ನಲೋಕದಲ್ಲಿದ್ದಂತೆ ಅನಿಸುತ್ತಿತ್ತು. ಸ್ವಾಮೀಜಿಯವರ ಪೇಟ ಆಕೆಗೆ ವಿಚಿತ್ರವಾಗಿ ಕಾಣಿಸುತ್ತಿತ್ತು. ಆಕೆಗಾಗಿ ಸ್ವಾಮೀಜಿ ತನ್ನ ಪೇಟವನ್ನು ತೆಗೆದು ಬಿಚ್ಚಿ, ಪುನಃ ಕಟ್ಟಿ ತೋರಿಸುತ್ತಿದ್ದರು.



ಜಾರ್ಜ್ ಹೇಲ್ ಶ್ರೀಮತಿ ಹೇಲ್



ಹೇಲ್ ಸಹೋದರಿಯರು

### ವಿಶ್ವ ವೇದಿಕೆ

ವಿಶ್ವ ಬೃಹತ್ ಮೇಳದ ಅಂಗವಾಗಿ ಆರ್ಟ್ ಪ್ಯಾಲೇಸ್ ಎಂಬ ಬೃಹತ್ ವಸ್ತು ಸಂಗ್ರಹಾಲಯವನ್ನು ಕಟ್ಟಲಾಯಿತು. ಇದರ ನಕ್ಷೆಯನ್ನು ನ್ಯೂಯಾರ್ಕಿನ ಪ್ರಸಿದ್ಧ ಸ್ಥಪತಿ ಚಾರ್ಲ್ಸ್ ಅಟ್‌ವುಡ್ ತಯಾರಿಸಿದ್ದರು. ಇಲ್ಲಿ ಪ್ರಪಂಚದ ಅತಿ ಶ್ರೇಷ್ಠವಾದ ಬೆಲೆ ಕಟ್ಟಲಾಗದ ಕಲಾಕೃತಿಗಳನ್ನು ಈಗಲೂ ಕಾಣಬಹುದು. ಈ ಕಟ್ಟಡ ಕ್ರಮೇಣ ಅಟ್‌ವುಡ್ ಪ್ಯಾಲೇಸ್ ಎಂದು ಕರೆಯಲ್ಪಟ್ಟು, ಈಗ ಅದನ್ನು ವಿಜ್ಞಾನ ಮತ್ತು ತಂತ್ರಜ್ಞಾನದ ಸಂಗ್ರಹಾಲಯ (Museam of Science and Industry) ಎಂದು ಕರೆಯುತ್ತಾರೆ. ಇಲ್ಲಿ ಹಾಲ್ ಆಫ್ ಕೊಲಂಬಸ್‌ಎಂದು ಕರೆಯಲ್ಪಡುವ ಒಂದು ಬೃಹತ್ ಸಭಾಂಗಣ ಇತ್ತು . ಆ ಸಭಾಂಗಣದಲ್ಲಿ ೪೦೦೦ ಜನ ಕುಳಿತುಕೊಳ್ಳುವ ವ್ಯವಸ್ಥೆ ಇತ್ತು. ಇಲ್ಲೇ ವಿಶ್ವಧರ್ಮ ಸಮ್ಮೇಳನ ನಡೆದಿತ್ತು. ಅಮೆರಿಕದಲ್ಲಿ ಸ್ವಾಮೀಜಿಯವರ ಪ್ರಥಮ ಪ್ರವಚನ ಇದೇ ಸಭಾಂಗಣದಲ್ಲಿತ್ತು . ಆ ಪ್ರವಚನವೇ ಸ್ವಾಮೀಜಿಯವರನ್ನು ವಿಶ್ವವಿಖ್ಯಾತರನ್ನಾಗಿ ಮಾಡಿರುವುದು. ಸ್ವಾಮೀಜಿ ಅದೇ ಸಭಾಂಗಣದಲ್ಲಿ ಹಲವಾರು ಉಪನ್ಯಾಸಗಳನ್ನು ಕೊಟ್ಟಿದ್ದಾರೆ.

ಕಾಲಕ್ರಮದಲ್ಲಿ ಅಂದರೆ ಈ ೧೨೫ ವರ್ಷಗಳಲ್ಲಿ ಈ ಕಟ್ಟಡ ಕೆಲವು ಬಾರಿ ಜೀರ್ಣೋದ್ಧಾರಗೊಂಡು ಹಾಲ್ ಆಫ್ ಕೊಲಂಬಸ್ ಇದ್ದ ಸ್ಥಳದಲ್ಲಿ ಈಗ ಫುಲ್ಲರ್‌ಟನ್ ಸಭಾಂಗಣ ಇದೆ. ಇಲ್ಲಿ ಉಪನ್ಯಾಸಕರ ವೇದಿಕೆ ಮತ್ತು ಸಭಿಕರ ಗ್ಯಾಲರಿ ಇದೆ. ೧೮೯೩ರ World Columbian Exposition ನಡೆಸುವ ಸಿದ್ಧತೆಗಳನ್ನು ಮೂರು ವರ್ಷಕ್ಕೆ ಮೊದಲೇ ಆರಂಭಿಸಿದ್ದರೂ, ಕ್ರೈಸ್ತಧರ್ಮ ಅಲ್ಲದೆ ಬೇರೆ ಧರ್ಮಗಳ ಅರಿವು ಇಲ್ಲದ ವ್ಯವಸ್ಥಾಪಕರಿಗೆ, ಸರ್ವಧರ್ಮ ಸಮ್ಮೇಳನದ ಉದ್ದೇಶವು ಕ್ರೈಸ್ತಧರ್ಮದ ಹಿರಿಮೆಯನ್ನು ಜಗತ್ತಿಗೆ ಸಾರುವುದೇ ಆಗಿತ್ತು. ಆದರೆ ವ್ಯವಸ್ಥಾಪಕರಲ್ಲಿ ಕೆಲವರು ಉದಾರದೃಷ್ಟಿಯುಳ್ಳವರಿದ್ದರು. ಅವರಲ್ಲಿ ಚಾರ್ಲ್ಸ್ ಕ್ಯಾರಲ್ ಎಂಬ ವಕೀಲರು ಶಾಂತ ಸ್ವಭಾವದ ವಿದ್ವಾಂಸರು. ಅವರ ದೃಷ್ಟಿಯಲ್ಲಿ ಸರ್ವಧರ್ಮ ಸಮ್ಮೇಳನವು ಹಿರಿಯ ಧರ್ಮಗಳ ಮಧ್ಯೆ ಸ್ನೇಹಸಂಪರ್ಕ ಬೆಳೆಸುವುದಾಗಿತ್ತು . ಜಗತ್ತಿನ ಪ್ರಮುಖ ಮಹಾಧರ್ಮಗಳಾದ ಸನಾತನ ಹಿಂದೂಧರ್ಮ, ಜೈನಧರ್ಮ, ಬೌದ್ಧ ಧರ್ಮ, ಕನ್‌ಫ್ಯೂಶಿಯಸ್, ಶಿಂಟೋ ಧರ್ಮ, ಝುರತುಷ್ಟ ಧರ್ಮ, ಕ್ರೈಸ್ತಧರ್ಮ, ಇಸ್ಲಾಂ ಧರ್ಮ ಮತ್ತು ಬ್ರಹ್ಮ ಸಮಾಜದವರು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಡಾ. ಅನ್ನಿ ಬೆಸೆಂಟ್ ಥಿಯಾಸಫಿಕಲ್ ಸೊಸೈಟಿಯನ್ನು ಪ್ರತಿನಿಧಿಸಿದ್ದರು.

೧೮೯೩, ಸೆಪ್ಟೆಂಬರ್ ೧೧ರ ಬೆಳಿಗ್ಗೆ ಸಮ್ಮೇಳನದಲ್ಲಿ ಭಾಗವಹಿಸುವ ಪ್ರತಿನಿಧಿಗಳನ್ನು ಒಂದು ದೊಡ್ಡ ಮೆರವಣಿಗೆಯಲ್ಲಿ ಕರೆತಂದು, ವೇದಿಕೆ ಮೇಲೆ ಕುಳ್ಳರಿಸಿದ್ದರು. ನಾಲ್ಕು ಸಾವಿರಕ್ಕೂ ಮಿಕ್ಕಿ ಸುಶಿಕ್ಷಿತ ಸ್ತ್ರೀಪುರುಷರು ಸಭಾಂಗಣದ ಗ್ಯಾಲರಿಯಲ್ಲಿ ಆಸೀನರಾಗಿದ್ದರು. ಸ್ವಾಮಿ ವಿವೇಕಾನಂದರು ಇತರ ಪ್ರತಿನಿಧಿಗಳ ಜತೆ ವೇದಿಕೆಯಲ್ಲಿ ಕುಳಿತಿದ್ದರು. ಅಲ್ಲಿ ಸೇರಿದ ಹತ್ತು ಮಹಾಧರ್ಮಗಳ ಪ್ರತೀಕವಾಗಿ ಸ್ವಾತಂತ್ರ್ಯದ ಘಂಟೆ (Liberty Bell) ಹತ್ತು ಸಲ ಬಾರಿಸಿದಾಗ ಸಮ್ಮೇಳನ ವಿಧ್ಯುಕ್ತವಾಗಿ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಆ ದಿನ ಮಾತನಾಡುವವರನ್ನು ಸಭೆಗೆ ಪರಿಚಯಿಸಿದ ಬಳಿಕ ಒಬ್ಬೊಬ್ಬರೇ ತಮ್ಮ ಧರ್ಮದ ಬಗ್ಗೆ ಮಾತಾಡಿದರು. ತಮ್ಮ ಧರ್ಮವೇ ಶ್ರೇಷ್ಠ ಎಂದು ಪ್ರತಿಪಾದಿಸಿದರು. ಅವರೆಲ್ಲಾ ಅಲ್ಲಿ ಮಾತಾಡಲು ಸರ್ವಸಿದ್ಧತೆಯಿಂದ ಬಂದಿದ್ದರು. ಆದರೆ ಸ್ವಾಮೀಜಿ ಯಾವ ಸಿದ್ಧತೆಯನ್ನೂ ಮಾಡಿರಲಿಲ್ಲ. ಅಷ್ಟೊಂದು ದೊಡ್ಡದಾದ ವಿದ್ಯಾವಂತ ಜನಸ್ತೋಮವನ್ನು ಅವರೆಂದೂ ನೋಡಿರಲಿಲ್ಲ. ಬೆಳಗಿನ ಹೊತ್ತು ಸ್ವಾಮೀಜಿ ಸಭೆಯನ್ನು ಉದ್ದೇಶಿಸಿ ಮಾತಾಡಲಿಲ್ಲ. ಮಧ್ಯಾಹ್ನದ ಬಳಿಕ ಡಾ. ಬರೋಸ್, ಸ್ವಾಮೀಜಿಯವರನ್ನು ಸಭೆಗೆ ಪರಿಚಯಿಸಿದರು. ಸ್ವಾಮೀಜಿ ಎದ್ದು ನಿಂತು, ಮನಸ್ಸಿನಲ್ಲೇ ದೇವಿ ಶಾರದೆಗೆ ವಂದಿಸಿ ಸಭೆಯನ್ನೊಮ್ಮೆ ವೀಕ್ಷಿಸಿ, ತಮ್ಮ ಮಾತನ್ನು ಆರಂಭಿಸಿದರು.

### ಸ್ವಾಮೀಜಿ ಭಾಷಣ

**''ಅಮೆರಿಕದ ಸಹೋದರಿಯರೆ ಮತ್ತು ಸಹೋದರರೆ''** ಎಂದು ತಮ್ಮ ಭಾಷಣವನ್ನು ಆರಂಭಿಸಿದರು. ಅವರು ಸಭಿಕರನ್ನು ಉದ್ದೇಶಿಸಿದ ರೀತಿ ಸಭಾಸದರ ಹೃದಯವನ್ನು ತಟ್ಟಿತು. ಸಭಿಕರೆಲ್ಲಾ ಎದ್ದುನಿಂತು ಕರತಾಡನ ಮಾಡುತ್ತಾ ಜಯಘೋಷ ಮಾಡಿದರು. ಎರಡು ನಿಮಿಷಗಳ ಕಾಲ ಕರತಾಡನವಾಯಿತು. ಅಲ್ಲಿಯವರೆಗೆ ಯಾರೂ ತಮ್ಮ ಭಾಷಣವನ್ನು ಆರಂಭಿಸುವಾಗ 'ಸಹೋದರ ಸಹೋದರಿಯರೆ' ಎಂದು ಸಂಬೋಧಿಸಿರಲಿಲ್ಲ. ಅಪರಿಚಿತ ಭಾರತದಿಂದ ಬಂದಿರುವ, ಈ ಅಪರಿಚಿತ ಮಹಾಶಯ ತಮ್ಮನ್ನು 'ಸಹೋದರ, ಸಹೋದರಿಯರೆ' ಎಂದು ಸಂಬೋಧಿಸಬೇಕಾದರೆ, ಅವರ ಹೃದಯದಲ್ಲಿ ಜನಸಾಮಾನ್ಯರ ಮೇಲೆ ಎಷ್ಟೊಂದು ಪ್ರೀತಿ ಇದ್ದಿರಬೇಕು, ಅವರ ಹೃದಯವಂತಿಕೆ ಎಷ್ಟೊಂದು ವಿಶಾಲವಾಗಿರಬೇಕು ಎಂಬುದರ ಅರಿವಾಯಿತು. ಎರಡು ನಿಮಿಷಗಳ ಬಳಿಕ ಸಭಿಕರೆಲ್ಲಾ ಆಸೀನರಾಗಿ, ನಿಶ್ಶಬ್ದ ನೆಲೆಗೊಂಡ ಬಳಿಕ ಸ್ವಾಮೀಜಿ ತಮ್ಮ ಕಂಚಿನ ಕಂಠದಿಂದ ಭಾಷಣ ಮುಂದುವರೆಸಿದರು.

ಹದಿನೈದು ನಿಮಿಷಗಳ ಕಾಲದ ತಮ್ಮ ಭಾಷಣದಲ್ಲಿ ಅವರು ತಮಗೆ ಪ್ರೀತಿಪೂರ್ವಕವಾಗಿ ಕೊಟ್ಟ ಸ್ವಾಗತಕ್ಕೆ ಸಂತೋಷದಿಂದ ಕೃತಜ್ಞತೆ ಸಲ್ಲಿಸಿದರು. ಪ್ರಪಂಚದ ಅತ್ಯಂತ ಪ್ರಾಚೀನ ಸಂನ್ಯಾಸಿಗಳ ಸಂಘದ ಪರವಾಗಿ, ವಿವಿಧ ಧರ್ಮಗಳ ಪರವಾಗಿ, ಭಾರತದ ಎಲ್ಲಾ ವರ್ಗಗಳ, ಎಲ್ಲಾ ಪಂಗಡಗಳ ಕೋಟಿ ಕೋಟಿ ಭಾರತೀಯರ ಪರವಾಗಿ ಕೃತಜ್ಞತೆ ಸಲ್ಲಿಸಿದರು. ವೇದಿಕೆಯಲ್ಲಿ ಅವರಿಗಿಂತ ಮೊದಲು ಮಾತಾಡಿದವರಿಗೂ ಕೃತಜ್ಞತೆ ಸಲ್ಲಿಸಿದರು. ''ಎಲ್ಲ ಧರ್ಮಗಳೂ ಸತ್ಯ, ಎಲ್ಲ ಧರ್ಮಗಳೂ ಸ್ವೀಕಾರಯೋಗ್ಯ ಎಂದು ಸಾರುವ ಧರ್ಮಕ್ಕೆ ನಾನು ಸೇರಿದವನು ಎಂದು ಹೇಳಲು ಹೆಮ್ಮೆ ಎನಿಸುತ್ತದೆ'' ಎಂದ ಸ್ವಾಮೀಜಿ, ''ರೋಮನ್ ಚಕ್ರವರ್ತಿಯ ದೌರ್ಜನ್ಯದಿಂದ ಪಾರಾಗಲು, ಅಲ್ಲಿಂದ ಓಡಿ ಬಂದ ಯೆಹೂದ್ಯರಿಗೂ, ಝುರತುಷ್ಟ್ರನ ರಾಷ್ಟ್ರದಿಂದ ನಿರಾಶ್ರಿತರಾಗಿ ಬಂದ



ಪಾರ್ಸಿಗಳಿಗೂ ಹೀಗೆ ಎಲ್ಲಾ ಜನಾಂಗದ, ಎಲ್ಲಾ ಧಾರ್ಮಿಕ ಪಥಗಳಲ್ಲಿ ದೌರ್ಜನ್ಯಕ್ಕೆ ಒಳಗಾಗಿ ನಿರಾಶ್ರಿತರಾದವರಿಗೂ ಆಶ್ರಯ ಕೊಟ್ಟ ದೇಶಕ್ಕೆ ಸೇರಿದವನು ತಾನು ಎನ್ನುವುದು ಹೆಮ್ಮೆ'' ಎಂದರು.

ಅನಂತರ ಸ್ವಾಮೀಜಿ ತಾನು ಬಾಲ್ಯದಲ್ಲಿ ಕಲಿತು ಅರ್ಥೈಸಿಕೊಂಡ ಶ್ಲೋಕವನ್ನು ಹೇಳಿದರು. ''ಬೇರೆ ಬೇರೆ ಕಡೆಗಳಲ್ಲಿ ಹುಟ್ಟಿದ ನದಿಗಳು ಕೊನೆಗೆ ಸಾಗರವನ್ನು ಸೇರುವಂತೆ ಹೇ ಭಗವಂತ, ಮಾನವರು ಅವರವರ ಸಂಸ್ಕಾರಗಳಿಗೆ ತಕ್ಕಂತೆ ಬೇರೆ ಬೇರೆ ದಾರಿಗಳಲ್ಲಿ ನಿನ್ನನ್ನೇ ಸೇರುವರು'', ಎಂದು ಹೇಳಿ, ಮುಂದುವರಿಸುತ್ತಾ, ''ಯಾರೇ ಆಗಲಿ, ಯಾವುದೇ ರೂಪದಲ್ಲಿರಲಿ, ನನ್ನ ಬಳಿಗೆ ಬಂದರೆ, ನಾನು ಅವರನ್ನು ಸ್ವೀಕರಿಸುತ್ತೇನೆ ಎಂದ ಗೀತಾಚಾರ್ಯನ ಮಾತನ್ನು ಜಗತ್ತಿಗೆ ಸಾರಲು ಈ ಸಭೆಯೊಂದೇ ಸಾಕು'' ಎಂದರು. ಕೊನೆಗೆ ಸ್ವಾಮೀಜಿ ವಿಶ್ವಧರ್ಮ ಸಮ್ಮೇಳನದ ಆರಂಭವನ್ನು ಘೋಷಿಸಿದ ಘಂಟಾನಾದವು ಮತೀಯ ಮನಸ್ತಾಪಗಳ ಅಂತ್ಯಕ್ರಿಯೆಯನ್ನು ಸೂಚಿಸುವ ಘಂಟಾನಾದವಾಗಲಿ ಎಂದು ಹಾರೈಸಿದರು.

ಸ್ವಾಮೀಜಿ ಮಾತನಾಡುವುದಕ್ಕೆ ಮೊದಲು ಮಾತಾಡಿದ ಪ್ರತಿನಿಧಿಗಳು ತಮ್ಮ ತಮ್ಮ ಮತಗಳೇ ಶ್ರೇಷ್ಠ ಎಂದು ಹೇಳಿಕೊಳ್ಳುತ್ತಿದ್ದರು. ಸ್ವಾಮೀಜಿಯ ಕಂಠದ ಸಿಂಹನಾದದಿಂದ ಸಭಾಸದಸ್ಯರು ಪುಳಕಿತರಾದರು. ಎಲ್ಲ ಧರ್ಮಗಳೂ ಸತ್ಯ ಎಂದೂ, ಎಲ್ಲ ಧರ್ಮಗಳನ್ನೂ ಹಿಂದೂಧರ್ಮ ಗೌರವಿಸುತ್ತದೆ ಎಂದೂ, ಹಿಂದೂ ಧರ್ಮವನ್ನು ಸಭೆಗೆ ಪರಿಚಯಿಸಿದರು. ಸ್ವಾಮೀಜಿಯವರ ಭಾಷಣ, ಸಭೆಗೆ ಮೆಚ್ಚುಗೆಯಾಯಿತು. ಇದ್ದಕ್ಕಿದ್ದಂತೆ ಸ್ವಾಮೀಜಿ ಪ್ರಖ್ಯಾತರಾದರು. ವೃತ್ತಪತ್ರಿಕೆಗಳಲ್ಲೆಲ್ಲಾ ಅವರ ಭಾವಚಿತ್ರ ಮತ್ತು ಉಪನ್ಯಾಸದ ವರ್ಣನೆಗಳು ತುಂಬಿದವು.

### ಭಾಷಣದ ಪ್ರಭಾವ

''ಸ್ವಾಮಿ ವಿವೇಕಾನಂದರು ವೇದಿಕೆ ಮೇಲೆ ಬಂದಾಗ, ಒಮ್ಮೆಲೆ ಸಭೆ ನಿಶ್ಶಬ್ದವಾಯಿತು. 'ಈತ ಎಷ್ಟು ಸುಂದರನಾಗಿದ್ದಾನೆ' ಎಂದು ಯಾರೋ ಉದ್ಗರಿಸಿರುವುದು ನನಗೆ ಕೇಳಿಸಿತು. ಹೌದು, ನಿಜವಾಗಿಯೂ ಎಷ್ಟು ಸ್ಫುರದ್ರೂಪಿ, ಎಷ್ಟು ದಿವ್ಯ'' ಎಂದಿದ್ದಾರೆ, ಸಿಸ್ಟರ್ ಕ್ರಿಸ್ಟೈನ್.

ಸ್ವಾಮೀಜಿಯವರನ್ನು ಪರಿಚಯಿಸಿಕೊಳ್ಳಲು ಅವರನ್ನು ತಮ್ಮ ಮನೆಗೆ ಆಹ್ವಾನಿಸಲು ಜನರು ಪೈಪೋಟಿ ಮಾಡಿದರು. ಎಲ್ಲರ ಬಾಯಿಯಲ್ಲಿ ಅವರದೇ ವರ್ಣನೆ. ಸ್ವಾಮೀಜಿಯವರನ್ನು ಸಭೆಯಲ್ಲಿ ಕಣ್ಣಾರೆ ಕಂಡ ಡಾ. ಅನ್ನಿ ಬೆಸೆಂಟರು ಸ್ವಾಮೀಜಿ ಬಗ್ಗೆ ಹೀಗೆ ಹೇಳಿದರು. ''ಅವರೊಬ್ಬ ಯೋಧ ಸಂನ್ಯಾಸಿ, ಅವರ ವ್ಯಕ್ತಿತ್ವದಲ್ಲಿ ದೇಶಾಭಿಮಾನ ತುಂಬಿತುಳುಕುತ್ತಿದೆ. ಮತಗಳಲ್ಲಿ ಪ್ರಾಚೀನವಾದ ಮತದ ಪ್ರತಿನಿಧಿ, ವಯಸ್ಸಿನಲ್ಲಿ ಎಲ್ಲ ಪ್ರತಿನಿಧಿಗಳಿಗಿಂತ ಕಿರಿಯವರು. ಆದರೆ ಪ್ರತಿಭೆಯಲ್ಲಿ ಯಾರಿಗೂ ಕಡಿಮೆ ಇಲ್ಲ. ಗರ್ವಿಷ್ಠ ಪಾಶ್ಚಾತ್ಯ ದೇಶಗಳಿಗೆ ಭಾರತಮಾತೆ ತನ್ನ ಯೋಗ್ಯತಮ ಪುತ್ರನನ್ನು ದೂತನನ್ನಾಗಿ ಕಳುಹಿಸಿ ಗೌರವಾನ್ವಿತೆಯಾದಳು. ದೂತನು ತನ್ನ ಪುಣ್ಯ ಜನ್ಮಭೂಮಿಯ ಸನಾತನ ಕೀರ್ತಿಗೌರವಗಳನ್ನು ಮರೆಯದೆ, ಆಕೆಯ ಸಂದೇಶವನ್ನು ಸಾರಿದನು.''

ಅಲ್ಲಿಯ ಕೆಲವು ಪತ್ರಿಕೆಗಳು ಹೀಗೆ ಬರೆದವು. ''ಸುಂದರ ಮುಖ, ಚಿತ್ತಾಕರ್ಷಕ ವ್ಯಕ್ತಿ, ಅಮೋಘವಾದ ವಾಕ್‌ಚಾತುರ್ಯವುಳ್ಳ ಈ ವ್ಯಕ್ತಿಯೇ ಮಹಾಸಭೆಯಲ್ಲಿ ಅಗ್ರಗಣ್ಯ.'' ''ವಿಶ್ವಧರ್ಮ ಸಮ್ಮೇಳನದಲ್ಲಿ ಅವರು ನಿಸ್ಸಂಶಯವಾಗಿ ಎಲ್ಲರಿಗಿಂತ ದೊಡ್ಡ ವ್ಯಕ್ತಿ. ಅವರು ಮಾತನಾಡಿರುವುದನ್ನು ಕೇಳಿದ ಮೇಲೆ ಅವರ ವಿದ್ಯಾವಂತ ದೇಶಕ್ಕೆ ಧರ್ಮಪ್ರಚಾರಕರನ್ನು ಕಳುಹಿಸುವುದು ಮೂರ್ಖತನ ಅನಿಸುತ್ತದೆ.'' ಎಲ್ಲರ ದೃಷ್ಟಿ ಸ್ವಾಮಿ ವಿವೇಕಾನಂದರ ಮೇಲೆ. ವೇದಿಕೆಯ ಮೇಲೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋದರೆ ಸಾಕು, ಕೈ ಚಪ್ಪಾಳೆಗಳ ಸುರಿಮಳೆ. ಆದರೆ ಯಾರ ಹೊಗಳಿಕೆಯೂ ಅವರನ್ನು ಬಾಧಿಸಲಿಲ್ಲ. ಅಹಂಕಾರವೂ ಅವರ ಬಳಿ ಸುಳಿಯಲಿಲ್ಲ.

### ಸಮ್ಮೇಳನದಲ್ಲಿ ಮತ್ತಷ್ಟು ಭಾಷಣಗಳು

ಆ ಸಮ್ಮೇಳನದಲ್ಲಿ ಸ್ವಾಮೀಜಿ ಅನೇಕ ಭಾಷಣಗಳನ್ನು ಮಾಡಿದರು. ಪ್ರತಿ ಸಭೆಯಲ್ಲಿ ಅವರ ಭಾಷಣ ಕೊನೆಯದಾಗಿತ್ತು. ಸಭೆ ಮುಕ್ತಾಯವಾಗುವವರೆಗೆ ಜನರನ್ನು ಹಿಡಿದು ನಿಲ್ಲಿಸುವುದಕ್ಕೆ ವ್ಯವಸ್ಥಾಪಕರು ಮಾಡಿದ ತಂತ್ರ ಅದಾಗಿತ್ತು. ವಿವೇಕಾನಂದರ ಹದಿನೈದು ನಿಮಿಷಗಳ ಭಾಷಣ ಕೇಳಲು,

ಜನರು ೨-೩ ಗಂಟೆಗಳ ಕಾಲ ಇತರರ ಮಾತುಗಳನ್ನು ಕೇಳುತ್ತಾ ಶಾಂತವಾಗಿ ಕಾಯುತ್ತಿದ್ದರು.

ಸೆಪ್ಟೆಂಬರ್ ೧೫ರ ತಮ್ಮ ಭಾಷಣದಲ್ಲಿ ಸ್ವಾಮೀಜಿ, ಪ್ರತಿಯೊಬ್ಬನೂ ತಮ್ಮ ಧರ್ಮವೇ ಶ್ರೇಷ್ಠ ಎಂದು ಭಾವಿಸಿಕೊಂಡು, ತಮ್ಮ ತಮ್ಮಲ್ಲಿ ಒಮ್ಮತ ಇಲ್ಲದಿರುವುದನ್ನು ವಿಶದಪಡಿಸಲು, ಸಮುದ್ರದ ಕಪ್ಪೆಯೊಂದು ಬಾವಿಯಲ್ಲಿರುವ ಕಪ್ಪೆಯ ಬಳಿ ಬಂದು ಮಾತಾಡಿದ ಕತೆ ಹೇಳಿದರು.

ಸೆಪ್ಟೆಂಬರ್ ೧೯ರಂದು ಸ್ವಾಮೀಜಿ ಹಿಂದೂಧರ್ಮದ ಮೇಲೆ ಮಂಡಿಸಿದ ಪ್ರಬಂಧವನ್ನು ಕೇಳಲು ಸಹಸ್ರಾರು ಜನರು ಕಾದು ಕುಳಿತಿದ್ದರು. ಅತ್ಯಂತ ಪ್ರಚೀನವಾದ ಹಿಂದೂಧರ್ಮದ ಮುಂದೆ ಬೌದ್ಧ, ಜೈನ, ಪಾರ್ಸಿ, ಕ್ರೈಸ್ತ, ಇಸ್ಲಾಂ ಮೊದಲಾದ ಧರ್ಮಗಳೆಲ್ಲಾ ಮಕ್ಕಳಂತೆ. ಹಿಂದೂಧರ್ಮ ತನ್ನನ್ನು ನಾಶ ಮಾಡಲು ಬಂದ ಧರ್ಮಗಳನ್ನೆಲ್ಲಾ ಎದುರಿಸಿ, ಆ ಧರ್ಮಗಳಲ್ಲಿರುವ ಉತ್ತಮಾಂಶಗಳನ್ನು ಹೀರಿಕೊಂಡು ಧೃಡವಾಗಿ ನಿಂತಿದೆ. ಭಯಂಕರವಾದ ಭೂಕಂಪವಾದಾಗ ಸಾಗರದ ತೀರದಲ್ಲಿ ನೀರು ಸ್ವಲ್ಪ ಹಿಂದೆ ಸಾಗಿ, ಪುನಃ ಸಾವಿರ ಪಾಲು ವೇಗದಿಂದ ಎಲ್ಲವನ್ನೂ ಆವರಿಸುವ ಪ್ರಚಂಡ ಪ್ರವಾಹವಾಗಿ ನುಗ್ಗಿ ಬರುವಂತೆ, ಈ ಘನಗರ್ಜನೆ ನಿಂತ ಮೇಲೆ ಮೂಲಧರ್ಮವೆಂಬ ಅಗಾಧವಾದ ದೇಹ ಈ ಪಂಗಡಗಳನ್ನೆಲ್ಲಾ ಹೀರಿಕೊಂಡು ಜೀರ್ಣಿಸಿ ರಕ್ತಗತ ಮಾಡಿತು. ದೇವರೊಬ್ಬನೆ, ಆತನಿಗೆ ಬೇರೆ ಬೇರೆ ಧರ್ಮಗಳಲ್ಲಿ ಬೇರೆ ಬೇರೆ ಹೆಸರಿದೆ ಎಂದು ಅನೇಕ ಉದಾಹರಣೆಗಳನ್ನು ಕೊಟ್ಟರು.

ಪ್ರಪಂಚದ ಎಲ್ಲ ಧರ್ಮಗಳಲ್ಲೂ ದೇವರನ್ನು ನೆನಪಿಸಲು ಒಂದೊಂದು ಚಿಹ್ನೆ ಇದೆ. ಹಿಂದೂಗಳಲ್ಲಿ ವಿಗ್ರಹಾರಾಧನೆಗೆ ಅವಕಾಶವಿದೆ. ಸರ್ವವ್ಯಾಪಿಯಾದ ಪರಮಾತ್ಮನು ಎಲ್ಲರಲ್ಲೂ, ಎಲ್ಲ ಸ್ಥಳಗಳಲ್ಲೂ ಇದ್ದಾನೆ; ವಿಗ್ರಹಗಳಲ್ಲೂ ಇದ್ದಾನೆ. ವಿಗ್ರಹಗಳು ಹಿಂದುಗಳಿಗೆ ಪರಮಾತ್ಮನನ್ನು ಕುರಿತು ಚಿಂತನೆ ಮಾಡುವುದಕ್ಕೆ ಒಂದು ಆಶ್ರಯ ಅಷ್ಟೆ. ಆ ವಿಗ್ರಹವೇ ದೇವರಲ್ಲ. ವಿಗ್ರಹದ ಮೂಲಕ ಹಿಂದೂ ಆದವನು ದೇವರನ್ನು ನೋಡುವನು.

ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಹೇಳಿದ್ದಾನೆ. ''ಹಲವು ಮಣಿಗಳನ್ನು ಕೂಡಿಸುವ ಒಂದು ದಾರದಂತೆ, ನಾನು ಎಲ್ಲಾ ಧರ್ಮಗಳಲ್ಲಿಯೂ ಇರುವೆನು.''

ಹಿಂದೂಗಳಲ್ಲಿ ಇತರ ಧರ್ಮಗಳ ಮೇಲೆ ಉದಾರ ಭಾವನೆ ಇದೆ. ಎಲ್ಲಾ ಧರ್ಮಗಳೂ ಒಂದೇ ಪರಮ ಸತ್ಯದೆಡೆಗೆ ಕೊಂಡೊಯ್ಯುವ ಬೇರೆ ಬೇರೆ ಮಾರ್ಗಗಳು ಎಂದು ಹಿಂದೂಗಳು ನಂಬಿದ್ದಾರೆ ಎಂದರು.

ಸೆಪ್ಟೆಂಬರ್ ೨೦ರ ತಮ್ಮ ಪ್ರವಚನದಲ್ಲಿ ಸ್ವಾಮೀಜಿ, ಕ್ರೈಸ್ತ ಮತೀಯರಿಗೆ ಕೆಲವು ಹಿತವಚನಗಳನ್ನು ಹೇಳಿದರು. ಭಾರತಕ್ಕೆ ಬಂದ ಕ್ರೈಸ್ತಪಾದ್ರಿಗಳು ಬಡ ಭಾರತೀಯರನ್ನು ಮತಾಂತರಗೊಳಿಸುತ್ತಿದ್ದಾರೆ. ಭಾರತದಾದ್ಯಂತ ಚರ್ಚಗಳನ್ನು ಕಟ್ಟಿದ್ದಾರೆ. ಆದರೆ ಭಾರತದ ಅಗತ್ಯ ಮತಧರ್ಮಗಳಲ್ಲ. ಅದು ಭಾರತದಲ್ಲಿ ಯಥೇಚ್ಛವಾಗಿದೆ. ಭಾರತದಲ್ಲಿ , ಭಯಂಕರ ಕ್ಷಾಮದಿಂದಾಗಿ ಸಹಸ್ರಾರು ಜನರು ಹೊಟ್ಟೆಗೆ ಹಿಟ್ಟಿಲ್ಲದೆ ಸಾಯುತ್ತಿದ್ದಾರೆ. ಉಪವಾಸದಿಂದ ಸಾಯುವ ಜನರಿಗೆ ಮತಧರ್ಮವನ್ನು ಬೋಧಿಸುವುದು ಅವರಿಗೆ ಮಾಡುವ ಅವಮಾನ. ಭಾರತದ ಬಡಜನರಿಗೆ ಬೇಕಾಗಿರುವುದು ಒಂದು ತುತ್ತು ಅನ್ನ, ಧರ್ಮವಲ್ಲ. ತಮ್ಮ ಒಣಗಿದ ಗಂಟಲಲ್ಲಿ ಅವರು ಬೇಡುತ್ತಿರುವುದು ಒಂದು ತುತ್ತು ಅನ್ನ. ಆದರೆ ನೀವು, ಕ್ರೈಸ್ತರು ಅವರಿಗೆ ಸಹಾಯಮಾಡಲಿಲ್ಲ. ಅವರು ಅನ್ನ ಕೇಳಿದರೆ, ಅವರಿಗೆ ಕಲ್ಲನ್ನು ಕೊಡುವುದರಿಂದ ಏನು ಪ್ರಯೋಜನ ಎಂದರು.

ಸೆಪ್ಟೆಂಬರ್ ೨೬ರಂದು '**ಬೌದ್ಧಧರ್ಮ: ಹಿಂದೂ ಧರ್ಮದ ಸಾಫಲ್ಯ**' ಎಂಬುದರ ಮೇಲೆ ಮಾತನಾಡಿ, ಬೌದ್ಧಧರ್ಮವಿಲ್ಲದೆ ಹಿಂದೂಧರ್ಮ ಬಾಳಲಾರದು. ಬೌದ್ಧರು ಮತ್ತು ಹಿಂದೂಗಳ ನಡುವೆ ಮೂಡಿದ ಭಿನ್ನಾಭಿಪ್ರಾಯ ಭಾರತದ ಅವನತಿಗೆ ಕಾರಣವಾಯಿತು. ಆದುದರಿಂದ ಕಳೆದ ಒಂದು ಸಾವಿರ ವರ್ಷಗಳ ಕಾಲ ಭಾರತ ಆಕ್ರಮಣಕಾರರ ಗುಲಾಮಗಿರಿ ಅನುಭವಿಸಬೇಕಾಯಿತು. ವೈದಿಕ ಧರ್ಮದ ಅದ್ಭುತ ಧೀಶಕ್ತಿ ಹಾಗೂ ಮಹಾ ಆಚಾರ್ಯ ಬುದ್ಧನ ಹೃದಯ ವೈಶಾಲ್ಯ ಮತ್ತು ಅದ್ಭುತವಾದ ವಿಶ್ವಾನುಕಂಪ ಇವುಗಳು ಸಂಗಮಗೊಳ್ಳಬೇಕು ಎಂದರು.

ಸೆಪ್ಟೆಂಬರ್ ೨೭ರಂದು ವಿಶ್ವಧರ್ಮ ಸಮ್ಮೇಳನದ ಅಂತಿಮ ದಿನ. ಚಿಕಾಗೋದ ಹಾಲ್ ಆಫ್ ಕೊಲಂಬಸ್‌ನಲ್ಲಿ ಸ್ವಾಮೀಜಿ ಆ ಸಮ್ಮೇಳನದ ತಮ್ಮ ಕೊನೆಯ ಭಾಷಣ ಮಾಡಿದರು. ''ವಿಶ್ವಧರ್ಮ ಸಮ್ಮೇಳನ ಜಗತ್ತಿಗೆ ಏನಾದರೂ ತೋರಿಸಿದ್ದರೆ, ಅದು ಇದು: ಪಾವಿತ್ರ್ಯ, ಪರಿಶುದ್ಧತೆ, ದಾನ, ದಯೆ. ಇವು ಯಾವುದೋ ಒಂದು ಧರ್ಮದ ಸೊತ್ತಲ್ಲ. ಪ್ರತಿ ಧರ್ಮವೂ ಉದಾರಚರಿತರಾದ ಸ್ತ್ರೀಪುರುಷರನ್ನು ಕೊಟ್ಟಿದೆ. ಆದರೂ ಯಾರಾದರೂ ತನ್ನ ಧರ್ಮವೊಂದೇ ಉಳಿಯತಕ್ಕದ್ದು, ಇತರ ಧರ್ಮಗಳು ನಾಶವಾಗಬೇಕು ಎಂದು ಭಾವಿಸದರೆ, ಅವರ ವಿಷಯದಲ್ಲಿ ನನಗೆ ಮರುಕ ಇದೆ. ಯಾರು ಎಷ್ಟು ವಿರೋಧಿಸಿದರೂ, ಪ್ರತಿಯೊಂದು ಧರ್ಮದ ಧ್ವಜದ ಮೇಲೆ ''ಹೋರಾಟವಲ್ಲ ಸೌಹಾರ್ದ, ವಿನಾಶವಲ್ಲ ಸ್ವೀಕಾರ, ವೈಮನಸಲ್ಲ ಸಾಮರಸ್ಯ ಮತ್ತು ಶಾಂತಿ'' ಎಂದು ಬಹು ಬೇಗ ಬರೆಯಲ್ಪಡುವುದು.''

### ಇತರೆಡೆ ಭಾಷಣಗಳು

ಹರ್ಬರ್ಟ್ ರೆಸಿಡೆನ್ಸ್ ಆಫ್ ಇವೇನ್‌ಸ್ಟನ್ ಎಂಬಲ್ಲಿ ಪುನರ್ಜನ್ಮದ ಮೇಲೆ ಮಾತಾಡಿದರು. ''ತಮ್ಮ ಪೂರ್ವಜರು ಯಾರೋ ಈಗ ಪ್ರಾಣಿಗಳಾಗಿರುವವರು ಎಂದು ಹಿಂದೂಗಳು ಭಾವಿಸಿ ಪ್ರಾಣಿಹಿಂಸೆ ಮಾಡುತ್ತಿಲ್ಲ ಎಂಬ ತಪ್ಪು ಅಭಿಪ್ರಾಯ ಕೆಲವರ ಲ್ಲಿದೆ. ಪ್ರಾಣಿದಯೆ ಎಂಬುದು ಹಿಂದೂಧರ್ಮದ ಒಂದು ಸಿದ್ಧಾಂತ. ಪುನರ್ಜನ್ಮವು ಮಾನವನ ಮುಂದಿನ ಜನ್ಮದ ಉನ್ನತಿ ಅಥವಾ ಅಧೋಗತಿಯನ್ನು ಸೂಚಿಸುತ್ತದೆ ಎಂದು ಹಿಂದೂ ಧರ್ಮ ನಂಬಿದೆ'' ಎಂದರು.

ಚಿಕಾಗೋದ ಬುದ್ಧಿಜೀವಿಗಳು ಸಾಮಾನ್ಯವಾಗಿ ಸೇರುವ ಸ್ಥಳವಾದ ಹಲ್ ಹೌಸ್ ಮ್ಯೂಸಿಯಂ ಸಭಾಂಗಣದಲ್ಲಿ ಭಾರತದ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯ ಮೇಲೆ ಸ್ವಾಮೀಜಿ ಮಾತನಾಡಿದರು. ಆ ಸಭಾಂಗಣದಲ್ಲಿ ಈಗಲೂ ಸ್ವಾಮೀಜಿಯ ದೊಡ್ಡದೊಂದು ಭಾವಚಿತ್ರ ಇದೆ. ಅದರಲ್ಲಿ , ''Swami Viveka nanda(1893-1902), Indian Social Reformer Participated in World's Parliament of Religion'' ಎಂದು ಬರೆಯಲಾಗಿದೆ.

ಅಕ್ಟೋಬರ್ ತಿಂಗಳ ಕೊನೆಯಲ್ಲಿ , ಚಿಕಾಗೋದ ಮೇಲ್ವರ್ಗದವರೇ ಸದಸ್ಯರಾಗಿರುವ ಲೇಡಿಸ್ ಕ್ಲಬ್‌ನಲ್ಲಿ ಬೌದ್ಧಧರ್ಮದ ಮೇಲೆ ಮಾತಾಡಿದರು. ಪ್ರಸಿದ್ಧ ಯೂನಿಟೇರಿಯನ್ ಚರ್ಚಿನಲ್ಲಿ ಪ್ರವಚನ ಪೀಠದ ಮೇಲೆ ನಿಂತುಕೊಂಡು ಎರಡು ಭಾನುವಾರ ಮಾತಾಡಿದರು. ೧೮೯೪ರ ಮಾರ್ಚ್ ತಿಂಗಳಲ್ಲಿ ಚಿಕಾಗೋ ವಿಶ್ವ ವಿದ್ಯಾಲಯದ ಕಾಬ್ ಹಾಲ್‌ನ ಮಂದಿರದಲ್ಲಿ ೧೮೯೪ರ ಮಾರ್ಚ್ ತಿಂಗಳಲ್ಲಿ ಹಿಂದೂ ಧರ್ಮದ ಆಧುನಿಕ ಚಿಂತನೆಗಳು (Modern School of Hinudism) ಎಂಬ ವಿಷಯದ ಮೇಲೆ ಪ್ರವಚನ ಕೊಟ್ಟರು.

ಚಿಕಾಗೋದ ಫ್ಲೋರೆನ್ ಆಡಂ ಸಭಾಂಗಣದಲ್ಲಿ ನಡೆಯುವ ಸಂಗೀತ ಕೇಳಲು, ವಾದ್ಯಮೇಳ ಆಲಿಸಲು ಸ್ವಾಮೀಜಿ ಬಿಡುವು ಮಾಡಿಕೊಂಡು ಹೋಗುತ್ತಿದ್ದರು. ಇಲ್ಲಿ ೧೮೯೫ರ ಜನವರಿ ತಿಂಗಳಲ್ಲಿ ೧೬ ದಿನಗಳವರೆಗೆ ತರಗತಿಗಳನ್ನು ನಡೆಸಿ ಭಾಷಣ ಮಾಡಿದರು.

## ಗಣ್ಯ ವ್ಯಕ್ತಿಗಳೊಂದಿಗೆ

ಸ್ವಾಮೀಜಿ ಹೇಲ್ ಕುಟುಂಬದ ಮನೆಯಲ್ಲಿದ್ದಾಗ, ಲಿಂಕನ್ ಪಾರ್ಕಿಗೆ ಅಡ್ಡಾಡಲು ಹೋಗುತ್ತಿದರು. ಲಿಂಕನ್ ಪಾರ್ಕಿನ ಪೂರ್ವಕ್ಕೆ ಮಿಚಿಗನ್ ಸರೋವರವಿದೆ. ಒಂದು ಬೆಳದಿಂಗಳ ರಾತ್ರಿ ಸ್ವಾಮೀಜಿ, ಮಿಚಿಗನ್ ಸರೋವರದ ದಡದಲ್ಲಿದ್ದಾಗ ಅವರ ಮನಸ್ಸು ಪರಮಾತ್ಮನಲ್ಲಿ ಒಂದಾಗತೊಡಗಿತು. ತಕ್ಷಣವೇ ಅವರಿಗೆ ಗುರುದೇವ ಶ್ರೀರಾಮಕೃಷ್ಣರು ಕಂಡುಬಂದರು; ಸ್ವಾಮೀಜಿಯವರಿಗೆ ತಾನು ಈ ಭೂಮಿಗೆ ಬಂದ ಕಾರಣದ ನೆನಪಾಯಿತು. ಆಗ ಅವರ ಮನಸ್ಸು ಮೊದಲಿನ ಸ್ಥಿತಿಗೆ ಬಂತು.

ಚಿಕಾಗೋ ನಗರದಲ್ಲಿ ಅನೇಕ ಗಣ್ಯವ್ಯಕ್ತಿಗಳು ಸ್ವಾಮೀಜಿಯವರನ್ನು ಭೇಟಿಯಾಗಿದ್ದರು. ಅವರಲ್ಲಿ ಮೇಡಂ ಎಮ್ಮಾ ಕಾಲ್ವೆ ಒಬ್ಬರು. ಅವರು ತನ್ನ ಆತ್ಮಚರಿತ್ರೆಯಲ್ಲಿ ಜನರು ಕೇಳುವ ಪ್ರಶ್ನೆಗಳಿಗೆ ಸ್ವಾಮೀಜಿ ದೃಷ್ಟಾಂತ ಕಥೆಗಳ ಮೂಲಕ ಹೇಗೆ ಜನರ ಸಂಶಯಗಳನ್ನು ಪರಿಹರಿಸುತ್ತಿದ್ದರು ಎಂದು ಆಕೆ ಬರೆದಿದ್ದಾರೆ. ಮೇಡಂ ಕಾಲ್ವೆ ಸ್ವಾಮೀಜಿ ಬಗ್ಗೆ ಹೀಗೆ ಬರೆಯುತ್ತಾಳೆ. ''ನಿಜವಾಗಿಯೂ ಭಗವಂತನೊಂದಿಗೆ ನಡೆಯುತ್ತಿದ್ದ ವ್ಯಕ್ತಿಯ ಪರಿಚಯವಾದುದು ನನ್ನ ಒಂದು ಮಹಾ ಸೌಭಾಗ್ಯ .''




ಮೇಡಂ ಎಮ್ಮಾ ಕಾಲ್ವೆ

ಮೇಡಂ ಫ್ಲೋರೆನ್ಸ್ ಆಡಮ್ಸ್ ಬಹುಮುಖಪ್ರತಿಭೆಯ ಮಹಿಳೆ. ಚಿಕಾಗೋದ ಭಾಷಣ ತರಗತಿಗಳನ್ನು ಆಕೆಯೇ ಏರ್ಪಡಿಸುತ್ತಿದ್ದಳು. ಆಕೆಯಿದ್ದ 'ಆಡಿಟೋರಿಯಂ' ಹೋಟೆಲ್‌ನಲ್ಲಿ ಸ್ವಾಮೀಜಿ ಕ್ಲಾಸ್‌ಗಳನ್ನು ನಡೆಸುತ್ತಿದ್ದರು.



ಫ್ಲೋರೆನ್ಸ್ ಆಡಮ್ಸ್

ಜಾನ್ ಡಿ. ರಾಕ್‌ಫೆಲ್ಲರ್ ಅಮೆರಿಕದ ಭಾರಿ ಶ್ರೀಮಂತ. ಪ್ರಚಂಡ ಇಚ್ಛಾಶಕ್ತಿಯ ಮನುಷ್ಯ . ಒಂದು ದಿನ ಆತ ತನ್ನ ಸ್ನೇಹಿತನ ಮನೆಗೆ ಸ್ವಾಮೀಜಿಯನ್ನು ನೋಡಲು ಹೋದ. ಸ್ವಾಮೀಜಿ ಇದ್ದ ಕೋಣೆ ಪ್ರವೇಶಿಸಿದ. ಏನೋ ಓದುತ್ತಿದ್ದ ಸ್ವಾಮೀಜಿ, ಆತನನ್ನು ಕತ್ತೆತ್ತಿ ನೋಡಲಿಲ್ಲ, ಮಾತನಾಡಿಸಲಿಲ್ಲ. ಕೊನೆಗೆ ಸ್ವಾಮೀಜಿ ರಾಕ್‌ಫೆಲ್ಲರ್‌ಗೆ ಅಷ್ಟರವರೆಗೆ ಆತನಿಗಲ್ಲದೆ ಇನ್ನಾರಿಗೂ ತಿಳಿದಿರದ ಆತನ ಜೀವನದ ಕೆಲವು ಘಟನೆಗಳನ್ನು ಹೇಳಿದರು. ಅನಂತರ ಆತನಿಗೆ ಸ್ವಾಮೀಜಿ , ''ನೀನು ಸಂಪಾದಿಸುತ್ತಿರುವ ಅಗಾಧವಾದ ಸಂಪತ್ತು ನಿಜವಾಗಿ ನಿನಗೆ ಸೇರಿದ್ದಲ್ಲ. ನೀನು ಕೇವಲ ಒಬ್ಬ ಮಧ್ಯವರ್ತಿ ಅಷ್ಟೆ. ದೇವರು ನಿನಗೆ ಐಶ್ವರ್ಯ ಕೊಟ್ಟಿರುವುದು ನೀನು ಜನರಿಗೆ ಒಳ್ಳೆಯದನ್ನು ಮಾಡಬೇಕೆಂದು. ಪ್ರಪಂಚಕ್ಕೆ ಒಳ್ಳೆಯದನ್ನು ಮಾಡಲು ನಿನಗೆ ಒಂದು ಅವಕಾಶ ಸಿಕ್ಕಿದೆ'' ಎಂದರು.

ಸ್ವಾಮೀಜಿಯ ಮಾತು ರಾಕ್‌ಫೆಲ್ಲರ್‌ಗೆ ಹಿತವಾಗಲಿಲ್ಲ , ಅವನಿಗೆ ಸಿಟ್ಟು ಬಂತು. ಅಂದಿನವರೆಗೆ ಯಾರೂ ಆತನಿಗೆ ಈ ರೀತಿ



ಜಾನ್ ಡಿ. ರಾಕ್‌ಫೆಲ್ಲರ್

ಹೇಳಿರಲಿಲ್ಲ. ಆತನು ಯಾರ ಬುದ್ಧಿಮಾತನ್ನೂ ಕೇಳಿದವನಲ್ಲ. ಸಿಟ್ಟಿನಿಂದಲೇ ಆ ಕೋಣೆಯಿಂದ ಹೊರನಡೆದ. ಆದರೆ ಒಂದು ವಾರದ ಬಳಿಕ ಸ್ವಾಮೀಜಿಯಲ್ಲಿಗೆ ಬಂದು, ತಾನು ಒಂದು ಸಾರ್ವಜನಿಕ ಸಂಸ್ಥೆಗೆ ಮೊಟ್ಟಮೊದಲು ಮಾಡಿದ ದಾನಪತ್ರ ವೊಂದನ್ನು ಅವರ ಮೇಜಿನ ಮೇಲೆ ಎಸೆದ. ಸ್ವಾಮೀಜಿ ಅದನ್ನು ಮುಟ್ಟಿದ್ದೂ ಇಲ್ಲ; ವಂದನೆಗಳನ್ನು ಹೇಳಿದ್ದೂ ಇಲ್ಲ. ಆಗ ಆತ ಆ ದಾನಪತ್ರವನ್ನು ತೆಗೆದು, ಓದಿ ಹೇಳಿ ''ಈಗ ನೀವು ನನಗೆ ವಂದನೆ ಗಳನ್ನು ಹೇಳಬೇಕು'' ಎಂದನು. ಸ್ವಾಮೀಜಿ ಅವನತ್ತ ನೋಡಲೂ ಇಲ್ಲ. ''ನೀನು ನನಗೆ ಧನ್ಯವಾದಗಳನ್ನು ಅರ್ಪಿಸಬೇಕು'' ಎಂದರು. ದಾನಮಾಡಲು ದೇವರು ಅವಕಾಶ ಕಲ್ಪಿಸಿರುವುದನ್ನು ರಾಕ್‌ಫೆಲ್ಲರ್ ಅರ್ಥಮಾಡಿಕೊಂಡ. ಇಂದು ಆತ ಪ್ರಪಂಚ ಕಂಡ ಅತಿ ದೊಡ್ಡ ದಾನಿ ಎಂಬ ಹೆಸರು ಪಡೆದಿದ್ದಾನೆ.

ಸ್ವಾಮಿ ವಿವೇಕಾನಂದರು ಉಪನ್ಯಾಸಗಳನ್ನು ಮಾಡಿದ ಚಿಕಾಗೋದ ಆರ್ಟ್ ಪ್ಯಾಲೇಸ್‌ನಲ್ಲಿರುವ ಒಂದು ಫಲಕದ ಮೇಲೆ ಈ ರೀತಿ ಬರೆಯಲಾಗಿದೆ. ''ಈ ಸ್ಥಳದಲ್ಲಿ ೧೮೯೩ ಸೆಪ್ಟೆಂಬರ್ ೧೧ರಿಂದ ೨೭ರ ವರೆಗೆ ಅಮೆರಿಕದಲ್ಲಿ ವೇದಾಂತ ವನ್ನು ಬೋಧಿಸಿದ ಪ್ರಥಮ ಹಿಂದೂ ಸಂನ್ಯಾಸಿಗಳಾದ ಸ್ವಾಮಿ ವಿವೇಕಾನಂದರು ವಿಶ್ವಧರ್ಮ ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡಿದರು. ಅವರ ಅಭೂತಪೂರ್ವ ಯಶಸ್ಸು ಪ್ರಾಚ್ಯ ಮತ್ತು ಪಾಶ್ಚಾತ್ಯ ಧರ್ಮಗಳ ನಡುವೆ ವಿಚಾರ ವಿನಿಮಯಕ್ಕೆ ದಾರಿ ಮಾಡಿ ಕೊಟ್ಟಿತು.''

*ಗ್ರಂಥಋಣ:*


*೧. **ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆ** – ಸ್ವಾಮಿ ಸೋಮನಾಥಾನಂದ.*

*೨. **ಚಿಕಾಗೋ ಉಪನ್ಯಾಸಗಳು** – ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು.*

*3. **Swami Vivekananda and America** - Text by Prof. A.K. Mazumdar and F.W. Trembour, U.S Information Service, New Delhi.*

*4. **Chicago and Vivekananda** - a publication by Vivekananda Vedanta Society of Chicago, U.S.A.*

*5. **The American Response to the Words of Parliament of Religion,** 1893 - by Pravrajika Bramhaprana*




## ಪ್ರಲೋಭನೆ ಮತ್ತು ಸ್ವಾಮೀಜಿ

ಸ್ವಾಮೀಜಿ ಎಂಥ ಪ್ರತಾಪಪೂರ್ಣ ಮತ್ತು ಆಕರ್ಷಕ ವ್ಯಕ್ತಿಯಾಗಿದ್ದರೆಂದರೆ ಅನೇಕ ಮಹಿಳೆಯರು ಅವರಿಗೆ ಮರುಳಾಗಿ ಮುಖಸ್ತುತಿಯ ಮೂಲಕ ತಮ್ಮಲ್ಲಿ ಅವರ ಆಸಕ್ತಿಯನ್ನು ಕೆರಳಿಸಲು ಪ್ರಯತ್ನಿಸಿದರು. ಅವರಿನ್ನೂ ಯುವಕರು ಮತ್ತು ಅಸಾಧ್ಯ ಬುದ್ಧಿಶಕ್ತಿಯ ಹಾಗೂ ಶ್ರೇಷ್ಠ ಆಧ್ಯಾತ್ಮಿಕ ವ್ಯಕ್ತಿಯಾದರೂ ಅವರು ಪ್ರಾಪಂಚಿಕ ಜ್ಞಾನವಿಲ್ಲ ದವರಂತೆ ಕಂಡರು. ಇದರಿಂದ ಅವರಿಗೆ ಅನಾನುಕೂಲ ಪರಿಸ್ಥಿತಿ ಉಂಟಾಗಬಹುದೇನೋ ಎಂದು ನನ್ನ ಅಜ್ಜಿ ಮಿಸೆಸ್ ಜಾನ್ ಬಿ. ಲಿಯಾನ್ ಹೆದರಿ ಅವರಿಗೆ ಎಚ್ಚರಿಕೆ ನೀಡಿದಳು. ಅವರು ನಕ್ಕು ನುಡಿದರು: ''ಮಿಸೆಸ್ ಲಿಯಾನ್, ನನ್ನ ಪ್ರೀತಿಯ ಅಮೆರಿಕನ್ ತಾಯಿಯೆ, ನನ್ನ ಬಗ್ಗೆ ಏನೂ ಹೆದರಬೇಕಾಗಿಲ್ಲ. ನಾನು ಭಿಕ್ಷಾನ್ನವನ್ನುಂಡು ಆಲದ ಮರದ ಕೆಳಗೆ ಕಾಲಯಾಪನೆ ಮಾಡಿದ್ದು ನಿಜ, ಆದರೆ ಕೆಲವು ವೇಳೆ ಮಹಾರಾಜರ ಅರಮನೆಯಲ್ಲಿ ಅತಿಥಿಯಾಗಿ ಕೂಡ ಇದ್ದೆ, ಮತ್ತೆ ಅರಮನೆಯ ಸೇವಕಿಯರು ರಾತ್ರಿಯೆಲ್ಲ ನನಗೆ ಗಾಳಿ ಹಾಕಲು ನಿಯಮಿಸಲ್ಪಟ್ಟಿದ್ದರು. ನಾನು ಪ್ರಲೋಭನೆಗೆ ಒಗ್ಗಿರುವೆನು. ನೀವೇನೂ ಚಿಂತಿಸಬೇಕಿಲ್ಲ.''

— ಕಾರ್ನೀಲಿಯಾ ಕಾಂಗರ್

*('ಸ್ವಾಮಿ ವಿವೇಕಾನಂದರ ದಿವ್ಯಸ್ಮೃತಿ', ಪು.೧೨೩, ಐದನೆಯ ಮುದ್ರಣ, ೨೦೧೩, ಮೈಸೂರು ಆಶ್ರಮ)*

# ಸ್ವಾಮಿ ವಿವೇಕಾನಂದರ ಚಿಕಾಗೊ ಉಪನ್ಯಾಸಗಳು - ಒಂದು ವ್ಯಾಖ್ಯೆ

**ಸ್ವಾಮಿ ಹರ್ಷಾನಂದ**

ಸ್ವಾಮಿ ವಿವೇಕಾನಂದರು ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಮಾಡಿದ ಭಾಷಣಗಳು ಹಲವು ದೃಷ್ಟಿಕೋನಗಳಿಂದ ಅತ್ಯಂತ ಮಹತ್ವದ್ದಾಗಿವೆ. ಅವುಗಳ ವಿಶ್ಲೇಷಣೆಯನ್ನೊಳಗೊಂಡ ಅಧ್ಯಯನಪೂರ್ಣ ವ್ಯಾಖ್ಯೆ ಇಲ್ಲಿದೆ. ಲೇಖಕರಾದ ಪೂಜ್ಯ ಸ್ವಾಮೀಜಿಯವರು ಪ್ರಸ್ತುತ ಬೆಂಗಳೂರು ರಾಮಕೃಷ್ಣ ಮಠದ ಅಧ್ಯಕ್ಷರು. ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಅಪಾರ ವಿದ್ವತ್ತನ್ನು ಹೊಂದಿರುವ ಸ್ವಾಮೀಜಿಯವರ ಹಲವಾರು ಪುಸ್ತಕಗಳು ಅತ್ಯಂತ ಪ್ರಸಿದ್ಧವಾಗಿವೆ. ಪೂಜ್ಯರು ಉತ್ತಮ ವಾಗ್ಮಿಗಳು ಕೂಡ ಹೌದು.




**ಸೆ**ಪ್ಟೆಂಬರ್ ೧೧, ೧೮೯೩ — ಪ್ರಪಂಚದ ಧಾರ್ಮಿಕ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಇದೊಂದು ಚಿರಸ್ಮರಣೀಯ ದಿನ! ಅವ್ಯಕ್ತ ಐಶ್ವರೀ ಶಕ್ತಿಯೊಂದು ಹಿಂದುಸ್ತಾನದ ಅಜ್ಞಾತ ಸಂನ್ಯಾಸಿಯೊಬ್ಬನನ್ನು 'ನವಭಾರತ ನಿರ್ಮಾಪಕ ಪ್ರವಾದಿ' ಎಂದು ಜಗತ್ತಿನ ಜನ ಅಂಗೀಕರಿಸುವಂತೆ ಮಾಡಿದ ದಿನ! ಪೌರ್ವಾತ್ಯ, ಪಾಶ್ಚಾತ್ಯ ಸಂಸ್ಕೃತಿಗಳು, ಧರ್ಮ ಮತ್ತು ವಿಜ್ಞಾನ — ಇವುಗಳಲ್ಲಿನ ಅತ್ಯುತ್ತಮ ಅಂಶಗಳ ಮಧುರ ಸಮ್ಮಿಳನವನ್ನೊಳಕೊಂಡ, ಹಾಗೂ, ದೇಹಶಕ್ತಿ ಬುದ್ಧಿಶಕ್ತಿ ಹೃದಯಸಂಸ್ಕಾರಶಕ್ತಿಗಳ ಸಮತೋಲನದಿಂದ ಕೂಡಿದ, ಮಾನವಕೋಟಿಗೆ ಮತ್ತೂ ಅಧಿಕವಾದ ಅಭ್ಯುದಯ ನಿಶ್ರೇಯಸ್ಸುಗಳನ್ನು ತಂದುಕೊಡುವ ಇಚ್ಛೆಯಿಂದ ಪ್ರಾರಂಭವಾದ ಮಹಾ ಚಳುವಳಿಯೊಂದಕ್ಕೆ ನಾಂದಿಯಾದ ದಿನ!

ಈ ಚಳುವಳಿಗೆ ಇಷ್ಟರಲ್ಲೇ ನೂರ ಇಪ್ಪತ್ತೈದು ವರ್ಷಗಳು ತುಂಬುತ್ತವೆ. ಇಂದು ಪ್ರಪಂಚದ ವಿವಿಧ ಭಾಗಗಳಲ್ಲಿ, ವಿಶೇಷವಾಗಿ ನಮ್ಮ ಭಾರತದೇಶದಲ್ಲಿ, ಮಾನವ-ಮಾನವ ಸಂಬಂಧಗಳು ತೊಡಕು ಬಿರುಕುಗಳ ಪರಿಣಾಮವಾಗಿ ಹದಗೆಡುತ್ತಿವೆ. ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಶಾಶ್ವತ ಮೌಲ್ಯಗಳನ್ನು ಆಧರಿಸಿರುವ, ಜಗತ್ತಿನ ಪ್ರಜ್ಞಾವಂತ ವ್ಯಕ್ತಿಗಳ ಸೌಹಾರ್ದವನ್ನು ಸಂಪಾದಿಸಿಕೊಂಡಿರುವ, ಈ ಚಳುವಳಿಯು ಇಂತಹ ಸಂದಿಗ್ಧ ಮತ್ತು ಅಪಾಯಕಾರಕ ಸಮಯದಲ್ಲಿ ನಮ್ಮೆಲ್ಲರ ಆಶಾಕಿರಣ ಮತ್ತು ಉದ್ಧಾರಮಾರ್ಗ. ಎಂತಲೇ ಇದರ ಪ್ರಗತಿಪಥದಲ್ಲಿರುವ ವಿಘ್ನಗಳನ್ನು ಕಿತ್ತೊಗೆದು ಇದು ಮತ್ತೂ ತೀವ್ರವಾಗಿ ಮತ್ತು ಸುಗಮವಾಗಿ ಮುಂದುವರಿಯುವಂತೆ ಮಾಡುವುದು ಪ್ರತಿಯೊಬ್ಬರ ಪವಿತ್ರ ಕರ್ತವ್ಯ.

ವಿಶ್ವದ ಪ್ರಪ್ರಥಮ ಸರ್ವಧರ್ಮಸಮ್ಮೇಳನವು ನಡೆದದ್ದು ಅಮೆರಿಕದ ಚಿಕಾಗೊ ನಗರದಲ್ಲಿ. ಸೆಪ್ಟೆಂಬರ್ ೧೧, ೧೮೯೩ ಅದರ ಪ್ರಥಮ ದಿನ, ಅತ್ಯಂತ ಪ್ರಮುಖ ದಿನ. ಅಂದು ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡಿದ ವಕ್ತಾರರಲ್ಲಿ ಸ್ವಾಮಿ ವಿವೇಕಾನಂದರು ಪ್ರಾಯಶಃ ಕೊನೆಯವರು; ಆದರೆ, ಅಲ್ಲಿ ಮಹತ್ಪರಿಣಾಮವನ್ನು ಬೀರಿದವರಲ್ಲಿ ಬಹುಶಃ ಮೊದಲಿಗರು. 'ಅಮೆರಿಕಾ ದೇಶದ ಭಗಿನಿಯರೇ ಮತ್ತು ಭ್ರಾತೃಗಳೇ' (Sisters and Brothers of America) ಎಂಬ ಕೇವಲ ಐದು ಶಬ್ದಗಳ ಮೂಲಕ ಅಪರಿಚಿತ ದೇಶವೊಂದರ ನಾಲ್ಕು ಸಾವಿರ ಅಪರಿಚಿತ ವ್ಯಕ್ತಿಗಳ ಹೃದಯವನ್ನು ಹಠಾತ್ತಾಗಿ ಕರಗಿಸಿಬಿಟ್ಟರು! ಅದರಿಂದ ಆ ಜನರ ಮೇಲೆ ಉಂಟಾದ ವಿದ್ಯುತ್ಪರಿಣಾಮ, ತನ್ಮೂಲಕ ಜನಿಸಿದ ಶಕ್ತಿಪ್ರವಾಹ, ಬಹು ಬೇಗ ವರ್ಧಿಸಿ ಅಮೆರಿಕಾ ಮತ್ತು ಭಾರತ ದೇಶಗಳಲ್ಲಲ್ಲದೆ ಇಂಗ್ಲೆಂಡ್ ಮತ್ತು ಯೂರೋಪಿನ ಇತರ ಪ್ರದೇಶಗಳಿಗೂ ಹರಿಯಿತು.

ಸರ್ವಧರ್ಮಸಮ್ಮೇಳನದಲ್ಲಿ ಸ್ವಾಮೀಜಿಯವರು ಗಳಿಸಿದ ಪ್ರಚಂಡ ವಿಜಯದ ಪರಿಣಾಮವನ್ನು ನಾವು ಗ್ರಹಿಸಬೇಕಾದರೆ ಆ ಸಮ್ಮೇಳನದ ವ್ಯವಸ್ಥಾಪಕರ ಉದ್ದೇಶವೇನಿತ್ತೆಂಬುದನ್ನು ಮೊದಲು ಅರಿಯಬೇಕು. ಸ್ವಾಮೀಜಿಯವರು ಜನವರಿ ೧೧, ೧೮೯೫ ರಲ್ಲಿ ಚಿಕಾಗೋ ನಗರದಿಂದ ಜಿ.ಜಿ. ನರಸಿಂಹಾಚಾರಿಯರ್ ಅವರಿಗೆ ಬರೆದ ಪತ್ರದಲ್ಲಿ ಹೀಗೆಂದಿರುತ್ತಾರೆ: 'ಕ್ರೈಸ್ತ ಧರ್ಮವು ಪ್ರಪಂಚದ ಇತರ ಧರ್ಮಗಳಿಗಿಂತ ಉತ್ಕೃಷ್ಟವಾದುದು ಎಂಬುದನ್ನು ಸಾಧಿಸುವ ಸಲುವಾಗಿಯೇ ಸರ್ವಧರ್ಮ ಸಮ್ಮೇಳನವನ್ನು ನಡೆಸಲಾಗಿತ್ತು.' (*The Complete Works of Swami Vivekananda, 1979 Vol. 5, P. 64*) ಮೇರಿ ಲೂಯಿ ಬರ್ಕ್‌ರವರು ಸಹ ತಮ್ಮ ಅದ್ಭುತ ಅಪೂರ್ವ ಗ್ರಂಥವಾದ *Swami Vivekananda in the West-New Discoveries* (Mayavati, Advaita Ashrama, 1983, Vol. I, P. 68) ಎಂಬುದರಲ್ಲಿ ಇದೇ ಅಭಿಪ್ರಾಯವನ್ನೇ ಮಂಡಿಸಿದ್ದಾರೆ: 'ಸರ್ವಧರ್ಮಸಮ್ಮೇಳನವು ಕ್ರಿಶ್ಚಿಯನ್ ದುರಭಿಪ್ರಾಯದಿಂದ ವ್ಯಾಪ್ತವಾಗಿತ್ತು . ಕ್ರೈಸ್ತ ಧರ್ಮವು ಅದ್ಭುತವಾಗಿ ಮತ್ತು ನಿಸ್ಸಂದಿಗ್ಧವಾಗಿ ತನ್ನ ಉತ್ಕೃಷ್ಟತೆಯನ್ನು ಸಾಧಿಸಿಬಿಡುತ್ತದೆಯೆಂಬುದು ಸಮ್ಮೇಳನದ ವ್ಯವಸ್ಥಾಪಕರನೇಕರ ಮನದಲ್ಲಿ ಮುನ್ನಿಶ್ಚಿತ ತೀರ್ಮಾನವಾಗಿತ್ತು.' ಇಂತಹ ಪ್ರತಿಕೂಲ ಪರಿಸರದಲ್ಲಿಯೂ ಸ್ವಾಮಿ ವಿವೇಕಾನಂದರು ಉಜ್ವಲ ಜಯವನ್ನು ಗಳಿಸಿದ್ದು ಅವರ ಅಧ್ಯಾತ್ಮಶಕ್ತಿಯ ಅಗಾಧತೆಯನ್ನು ತೋರಿಸುತ್ತದೆ.

ಸರ್ವಧರ್ಮಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಕೇವಲ ಆರು ಪ್ರವಚನಗಳನ್ನು ನೀಡಿದರು. ಅವುಗಳಲ್ಲಿ *Paper on Hinduism* ಎಂಬ ದೀರ್ಘಲೇಖನವನ್ನು ಬಿಟ್ಟರೆ ಉಳಿದೆಲ್ಲವೂ ಚಿಕ್ಕ ಉಪನ್ಯಾಸಗಳು.

ಅವರು ಜಗತ್ಪ್ರಸಿದ್ಧರಾದದ್ದು ಮೊದಲನೆಯ ಉಪನ್ಯಾಸದ ಮೂಲಕ; ಅದರಲ್ಲೂ ಸಭಾಸದರನ್ನು ಕುರಿತು ಸಂಬೋಧಿಸಿದ ಐದು ಪದಗಳ ಮೂಲಕ. ಪರಿಣಾಮ? ಎರಡು ನಿಮಿಷಗಳಷ್ಟು ದೀರ್ಘಕಾಲದ ಚಪ್ಪಾಳೆಯ ಆರ್ಭಟ! ಆದರೆ ಸಭಾಸದರ ಹೃದಯವನ್ನು ಸ್ಪರ್ಶಿಸಿದ್ದು ಕೇವಲ ಈ ಮಾತುಗಳು ಎಂದು ಭಾವಿಸಬಾರದು. ವೇದಾಂತಸಾಧನೆಯ ಮೂಲಕ ವಿವೇಕಾನಂದರು ಸಾಕ್ಷಾತ್ಕರಿಸಿಕೊಂಡ ಸರ್ವಾತ್ಮಭಾವನೆ, ಅದರ ಫಲವಾಗಿ ಅವರ ಹೃದಯದಲ್ಲಿ ಪ್ರವಹಿಸಿದ ತೀವ್ರ ವಿಶ್ವಪ್ರೇಮ — ಇವೇ ನಿಜವಾಗಿ ಸಭಾಸದರ ಹೃದಯವನ್ನು ಗೆದ್ದದ್ದು.

ಸ್ವಾಮೀಜಿಯವರು ತಮ್ಮ ಭಾಷಣವನ್ನು ಸಮ್ಮೇಳನದ ವ್ಯವಸ್ಥಾಪಕರಿಗೆ ಮತ್ತು ಸಭಿಕರಿಗೆ ವಂದನೆಯನ್ನು ಸಲ್ಲಿಸುವುದರ ಮೂಲಕ ಪ್ರಾರಂಭಿಸುತ್ತಾರೆ. ಈ ಕಡೆ ಪ್ರಪಂಚದ ಅತಿ ಪ್ರಾಚೀನ ದೇಶದ ಪ್ರತಿನಿಧಿಯಾಗಿ ಮೂವತ್ತರ ಹರೆಯದ ತರುಣ; ಆ ಕಡೆ ಅತ್ಯಂತ ಅರ್ವಾಚೀನ ದೇಶದ ಜನರ ಬೃಹತ್ ಸಮೂಹ; ಈತ ಅವರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದಾನೆ! ಇದೊಂದು ಸೋಜಿಗದ ನೋಟವಲ್ಲವೆ?

ಭಾರತದೇಶದಿಂದ ಇನ್ನೂ ಹತ್ತು ಹಲವು ಮಂದಿ ಬಂದಿದ್ದರು. ಆದರೆ ಅವರೆಲ್ಲ ಕೇವಲ ಕೆಲವು ಮತ, ಸಂಪ್ರದಾಯ ಅಥವಾ ಗುಂಪುಗಳ ಪ್ರತಿನಿಧಿಯಾಗಿ ಬಂದಿದ್ದರು. ಸಮಗ್ರ ಹಿಂದೂಧರ್ಮವನ್ನು, ಹಿಂದೂಸಮಾಜವನ್ನು, ಪ್ರತಿನಿಧೀಕರಿಸಿದ್ದವರು ವಿವೇಕಾನಂದರೊಬ್ಬರೇ!

ಮುಂದುವರಿಯುತ್ತ ಸ್ವಾಮೀಜಿ ಎನ್ನುತ್ತಾರೆ — ಹಿಂದೂ ಧರ್ಮವು ಕೇವಲ ಪರಮತಸಹಿಷ್ಣುತೆಯನ್ನು ಮಾತ್ರ ಬೋಧಿಸುತ್ತದೆ ಎಂದು ಭಾವಿಸಬಾರದು. ಅದು ಪ್ರಪಂಚದ ಎಲ್ಲ ಮತಧರ್ಮಗಳನ್ನೂ ಸಮಾನವಾಗಿ ಸತ್ಯವೆಂದು ಒಪ್ಪಿಕೊಳ್ಳುತ್ತದೆ; ಮಾತ್ರವಲ್ಲ, ಇದನ್ನು ಆಚರಣೆಯಲ್ಲೂ ತೋರಿಸಿಕೊಟ್ಟಿರುತ್ತದೆ. ಪರದೇಶದಲ್ಲಿ ಪರಧರ್ಮೀಯರಿಂದ ಕಿರುಕುಳಕ್ಕೆ ಹಿಂಸೆಗೆ ತುತ್ತಾಗಿ ತನ್ನಲ್ಲಿಗೆ ಓಡಿಬಂದ ಯೆಹೂದ್ಯರು ಪಾರಸೀಕರು ಮೊದಲಾದವರಿಗೆ ರಕ್ಷಣೆ ಅಭಯಗಳನ್ನು ಭಾರತದ ಹಿಂದೂಜನ ನೀಡಿರುವುದೇ ಇದಕ್ಕೆ ಸಾಕ್ಷಿ.

ಈ ಅಂಶವನ್ನು ದೃಢಪಡಿಸಲು ಸುಪ್ರಸಿದ್ಧ *ಶಿವಮಹಿಮ್ನಃ ಸ್ತೋತ್ರ*ದ ಒಂದು ಶ್ಲೋಕವನ್ನೂ (**'ತ್ರಯೀ ಸಾಂಖ್ಯಂ ಯೋಗಃ** ...' *ಶ್ಲೋಕ. ೭*) ಗೀತೆಯಿಂದ ಮತ್ತೊಂದನ್ನೂ (**'ಯೇ ಯಥಾ ಮಾಂ ಪ್ರಪದ್ಯಂತೇ..'** *ಅ.೪, ಶ್ಲೋ.೧೧*) ಉದ್ಧರಿಸಿ ಅವುಗಳ ಅರ್ಥವನ್ನು ವಿವರಿಸುತ್ತಾರೆ. ಇವೂ ಸಹ ಹಿಂದೂಧರ್ಮದ ವೈಶಾಲ್ಯವನ್ನು ಪ್ರಕಟಪಡಿಸುತ್ತವೆ.

ಅನಂತರ, ಈ ಜಗತ್ತಿನ ಜನ ಇಂದು ಸ್ವಮತದ ಬಗ್ಗೆ ದುರಭಿಮಾನ ಧರ್ಮಾಂಧತೆಗಳ ಗುಲಾಮರಾಗಿ, ಪರಸ್ಪರ ದ್ವೇಷದಿಂದ ಕಾದಾಡಿ, ಈ ಸುಂದರ ಭೂಮಿಯನ್ನು ನಿರ್ದೋಷಿಗಳ ರಕ್ತದಿಂದ ತೋಯಿಸಿರುತ್ತಾರೆ ಎಂದು ತಮ್ಮ ವ್ಯಥೆಯನ್ನೂ ತೋಡಿಕೊಳ್ಳುತ್ತಾರೆ. ಕ್ಯಾಲೆಬ್ ಕೋಲ್ಟನ್ ಮಹಾಶಯನು ಹೇಳಿರುವುದನ್ನು ಇಲ್ಲಿ ಸ್ಮರಿಸುವುದು ಬಹು ಉಪಯುಕ್ತ ಮತ್ತು ಸಮಯೋಚಿತ; ಅವನೆನ್ನುತ್ತಾನೆ, 'ತಮ್ಮ ತಮ್ಮ ಮತಧರ್ಮಕ್ಕಾಗಿ ಜನ ಕೂಗಾಡುತ್ತಾರೆ, ಬರೆಯುತ್ತಾರೆ, ಕಾದಾಡುತ್ತಾರೆ, ಅದಕ್ಕಾಗಿ ಸಾವನ್ನೂ ಅಪ್ಪುತ್ತಾರೆ. ಹೀಗೆ ಏನು ಮಾಡಲೂ ಸಿದ್ಧ! ಆದರೆ ಅದರಂತೆ ಜೀವನವನ್ನು ಮಾತ್ರ ನಡೆಸರು!' ಇದು ಹೇಗೇ ಇರಲಿ, ಜಗದ ವಿವಿಧ ಜನರ ಹೃದಯಗಳನ್ನು ಪರಸ್ಪರ ಭ್ರಾತೃತ್ವದಿಂದ ಬೆಸೆಯುವ ಉದ್ದಿಶ್ಯದಿಂದ ಈ ಸರ್ವಧರ್ಮಸಮ್ಮೇಳನದ ಮೂಲಕ ಪ್ರಾರಂಭವಾಗಿರುವ ಚಳವಳಿಯು ಯಶಸ್ವಿಯಾಗಲಿ! 'ಇಂದು ಬೆಳಿಗ್ಗೆ ಈ ಸಭೆಯ ಶುಭಾರಂಭವನ್ನು ಸೂಚಿಸಲು ಮೊಳಗಿದ ಘಂಟಾನಾದ ಎಲ್ಲ ಮತಾಂಧತೆಯ, ಖಡ್ಗ ಇಲ್ಲವೇ ಲೇಖನಿಯಿಂದ ಸಾಧಿಸಿದ ಎಲ್ಲ ಮತೀಯ ಹಿಂಸೆಗಳ, ಒಂದೇ ಗುರಿಯೆಡೆಗೆ ಸಾಗುತ್ತಿದ್ದರೂ ಪಥಿಕರಲ್ಲಿ ತಲೆದೋರುತ್ತಿರುವ ಎಲ್ಲ ಮನಸ್ತಾಪಗಳ ಅಂತ್ಯಕ್ರಿಯೆಯನ್ನು ಸೂಚಿಸುವ ಘಂಟಾನಾದವೂ ಆಗಲಿ' — ಎಂದು ಘೋಷಿಸುತ್ತ ತಮ್ಮ ಸದಾಶಯವನ್ನು ವ್ಯಕ್ತಪಡಿಸಿ ಈ ಪುಟ್ಟ ಉಪನ್ಯಾಸವನ್ನು ಮುಕ್ತಾಯಗೊಳಿಸಿರುತ್ತಾರೆ.

ಶತಶತಮಾನಗಳಿಂದ ಪಂಥಾಭಿಮಾನ ಮತಾಂಧತೆಗಳು ಈ ಜಗತ್ತಿನಲ್ಲಿ ತಾಂಡವವಾಡಿವೆ. ವಿನಾಶ ರಕ್ತಪಾತಗಳ ಮೂಲಕ ರಾಷ್ಟ್ರರಾಷ್ಟ್ರಗಳನ್ನೇ ತಲ್ಲಣಿಸಿಬಿಟ್ಟಿವೆ. ಅವುಗಳನ್ನು ನಿರ್ಮೂಲ ಮಾಡಬೇಕಾದರೆ ಮೊದಲು ಅವುಗಳ ಮೂಲಕಾರಣಗಳನ್ನು ಕಂಡುಹಿಡಿಯಬೇಕು. ಇದನ್ನೇ ವಿವೇಕಾನಂದರು *'ನಮ್ಮಲ್ಲಿ ಏಕೆ ಒಮ್ಮತವಿಲ್ಲ'* (*Why We Disagree*) ಎಂಬ ಎರಡನೆಯ, ಪುಟ್ಟ, ಪ್ರವಚನದಲ್ಲಿ ಮಾಡಿರುವುದು. ಸುಪ್ರಸಿದ್ಧವಾದ 'ಕೂಪ ಮಂಡೂಕ' (ಸಣ್ಣ ಬಾವಿಯಲ್ಲಿ ವಾಸಿಸುವ ಕಪ್ಪೆ) ಎಂಬ ಸಂಸ್ಕೃತದ ಸಾಮತಿಯನ್ನು ಸ್ವಾರಸ್ಯಕರ ಕಥೆಯೊಂದರ ಮೂಲಕ ವಿಸ್ತರಿಸುತ್ತ ವಿವಿಧ ಮತಧರ್ಮಗಳ ಅನುಯಾಯಿಗಳೆಲ್ಲ ತಮ್ಮ ತಮ್ಮ 'ಚಿಕ್ಕ ಬಾವಿ'ಗಳಿಂದ ಆಚೆಗೆ, ವಿಶಾಲ ಪ್ರಪಂಚಕ್ಕೆ ಬರುವಂತೆ ಕರೆ ನೀಡಿರುತ್ತಾರೆ. ಮುಕ್ತ ಮನಸ್ಸಿನಿಂದ ಇತರ ಧರ್ಮಗಳ ಜನರೊಂದಿಗೆ ಸಂಪರ್ಕವನ್ನು ಬೆಳಸಿದಾಗ ಕಣ್ಪರೆಗಳು ಕಳಚಿಬೀಳುತ್ತವೆ, ವಿವಿಧ ಗುಂಪುಗಳ ಜನರ ನಡುವಣ ಬೇಲಿಗಳು ಕುಸಿಯುತ್ತವೆ; ತನ್ಮೂಲಕ, ಪರಸ್ಪರ ಸೌಹಾರ್ದವೂ ಗೌರವವೂ ವರ್ಧಿಸುತ್ತವೆ. ಆಗ, ಆಗ ಮಾತ್ರವೇ, ಈ ನಮ್ಮ ಜಗತ್ತು ನಮ್ಮ ಸುಖವನ್ನು ಹೆಚ್ಚಿಸುವಂಥ ವಾಸಸ್ಥಾನವಾಗುತ್ತದೆ. ಅಮೆರಿಕಾ ದೇಶವು ಈ ದಿಕ್ಕಿನಲ್ಲಿ ಮಾಡುತ್ತಿರುವ ಪ್ರಯತ್ನಕ್ಕೆ ಅಭಿನಂದನೆಗಳನ್ನೂ ಕೃತಜ್ಞತೆಯನ್ನೂ ಸಲ್ಲಿಸಿ ಭಗವಂತನು ಇದಕ್ಕೆ ಯಶಸ್ಸನ್ನು ಅನುಗ್ರಹಿಸಲೆಂದು ಪ್ರಾರ್ಥನೆ ಮಾಡುತ್ತಾರೆ.

'ಹಿಂದೂಧರ್ಮ' *(Paper on Hidudism)* ಎಂಬುದು ಮೂರನೆಯ ಪ್ರವಚನ; ಸ್ವಾಮೀಜಿಯವರು ಬರೆದು ಸಿದ್ಧಪಡಿಸಿ ಸಮ್ಮೇಳನದಲ್ಲಿ ಓದಿದ ಏಕೈಕ ಭಾಷಣ. ಮತ್ತು ಇದು ಅವರಿತ್ತ ಭಾಷಣಗಳಲ್ಲಿ ಅತ್ಯಂತ ದೀರ್ಘವೂ ಆಗಿತ್ತು. ಸೋದರಿ ನಿವೇದಿತೆ, ಪ್ರಥಮ ಬಾರಿ ನಾಲ್ಕು ಸಂಪುಟಗಳಲ್ಲಿ ಪ್ರಕಟಿತವಾದ *The Complete Works of Swami Vivekananda* (ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ) ಎಂಬ ಗ್ರಂಥಕ್ಕೆ ಅತ್ಯಮೋಘವಾದ ಮುನ್ನುಡಿಯನ್ನು *'Our Master and His message'* (ನನ್ನ ಗುರುದೇವ ಮತ್ತು ಆತನ ಸಂದೇಶ') ಎಂಬ ಶೀರ್ಷಿಕೆಯಡಿಯಲ್ಲಿ ಬರೆಯುತ್ತ ಹೀಗೆಂದಿರುತ್ತಾರೆ: 'ಸ್ವಾಮೀಜಿಯವರು ಮಾತನಾಡಲು ಪ್ರಾರಂಭಿಸಿದಾಗ ಅದು ''ಹಿಂದೂಗಳ ಧಾರ್ಮಿಕ ಭಾವನೆ''ಗಳನ್ನು ಕುರಿತದ್ದಾಗಿತ್ತು. ಆದರೆ ಅವರು ಅದನ್ನು ಮುಕ್ತಾಯಗೊಳಿಸಿದಾಗ ''ಹಿಂದೂಧರ್ಮ''ದ ಸೃಷ್ಟಿಯಾಗಿತ್ತು!' ವಿವೇಕಾನಂದರ ಪಾಶ್ಚಾತ್ಯ ಶಿಷ್ಯೆಯೊಬ್ಬಳಿಂದ ಬಂದಿರುವ ಈ ಹೇಳಿಕೆ ಅತಿ ಮಹತ್ವದ್ದು. ಪಾಶ್ಚಾತ್ಯ ಸಂಸ್ಕೃತಿಯ ಫಲವಾಗಿ ಆಕೆಯಲ್ಲಿ ಸಹಜವಾಗಿಯೇ ಹಿಂದೂಧರ್ಮವಿರೋಧಿ ಪೂರ್ವಾಗ್ರಹಗಳು ಸಾಕಷ್ಟಿದ್ದವು. ಅವಳ ದೃಷ್ಟಿಯಲ್ಲಿ ಅದೊಂದು ಕ್ಷುದ್ರ ಅಸಂಸ್ಕೃತ ಮತಧರ್ಮವಾಗಿದ್ದಿತು. ಆದರೆ ಗುರುವಿನಿಂದ ಪಡೆದ ಶಿಕ್ಷೆಯ ಮತ್ತು ಶಿಕ್ಷಣದ ಫಲವಾಗಿ ಮುಂದೆ ಆಕೆ ಹಿಂದೂಧರ್ಮದ ಸೊಗಸನ್ನೂ ಉತ್ಕರ್ಷಣವನ್ನೂ ಅಭಿಮಾನಪೂರ್ವಕವಾಗಿ ಶಕ್ತಿಯುತವಾಗಿಯೇ ಪ್ರತಿಪಾದಿಸುವವಳಾದಳು.

ಹಿಂದೂಗಳ ಉದಾತ್ತ ಧಾರ್ಮಿಕ ಭಾವನೆಗಳನ್ನು ಅಮೆರಿಕದ ಜನ ಅಪಾರ್ಥಮಾಡಿಕೊಂಡಿದ್ದರು. ಭಾರತದಲ್ಲಿ ದುಡಿದಿದ್ದ ಪಾಶ್ಚಾತ್ಯ ಕ್ರಿಶ್ಚಿಯನ್ ಮಿಷನರಿಗಳ ದುರುದ್ದೇಶಪೂರಿತ ಅಪಪ್ರಚಾರದ ಫಲವಾಗಿ ಅವುಗಳ ವಿಕೃತರೂಪವನ್ನು ಮಾತ್ರ ಕಂಡು ಅಸಹ್ಯಪಟ್ಟಿದ್ದರು. ಈ ಮಿಷನರಿಗಳಿಗಾದರೂ ಸಾಧಿಸಿಕೊಳ್ಳಬೇಕಾದ ಸ್ವಾರ್ಥವು ಸಾಕಷ್ಟಿತ್ತು. ಹಿಂದೂಧರ್ಮದ ಬಗೆಗೆ ತಿಳಿವಳಿಕೆ ಪಾಶ್ಚಾತ್ಯರಿಗೆ ದೊರೆಯುತ್ತಿದ್ದುದ್ದು ಕೇವಲ ಈ ಮಿಷನರಿಗಳ ಭಾಷಣಗಳ ಬರಹಗಳ ಮೂಲಕ ಮಾತ್ರ! ಸಹಜವಾಗಿಯೇ ಅವರು ಹಿಂದೂಧರ್ಮವನ್ನು ಹೀನಾಯವಾಗಿ ಕಾಣುತ್ತಿದ್ದರು. ಆದುದರಿಂದಲೇ ಅವರ ಮನದಲ್ಲಿ ಮುಸುಕಿದ್ದ ಅಜ್ಞಾನ ಗ್ರಂಥಿಗಳನ್ನು ಬಿಡಿಸಿ ಭಾರತದ ಹಿಂದೂಧರ್ಮವನ್ನು ಸಮರ್ಥಿಸಲು, ಅದನ್ನು ತರ್ಕಬದ್ಧವೂ ವ್ಯವಸ್ಥಿತವೂ ಆದ ರೀತಿಯಲ್ಲಿ ಪ್ರತಿಪಾದಿಸುವುದು ತುಂಬ ಅವಶ್ಯವಾಗಿದ್ದಿತು. ಅತ್ಯಂತ ತೀಕ್ಷ್ಣಮತಿಯಾದ, ವಿಷಯದ ಬಗ್ಗೆ ಅತಿ ವಿಶಾಲ ಪಾಂಡಿತ್ಯವುಳ್ಳ ಮತ್ತು ಪಶ್ಚಿಮದೇಶಗಳ ಜನರಿಗೆ ಅವರ ಭಾಷೆಯಲ್ಲಿಯೇ ಅದನ್ನು ಮುಂದಿಡಬಲ್ಲ ಸಮರ್ಥ ವ್ಯಕ್ತಿಯೊಬ್ಬನ ಆವಶ್ಯಕತೆ ತುಂಬ ಇತ್ತು. ಇಂತಹ ಕೆಲಸವನ್ನು ಮಾಡುವ ಸಾಮರ್ಥ್ಯ ವಿವೇಕಾನಂದರಲ್ಲಿ ಪರಿಪೂರ್ಣವಾಗಿತ್ತು. ಮತ್ತು ಅವರು ಅದನ್ನು ನಿರ್ವಹಿಸಿದಾಗ, 'ಹಿಂದೂಧರ್ಮದ ಸೃಷ್ಟಿಯಾಯಿತು!'

'ಹಿಂದೂ ಧಾರ್ಮಿಕ ಭಾವನೆಗಳು' ವೈವಿಧ್ಯಮಯವಾದವು. ಪ್ರತಿಯೊಂದು ಮತದಲ್ಲಿಯೂ ಪಂಥದಲ್ಲಿಯೂ ಸೇರಿಕೊಂಡಿರುವಂಥವು. ಪರಸ್ಪರ ಭಿನ್ನಾಭಿಪ್ರಾಯಗಳೂ ಪರಸ್ಪರ ವಿರುದ್ಧಾಂಶಗಳೂ ಇರುವಂತೆ ತೋರುತ್ತವೆ.

ಆದರೂ, ಇಂತಹ ಉಪದೇಶಗಳನ್ನೆಲ್ಲ ಸರ್ವಗ್ರಾಹಿಯೂ ಸೂಕ್ಷ್ಮಗ್ರಾಹಿಯೂ ಆದ ವಿಶೇಷಪರಿಜ್ಞಾನದ ರಕ್ಷಾಕವಚದಡಿಯಲ್ಲಿ ತರಬೇಕು; ಪರಸ್ಪರ ವಿರುದ್ಧಾಂಶಗಳನ್ನು ತರ್ಕಸಂಮತವಾಗಿ ಪರಿಹರಿಸಿ, ವೈವಿಧ್ಯವಿದ್ದರೂ ವೈರುದ್ಧ್ಯವಿಲ್ಲದಂತೆ ಸಮನ್ವಯ ಮಾಡಿ — ವಿವಧ ವರ್ಣರಂಜಿತ, ಆದರೆ ದರ್ಶನೀಯ, ಸುಂದರ ವಸ್ತ್ರದಂತೆ — ಅವನ್ನು ಒಂದು ಸಮಗ್ರ ದರ್ಶನವಾಗಿ ಬೆಸೆಯಬೇಕು. ಇಂತಹ 'ಹಿಂದೂಧರ್ಮ'ವನ್ನು ಅಥವಾ 'ಹಿಂದೂದರ್ಶನ'ವನ್ನು ಹಿಂದೂಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಸಂತೋಷದಿಂದ ಸ್ವೀಕರಿಸುವಂತಾಗಬೇಕು.

ಅಸಾಧ್ಯವೆನ್ನಿಸುವಷ್ಟರಮಟ್ಟಿಗೆ ಕಷ್ಟಕರವಾದ ಈ ಮಹತ್ಕಾರ್ಯವನ್ನು ಭಾರತದೇಶದ ಚರಿತ್ರೆಯಲ್ಲಿಯೇ ಮೊಟ್ಟಮೊದಲ ಬಾರಿಗೆ ಸಾಧಿಸಿದ ಕೀರ್ತಿ ಸ್ವಾಮಿ ವಿವೇಕಾನಂದರದು ಎಂದರೆ ಅದು ಅತಿಶಯೋಕ್ತಿಯಾಗಲಾಗದು.

ಈಗ ಈ ಲೇಖನದ ಸಾರಾಂಶವನ್ನು ಕೊಡಲು ಪ್ರಯತ್ನಿಸುತ್ತೇವೆ:

ಹಿಂದೂಧರ್ಮ, ಜಾರತೂಷ್ಟ್ರಧರ್ಮ (ಅಥವಾ ಪಾರಸೀಧರ್ಮ) ಮತ್ತು ಯಹೂದ್ಯಧರ್ಮ ಎಂಬೀ ಮೂರು ಚರಿತ್ರ



ಪೂರ್ವ ಧರ್ಮಗಳಲ್ಲಿ ಹಿಂದೂಧರ್ಮವು ಇಂದಿಗೂ ಶಕ್ತಿಯುತವಾಗಿ ಚಲಾವಣೆಯಲ್ಲಿದೆ. ಇತರ ಮತಗಳಿಗೂ ತನ್ನೆದೆಯಲ್ಲಿ ಗೌರವಯುತ ಸ್ಥಾನವನ್ನು ಕೊಟ್ಟು ಅವನ್ನು ತನ್ನದನ್ನಾಗಿ ಮಾಡಿಕೊಳ್ಳಬಲ್ಲ ಅದರ ವಿಶ್ವವ್ಯಾಪೀ ಮನೋಭಾವವೇ ಇದಕ್ಕೆ ಮುಖ್ಯ ಕಾರಣ. ವೇದಾಂತದ ಗೌರೀಶಂಕರ ಶಿಖರದಿಂದ ಹಿಡಿದು ಅತಿ ಕೀಳ್ಮಟ್ಟದ ಮೂರ್ತಿಪೂಜೆಯವರೆಗಿನ ಎಲ್ಲ ರೀತಿಯ ಕಲ್ಪನೆಗಳಿಗೂ ಇಲ್ಲಿ ಅವಕಾಶವಿದೆ. ಇವುಗಳೆಲ್ಲಕ್ಕೂ ಸಮಾನವಾದ ಆಧಾರ ಅಥವಾ ಕೇಂದ್ರಬಿಂದು ಎಂದರೇ ವೇದಗಳು. ಈ 'ವೇದಗಳು' ಕೇವಲ ಪುಸ್ತಕಗಳಲ್ಲ; ತಲೆತಲಾಂತರಗಳಿಂದ ಶೇಖರಿತವಾಗಿರುವ ಅಧ್ಯಾತ್ಮ ವಿದ್ಯೆಯ ಆಕರಗಳು. ಅವುಗಳ ಆವಿಷ್ಕಾರವೇ 'ಋಷಿ'ಗಳು. ಈ ಋಷಿಗಳಲ್ಲಿ ಕೆಲವರು ಮಹಿಳೆಯರು.

ಈ ಸೃಷ್ಟಿಯು ಆದ್ಯಂತರಹಿತವಾದದ್ದು. ನಮ್ಮೆಲ್ಲರ ಶರೀರಗಳಲ್ಲಿ ವಾಸಿಸುತ್ತಿರುವ ಆತ್ಮಚೈತನ್ಯವು ಜನನ-ಮರಣ-ರಹಿತವಾದದ್ದು, ಶಾಶ್ವತವಾದದ್ದು, ಪರಿಪೂರ್ಣಸ್ವರೂಪವುಳ್ಳದ್ದು. ತನ್ನ ಪೂರ್ವಕರ್ಮಗಳಿಗೆ ತಕ್ಕ ಫಲವನ್ನು ಕೊಡಬಲ್ಲಂಥ ಅದು ಸ್ವಯಂ ಆರಿಸಿಕೊಂಡು ಅದರಲ್ಲಿ ಹುಟ್ಟುತ್ತದೆ. ಅದಕ್ಕೆ ಮರಣವೆಂಬುದು ಕೇವಲ ಒಂದು ಶರೀರವೆಂಬ ಕ್ಷೇತ್ರದಿಂದ ಮತ್ತೊಂದು ಶರೀರವೆಂಬ ಕ್ಷೇತ್ರಕ್ಕೆ ಮಾಡುವ ಯಾತ್ರೆಯಷ್ಟೆ.

ವೇದಗಳು ದೇವರನ್ನು ಒಪ್ಪುತ್ತವೆ. ಅವನು ಆದಿಪುರುಷನು. ಅವನನ್ನು ಅರಿಯುವುದರಿಂದ ನಾವು ಜನನ-ಮರಣ-ರೂಪದ ಸಂಸಾರಚಕ್ರದಿಂದ ಪಾರಾಗುತ್ತೇವೆ. ಅವನು ನಿತ್ಯಶುದ್ಧನು, ನಿರಾಕಾರನು, ಸರ್ವಶಕ್ತನು ಮತ್ತು ಪರಮದಯಾಳುವು. ಅಷ್ಟೇ ಅಲ್ಲ, ಅವನು ಈ ಜಗತ್ತಿನಲ್ಲಿ ಅವತರಿಸಬಲ್ಲ. **'ಅಮೃತಸ್ಯ ಪುತ್ರಾಃ'** ('ಅಮೃತತ್ವದ ಮಕ್ಕಳೇ') ಎಂದು ಮಾನವರನ್ನು ಸಂಬೋಧಿಸುವುದರ ಮೂಲಕ ವೇದಗಳು ಅವರು ಪಾಪಿಗಳೆಂದು ಭಾವಿಸುವ ಕಲಂಕವನ್ನು ತೊಡೆದುಹಾಕಿವೆ.

ಜಡಪ್ರಕೃತಿಗೆ ಸೆರೆಸಿಕ್ಕುವುದೇ ಆತ್ಮಚೈತನ್ಯದ ಬಂಧನ. ಈ ಬಂಧನವನ್ನು ದೇವರ ಅನುಗ್ರಹದಿಂದ ಹೋಗಲಾಡಿಸಿಕೊಳ್ಳಬಹುದು. ಮನಶ್ಶುದ್ಧಿಯೇ ದೇವರ ಅನುಗ್ರಹವನ್ನು ಪಡೆಯಲು ಇರುವ ಉಪಾಯ. ವೈರಾಗ್ಯಯುತ ಜೀವನ ಮತ್ತು ಭಗವದ್ಭಕ್ತಿ — ಇವು ಮನಶ್ಶುದ್ಧಿಯನ್ನು ಸಾಧಿಸಿಕೊಡುತ್ತವೆ. ದೈವಸಾಕ್ಷಾತ್ಕಾರದ ಮೂಲಕ ಕೈವಲ್ಯವನ್ನು ಪಡೆಯುವವರು ಶಾಶ್ವತ ಪರಮ ಆನಂದದಲ್ಲಿ ವಾಸಿಸುತ್ತಾರೆ; ಸರ್ವಾತ್ಮಭಾವವನ್ನು ಪಡೆದುಕೊಳ್ಳುತ್ತಾರೆ.

ಹಿಂದೂಧರ್ಮವು ಬಹುದೇವತಾ-ವಾದವನ್ನು ಪ್ರತಿಪಾದಿಸುವುದಿಲ್ಲ ಎನ್ನುತ್ತಾರೆ ವಿವೇಕಾನಂದರು. ವಿವಿಧ ದೇವತೆಗಳು ಒಂದೇ ಪರಮಸತ್ಯದ ವಿವಿಧ ರೂಪಗಳು, ನಾಮಗಳು, ಅಷ್ಟೇ.

ಧಾರ್ಮಿಕ ಚಿಹ್ನೆಗಳು ಸ್ವತಃ ದೇವರಲ್ಲ; ಆದರವು ಅಧ್ಯಾತ್ಮ ಜೀವನದ ಪ್ರಗತಿಗೆ ಸಹಾಯಕ. ಈ ದೃಷ್ಟಿಯಿಂದ ಮಾತ್ರ ಅವನ್ನು ಒಪ್ಪಿಕೊಳ್ಳಲಾಗಿದೆ.

ವೈವಿಧ್ಯದಲ್ಲಿ ಏಕತೆ – ಇದು ಹಿಂದೂಧರ್ಮದ ಮತ್ತೊಂದು ವೈಶಿಷ್ಟ್ಯ.

ಇದರಲ್ಲಿ ವಿಗ್ರಹಾರಾಧನೆಯನ್ನು ನಿಂದಿಸಿಲ್ಲ. ಆದರದು ಅಧ್ಯಾತ್ಮಜೀವನದ ವಿಕಾಸದ ಪ್ರಾಥಮಿಕ ಹಂತಗಳಲ್ಲಿ ಆವಶ್ಯಕವೆಂದು ಭಾವಿಸಲಾಗಿದೆ.

ಮುಕ್ತಾಯದಲ್ಲಿ ವಿವೇಕಾನಂದರು ಆದರ್ಶ ಸರ್ವಸಮ್ಮತ ವಿಶ್ವಧರ್ಮವೊಂದಿರಬೇಕಾದರೆ ಅದರ ಲಕ್ಷಣಗಳು ಹೇಗಿರಬೇಕು ಎಂಬುದನ್ನು ವಿವರಿಸುತ್ತಾರೆ. ಈ ಲಕ್ಷಣಗಳು ಅವರೇ ಇದುವರೆಗೆ ಈ ಲೇಖನದಲ್ಲಿ ವಿವರಿಸಿರುವ ಹಿಂದೂಧರ್ಮಕ್ಕೆ ಬಹು ಚೆನ್ನಾಗಿ ಅನ್ವಯವಾಗುತ್ತವೆ.

'ಭಾರತದ ತೀವ್ರವಾದ ಅಗತ್ಯ ಮತಧರ್ಮವಲ್ಲ' *(Religion, not the Crying Need of India)* ಎಂಬ ಮುಂದಿನ ಉಪನ್ಯಾಸವು ಒಂದು ಕಟುಟೀಕೆ. ಕ್ರಿಶ್ಚಿಯನ್ ದೇಶಗಳು ಹಸಿವಿನಿಂದ ಕಂಗಾಲಾದ ಭಾರತದ ಬಡ ಜನರಿಗೆ ಆಹಾರ ಸಾಮಗ್ರಿಗಳನ್ನೊದಗಿಸುವ ಬದಲು ಧರ್ಮಪ್ರಚಾರಕರನ್ನು ಕಳುಹಿಸುತ್ತಿರುವ ಮತಾಂತರ ಮನೋಭಾವದ ಮೇಲೆ ಮಾಡಿರುವ ತೀವ್ರ ದಾಳಿ. ಆದರೆ ಸ್ವಾಮೀಜಿ ಇದನ್ನು ಯಾತನೆಯಿಂದ ಮಾಡಿರುವರೇ ಹೊರತು ಕೋಪದಿಂದಲ್ಲ.

‘ಅನ್ನವನ್ನು ಕೇಳಿದವನಿಗೆ ಕಲ್ಲನ್ನು ಕೊಡುವರೆ?’ ಎಂಬ ಬೈಬಲ್ಲಿನ *(Mathew 7.9)* ವ್ಯಂಗ್ಯೋಕ್ತಿಯನ್ನು ಈ ದೇಶದ ಜನ ನಿಜವಾಗಿಯೂ ‘ಕಲ್ಲನ್ನು ಕೊಟ್ಟು’ ಸಾಧಿಸಿಬಿಟ್ಟಿರುತ್ತಾರೆ! ಈ ಪ್ರವಚನದ ಕಡೆಯಲ್ಲಿ, ಸಭಾಂಗಣದಿಂದ ಹೊರಗಡೆಗೆ ಬರುತ್ತಿದ್ದ ಜನರಲ್ಲೊಬ್ಬ, ‘ಆ ಮನುಷ್ಯ ಅಸಂಸ್ಕೃತ ಮತ್ತು ಅಜ್ಞಾನಿ! ಮತ್ತು, ನಾವು ಅವನ ದೇಶದ ಜನರಿಗಾಗಿ ಪಾದ್ರಿಗಳನ್ನು ಕಳಿಸುತ್ತಿದ್ದೇವೆ! ಅವರು ನಮಗಾಗಿ ಧರ್ಮಪ್ರಚಾರಕರನ್ನು ಕಳಿಸುವುದೇ ಲೇಸು!’ ಎಂದು ಉದ್ಗಾರ ಮಾಡಿದುದರಲ್ಲಿ ಆಶ್ಚರ್ಯವೇನೂ ಇಲ್ಲ *(The Life of Swami Vivekananda,* Vol. 1, Mayavathi, Advaitha Ashrama, 1979. P. 429).

‘ಬೌದ್ಧಧರ್ಮ: ಹಿಂದೂಧರ್ಮದ ಸಾಫಲ್ಯ’ *(Buddhism the Fulfillment of Hinduism)* ಎಂಬ ತಮ್ಮ ಉಪಾಂತ ಪ್ರವಚನದಲ್ಲಿ ವಿವೇಕಾನಂದರು ಬುದ್ಧನನ್ನು ಇಳೆಗಿಳಿದು ಬಂದ ಭಗವದವತಾರ ಎಂದು ಪ್ರಶಂಸಿಸಿರುತ್ತಾರೆ. ಬುದ್ಧನು ಹಿಂದೂ ಧರ್ಮವೆಂಬ ತನ್ನ ಮಾತೃಧರ್ಮವನ್ನು ಮತ್ತಷ್ಟು ಪೂರ್ಣಗೊಳಿಸಲು ಬಂದನೇ ಹೊರತು ಅದನ್ನು ನಾಶಪಡಿಸುವುದಕ್ಕಾಗಿ ಅಲ್ಲ. ಅವನ ಶಿಷ್ಯರೇ ಅವನನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಮರ್ಥರಾಗಲಿಲ್ಲ. ಈ ಕಾರಣದಿಂದ ಹಿಂದೂಧರ್ಮವು ಕವಲೊಡೆಯಲು ಅವರು ದಾರಿಮಾಡಿಕೊಟ್ಟಂತಾಯಿತು. ಶಾಕ್ಯಮುನಿಯು (ಗೌತಮಬುದ್ಧನು) ಹಿಂದೂಧರ್ಮದ ಕ್ರಿಯಾಕಾಂಡವನ್ನು ಉಪೇಕ್ಷಿಸಿ ಅಧ್ಯಾತ್ಮ ತತ್ತ್ವಗಳನ್ನು ಮಾತ್ರ ಉಪದೇಶಿಸಿದನು. ಜನಸಾಮಾನ್ಯರ ಬಗ್ಗೆ ಅತ್ಯಂತ ಅನುಕಂಪೆಯನ್ನು ಹೊಂದಿದ್ದ ಆತ ಪ್ರಪಂಚದ ಮೊಟ್ಟಮೊದಲನೆಯ ಧರ್ಮಪ್ರಚಾರಕನೆನ್ನಬಹುದು. ಕಾಲಕ್ರಮದಲ್ಲಿ ಹಿಂದೂಧರ್ಮ ಬೌದ್ಧಧರ್ಮವನ್ನು ತನ್ನಲ್ಲಿಯೇ ಅರಗಿಸಿಕೊಂಡಿತು, ನಿಜ. ಆದರೂ ವಿವೇಕಾನಂದರು ‘ಬ್ರಾಹ್ಮಣರ ಅದ್ಭುತ ಮೇಧಾಶಕ್ತಿಯ ಮತ್ತು ಬುದ್ಧನ ಹೃದಯದ, ಅದ್ಭುತ ಮಾನವೀಯ ಶಕ್ತಿಯ’ ಮಧುರ ಸಮತೋಲನದ ಮಿಶ್ರಣವನ್ನು ಪ್ರತಿಪಾದಿಸಿರುತ್ತಾರೆ.

ಸರ್ವಧರ್ಮ ಸಮ್ಮೇಳನದ ಕೊನೆಯ ಅಧಿವೇಶನದಂದು (ಸೆಪ್ಟೆಂಬರ್ ೨೭, ೧೮೯೩) ಅವರಿತ್ತ ಭಾಷಣವು — ಅವರ ಪ್ರಪ್ರಥಮ ಪ್ರವಚನದಂತೆಯೇ ಪುಟ್ಟದಾಗಿದ್ದರೂ — ಅವರ ಇತರ ಭಾಷಣಗಳಂತೆಯೇ ವಿಶ್ವವ್ಯಾಪಕ ದೃಷ್ಟಿಯಿಂದ ಕೂಡಿತ್ತು. ಈ ಬೃಹತ್ ಸಮ್ಮೇಳನವನ್ನು ಆಯೋಜಿಸಿ ನಡೆಸಿಕೊಟ್ಟಿದ್ದ ಮಹನೀಯರೆಲ್ಲರನ್ನೂ ಅಭಿನಂದಿಸಿ ಅವರಿಗೆ ಕೃತಜ್ಞತೆಯನ್ನು ಸಲ್ಲಿಸಿದ ಮೇಲೆ ವಿವೇಕಾನಂದರು, ಯಾವ ಧರ್ಮವೇ ಆಗಲಿ ಇತರ ಧರ್ಮಗಳನ್ನೆಲ್ಲ ನಾಶಪಡಿಸಿ ತಾನು ಮಾತ್ರ ಉಳಿಯುವುದು ಸಾಧ್ಯವಿಲ್ಲ ಎಂದು ಇದರಲ್ಲಿ ಘೋಷಿಸಿರುತ್ತಾರೆ. ಯಾರೂ ತಮ್ಮ ಧರ್ಮವನ್ನು ತ್ಯಜಿಸಿ ಮತಾಂತರ ಹೊಂದಬೇಕಾಗಿಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಧರ್ಮದ ಆಧಾರಸ್ವರವನ್ನವಲಂಬಿಸಿ ವಿಕಾಸ ಹೊಂದಬಹುದು. ಆದರೆ ಜೊತೆಜೊತೆಯಲ್ಲಿಯೇ ಇತರ ಧರ್ಮಗಳ ಸಾರವನ್ನೂ ಅರಗಿಸಿಕೊಳ್ಳಲು ಪ್ರಯತ್ನಿಸಬೇಕು. ಈ ಸರ್ವಧರ್ಮಸಮ್ಮೇಳನವು ಜಗತ್ತಿಗೆ ಏನನ್ನಾದರೂ ಪ್ರದರ್ಶಿಸಿದ್ದರೆ ಅದು ಇದೇ: ಪವಿತ್ರತೆ, ಪರಿಶುದ್ಧತೆ ಮತ್ತು ಉದಾರತೆ ಎಂಬ ಸದ್ಗುಣಗಳು ಈ ಪ್ರಪಂಚದ ಯಾವ ಒಂದು ಮತದ ಧರ್ಮದ ಅಥವಾ ಸಂಪ್ರದಾಯದ ವಿಶೇಷ ಸೊತ್ತಲ್ಲ; ಪ್ರತಿಯೊಂದು ಧಾರ್ಮಿಕ ಸಂಪ್ರದಾಯವೂ ಅತ್ಯುನ್ನತ ಶೀಲಸಂಪನ್ನರಾದ ಸ್ತ್ರೀಪುರುಷ ವ್ಯಕ್ತಿಗಳನ್ನು ನಿರ್ಮಾಣ ಮಾಡಿದೆ. ಪರಸ್ಪರ ಸಹಾಯ, ಇತರ ಧರ್ಮಗಳಲ್ಲಿನ ಸಾರವನ್ನು ಸ್ವೀಕರಿಸಿ ತಮ್ಮದನ್ನಾಗಿ ಮಾಡಿಕೊಳ್ಳುವುದು, ಇತರ ಜನರೊಂದಿಗೆ ಶಾಂತಿ-ಸೌಹಾರ್ದಯುತ ಬಾಳ್ವೆ — ಇದು ಈ ಸಮ್ಮೇಳನದಿಂದ ಹೊರಹೊಮ್ಮಿ ಬಂದಿರುವ ಚರಮ ಸಂದೇಶ.

ಈ ವಿಶ್ವಧರ್ಮಸಮ್ಮೇಳನವು ಏನನ್ನಾದರೂ ಸಾಧಿಸಿದ್ದರೆ ಅದು ಇದೇ; ಮತ್ತು, ಅದಕ್ಕೆ ಸ್ವಾಮಿ ವಿವೇಕಾನಂದರಿತ್ತ ಕೊಡುಗೆ ಅತ್ಯಂತ ಗಣನೀಯವಾದುದು.

ನಾವೀಗ ಈ ಚಾರಿತ್ರಿಕ ಘಟನೆಯ ಸಪಾದ ಶತಮಾನೋತ್ಸವವನ್ನು (೧೨೫ ನೆಯ ವರ್ಷ) ಆಚರಿಸುವುದರಲ್ಲಿದ್ದೇವೆ. ಆದುದರಿಂದ ಈ ಸಂದರ್ಭದಲ್ಲಿ ಸರ್ವಧರ್ಮಸಮ್ಮೇಳನದ ಉತ್ತರಕಾಲೀನ ವಿದ್ಯಮಾನಗಳ ಮೇಲೆ — ಅದರಲ್ಲೂ ಧಾರ್ಮಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ — ದೃಷ್ಟಿಹಾಯಿಸಿ ಚಿಂತನ-ಮಂಥನ ಮಾಡುವುದು ಆವಶ್ಯಕ. ಕಾಲಕ್ರಮದಲ್ಲಿ, ಆದರೆ ಸತತವಾಗಿ, ಮತಾಂಧತೆಯ ಪಿಡುಗು ಜಗತ್ತಿನಾದ್ಯಂತ ಹರಡಿ, ಜಗತ್ತನ್ನು ಹಿಂದಿದ್ದ ಅಸಹನೆಯ ಕಾಲಕ್ಕೆ ಮರಳಿ ಕೊಂಡೊಯ್ಯುತ್ತಿದೆ. ಇದರಿಂದ ಪ್ರಥಮ ಸರ್ವಧರ್ಮಸಮ್ಮೇಳನದ ಸಾಧನೆಗಳು ಸ್ವಲ್ಪಮಟ್ಟಿಗಾದರೂ ಸ್ಥಗಿತವಾಗಿವೆ ಎಂದರೆ ತಪ್ಪೇನಿಲ್ಲ. ಆದುದರಿಂದಲೇ ಇದು ವಿವೇಕಾನಂದ ಸ್ವಾಮಿಗಳ ಅಭಿಮಾನಿ ಅನುಯಾಯಿಗಳೆಲ್ಲರಿಗೂ ಚಿಂತಾಜನಕವಾದ ವಿಷಯ.

ಈಗಲೂ ದೊರಕಿರುವ ಸದಾವಕಾಶಗಳನ್ನು ಉಪಯೋಗಿಸಿಕೊಂಡು, ಜಗದ ಜನರಲ್ಲಿ ಹರಡುತ್ತಿರುವ ಈ ಅಹಿತಕಾರೀ ಪ್ರವೃತ್ತಿಯನ್ನು ತಡೆಗಟ್ಟಿ ಅವರ ಧಾರ್ಮಿಕ-ಸಾಮಾಜಿಕ ಜೀವನದಲ್ಲಿ ಮತ್ತೆ ವಿವೇಕಪ್ರಜ್ಞೆ ಮೂಡುವಂತೆ ಪ್ರಯತ್ನಿಸೋಣ

## ಸ್ವಾಮೀಜಿ ಬಗ್ಗೆ ವಿಲಿಯಂ ಜೇಮ್ಸ್

“ವಿವೇಕಾನಂದರು ಇಂಗ್ಲೆಂಡಿನಲ್ಲಿ ಮಾಡಿದ ಕೆಲವೊಂದು ಭಾಷಣಗಳನ್ನು ನಾನು ಓದುತ್ತಿದ್ದೆ - ಅವುಗಳನ್ನು ನಾನು ಕೇಳಿರಲಿಲ್ಲ. ಅವರ ಮಾತುಗಾರಿಕೆಯ ಶಕ್ತಿ ಅಪಾರ, ಅದಕ್ಕೋಸ್ಕರ ಅವರು ನಿಜಕ್ಕೂ ಒಂದು ಅದ್ಭುತವೇ ಸರಿ.. ಯಾವ ದೃಷ್ಟಿಯಿಂದ ನೋಡಿದರೂ ಅವರು ಮನುಕುಲಕ್ಕೆ ಒಂದು ಗೌರವವನ್ನು ತಂದುಕೊಡುವವರು.”

*(‘World Thinkers on Ramakrishna Vivekananda’, p.33, 2000, Fourth Edn, RKM Institute of Culture)*

# ಸ್ವಾಮಿ ವಿವೇಕಾನಂದರು ಹಾಗೂ ಚಿಕಾಗೋ ಭಾಷಣ

ಡಾ. ಡಿ.ಕೆ.ರಾಜೇಂದ್ರ

ವಿಶ್ವಧರ್ಮ ಸಮ್ಮೇಳನದ ಉದ್ದೇಶ ಏನೇ ಇದ್ದರೂ, ಅದರಿಂದ ಅತ್ಯಂತ ಪ್ರಸಿದ್ಧರಾದವರು ಹಾಗೂ ಮಹತ್ಕಾರ್ಯವನ್ನು ಸಾಧಿಸಿದವರು ಸ್ವಾಮಿ ವಿವೇಕಾನಂದರು. ಈ ವಿಷಯದ ಬಗ್ಗೆ ಬರೆದಿರುವ ಲೇಖಕರು ಕನ್ನಡದ ಹಿರಿಯ ವಿದ್ವಾಂಸರು ಹಾಗೂ ಲೇಖಕರು.



**ಸೆ**ಪ್ಟಂಬರ್ ೧೧, ೧೮೯೩ ವಿಶ್ವ ಧಾರ್ಮಿಕ ಚರಿತ್ರೆಯಲ್ಲಿ ಒಂದು ಐತಿಹಾಸಿಕ ಮಹತ್ವದ ದಿನ. ಭಾರತೀಯರ ಪಾಲಿಗೆ ಅದೊಂದು ಮರೆಯಲಾಗದ ಅಪೂರ್ವ ಘಟನೆಯ ದಿನ. ಏಕೆಂದರೆ ಅಂದು ಸ್ವಾಮಿ ವಿವೇಕಾನಂದರು ಭೋಗಭೂಮಿ ಎನಿಸಿದ ಚಿಕಾಗೋ ನಗರದಲ್ಲಿ ತಮ್ಮ ಐತಿಹಾಸಿಕ ಮಹತ್ವದ ಉಪನ್ಯಾಸ ನೀಡುವುದರ ಮೂಲಕ ಭಾರತದ ಕೀರ್ತಿಪತಾಕೆಯನ್ನು ಹಾರಿಸಿ ವಿಶ್ವದ ಗಮನವನ್ನು ಸೆಳೆದಿದ್ದರು. ವಿಶ್ವ ಭೂಪಟದಲ್ಲಿ ಭಾರತದ ಹೆಸರು ಪ್ರಜ್ವಲಿಸುವಂತೆ ಮಾಡಿ ವಿಶ್ವವಿಜೇತರೆನಿಸಿ, ವಿಶ್ವ ವಂದನೀಯರೂ ಆದರು.

ಹೌದು, ಸ್ವಾಮಿ ವಿವೇಕಾನಂದರ ವ್ಯಕ್ತಿತ್ವವೇ ಅಂತಹುದು. ಅವರ ನಿಲುವು, ನೋಟ, ಮಾತುಗಾರಿಕೆ, ಭಾಷಾಬಳಕೆ, ವಿಚಾರ ಮಂಡನೆ, ಅದರಲ್ಲಿನ ಚಿಂತನೆಗಳ ಸರಮಾಲೆ ಎಲ್ಲವೂ ಅವರಿಗೇ ವಿಶಿಷ್ಟವಾದವುಗಳು. ಭಾಷಣಕ್ಕೆ ಎದ್ದು ನಿಂತು ಅವರು ಆರಂಭಿಸಿದ ರೀತಿ, ''ಅಮೇರಿಕಾದ ಸಹೋದರಿಯರೇ ಮತ್ತು ಸಹೋದರರೇ'' ಎಂಬ ಸಂಬೋಧನೆಯೇ ಕ್ಷಣಾರ್ಧಲ್ಲಿ ಅವರನ್ನು ಲೋಕವಿಖ್ಯಾತರನ್ನಾಗಿ ಮಾಡಿತ್ತು. ನಿಲ್ಲದ ಕರತಾಡನ ಅವರ ಮಾತಿಗೆ ಸಿಕ್ಕ ಪ್ರತಿಕ್ರಿಯೆಯಾಗಿತ್ತು. ಭಾರತದ ಯುವ ಸಂನ್ಯಾಸಿಯೊಬ್ಬನಿಂದ ಅಂತಹ ಸಂಬೋಧನೆಯನ್ನಾಗಲೀ, ವೈಚಾರಿಕ ಚಿಂತನೆಗಳನ್ನಾಗಲೀ, ಅಥವಾ ಮಾತಿನ ವೈಖರಿಯನ್ನಾಗಲೀ ಅಲ್ಲಿ ಸೇರಿದ್ದ ಯಾರೊಬ್ಬರೂ ನಿರೀಕ್ಷಿಸಿರಲಿಲ್ಲ. ಆದರೆ ಅವರ ಸಿಂಹಗರ್ಜನೆ ಅಲ್ಲಿ ನೆರೆದಿದ್ದವರನ್ನೆಲ್ಲಾ ಕ್ಷಣಾರ್ಧದಲ್ಲಿ ಬೆಚ್ಚಿಬೀಳುವಂತೆ ಮಾಡಿತ್ತು. ಜಾತಿ-ಮತ-ಧರ್ಮ ಭೇದವಿಲ್ಲದೆ ಎಲ್ಲರ ಬಾಯಲ್ಲಿ ಅವರ ಹೆಸರು ಕೇಳಿಬರತೊಡಗಿತು. ದಿನಪತ್ರಿಕೆಗಳು ಮುಖಪುಟಗಳಲ್ಲಿ ಅವರ ಹೆಸರನ್ನು ಕೊಂಡಾಡಿದವು. ಅವರ ವಿಚಾರಗಳನ್ನು ದಪ್ಪದಪ್ಪ ಅಕ್ಷರಗಳಲ್ಲಿ ಪ್ರಕಟಿಸಿ ಮೆಚ್ಚುಗೆ ಸೂಚಿಸಿದವು. ಅಲ್ಲಿ ನೆರೆದಿದ್ದ ಸಂಘಸಂಸ್ಥೆಗಳವರು, ಅವರ ಭಾಷಣಕ್ಕೆ ಮರುಳಾದ ವಿಚಾರವಂತರು ತಮ್ಮತಮ್ಮ ಮನೆಗಳಿಗೆ ಆಹ್ವಾನವಿತ್ತು ಉಪನ್ಯಾಸ ನೀಡುವಂತೆ ಬೇಡಿಕೆಯಿತ್ತರು. ಸ್ವಾಮಿ ವಿವೇಕಾನಂದರ ಮಾನವೀಯ ಮೌಲ್ಯಗಳು ತುಂಬಿದ ಉಪನ್ಯಾಸ ಅವರೆಲ್ಲರ ಮನ ಗೆದ್ದಿತು. ಭಾರತದ ಬಗ್ಗೆ, ಭಾರತೀಯರ ಬಗ್ಗೆ ಹಾಗೂ ಹಿಂದೂಧರ್ಮದ ಬಗ್ಗೆ ಹೆಚ್ಚಿನ ಗೌರವ ಮೂಡುವಂತೆ ಮಾಡಿತ್ತು. ಸರ್ವಧರ್ಮ ಸಮ್ಮೇಳನದ ಬಗೆಗಿನ ಸ್ವಾಮಿ ವಿವೇಕಾನಂದರ ಅತ್ಯದ್ಭುತ ವಿಚಾರಪೂರಿತವಾದ ಚಿಂತನೆಯ ಮಿಂಚಿನ ಕಿಡಿಗಳು ಹಿಂದೂಧರ್ಮಕ್ಕೆ ವಿಶ್ವಮಾನ್ಯತೆಯನ್ನು ತಂದುಕೊಡಲು ಕಾರಣವಾಗಿದ್ದವು. ಇವರ ಉಪನ್ಯಾಸದ ನಂತರ 'ದಿ ನ್ಯೂಯಾರ್ಕ್ ಹೆರಾಲ್ಡ್' ಪತ್ರಿಕೆ ಅದನ್ನು ವರದಿ ಮಾಡಿದ್ದು ಹೀಗೆ : ''ವಿವೇಕಾನಂದರ ಮಾತುಗಳನ್ನು ಆಲಿಸಿದ ಮೇಲೆ ಇಂತಹ ಜ್ಞಾನಿಗಳ ದೇಶಕ್ಕೆ ಕ್ರೈಸ್ತ ಸಂನ್ಯಾಸಿಗಳನ್ನು ಕಳುಹಿಸುವುದು ಎಂತಹ ಮೂರ್ಖತನ ಎಂದು ನಮಗನ್ನಿಸುತ್ತದೆ'' ಎಂದು.

ಸರ್ವಧರ್ಮ ಸಮ್ಮೇಳನದ ವ್ಯವಸ್ಥೆಯ ಹಿಂದಿನ ಉದ್ದೇಶವನ್ನು ಹಲವರು ಹಲವು ರೀತಿಯಲ್ಲಿ ವಿಶ್ಲೇಷಿಸಿದ್ದಾರೆ. ಅದರಲ್ಲಿ ಮುಖ್ಯವಾದುದು ಸ್ವಾಮಿ ವಿವೇಕಾನಂದರ ವಿಶ್ಲೇಷಣೆ. ಅವರು ಭಾವಿಸುವಂತೆ ''ಕ್ರೈಸ್ತ ಧರ್ಮದ ಮೇಲ್ಮೆಯನ್ನು ಜಗತ್ತಿಗೆ ಸಾರುವುದೇ ಸರ್ವಧರ್ಮ ಸಮ್ಮೇಳನದ ಉದ್ದೇಶವಾಗಿತ್ತು.'' ಈ ಒಂದು ಅನಿಸಿಕೆ ಸ್ವಲ್ಪಮಟ್ಟಿಗೆ ಕೆಲವರಿಗೆ ಕಹಿಯಾಗಿ ಕಂಡರೂ ಅದು ಸತ್ಯ ಸಂಗತಿ. ಆದರೆ, ಸಮ್ಮೇಳನದ ಆ ಮೂಲ ಉದ್ದೇಶ

ವನ್ನೂ ಮೀರಿ ಅದರ ಫಲಿತಗಳು ಬೆಳೆದದ್ದು ಮಾತ್ರ ಧರ್ಮಕ್ಕೆ ಸಂದ ಜಯ. ಅದನ್ನು ಸಮ್ಮೇಳನದ ವಿಜ್ಞಾನ ವಿಭಾಗದ ಅಧ್ಯಕ್ಷರಾದ ಮೆರ್ವಿನ್ ರಿಸ್ನಲ್ ಅವರ ಮಾತುಗಳು ಸ್ಪಷ್ಟಪಡಿಸುತ್ತವೆ : ''ಕ್ರೈಸ್ತ ಜಗತ್ತಿಗೆ, ಮುಖ್ಯವಾಗಿ ಅಮೇರಿಕನ್ನರಿಗೆ ಇದು ಕಲಿಸಿದ ಪಾಠವೆಂದರೆ: ಕ್ರೈಸ್ತಧರ್ಮಕ್ಕಿಂತ ಹೆಚ್ಚು ಪೂಜ್ಯವಾದ ಅನೇಕ ಧರ್ಮಗಳು ಜಗತ್ತಿನಲ್ಲಿವೆ ಎಂಬುದು. ತಾತ್ತ್ವಿಕ ಚಿಂತನೆಯಲ್ಲಿ, ಆಧ್ಯಾತ್ಮಿಕ ಅನುಭವದ ಸಾಂದ್ರತೆಯಲ್ಲಿ, ಸ್ವತಂತ್ರವಾದ ಆಲೋಚನಾ ಶಕ್ತಿಯಲ್ಲಿ, ವೈಶಾಲ್ಯ ಮತ್ತು ಪ್ರಾಮಾಣಿಕತೆಯಲ್ಲಿ, ಸೌಂದರ್ಯದಲ್ಲಿ ಮತ್ತು ದಕ್ಷತೆಯಲ್ಲಿ ಕೂದಲೆಳೆಯಷ್ಟೂ ಯಾರಿಗೂ ಬಿಟ್ಟುಕೊಡದ ಆ ಧರ್ಮಗಳು ಕ್ರೈಸ್ತ ಧರ್ಮವನ್ನು ಹಿಂದೆ ಬಿಟ್ಟು ಎಷ್ಟೋ ಪಾಲು ಮುಂದುವರಿದಿವೆ.....''

ಸರ್ವಧರ್ಮ ಸಮ್ಮೇಳನದ ಉದ್ದೇಶ ಏನೇ ಇದ್ದರೂ ಅದರ ಯಶಸ್ಸು ಮಾತ್ರ ಊಹೆಗೂ ಮೀರಿದ್ದಾಗಿತ್ತು. ಆ ಯಶಸ್ಸಿನ ಕೇಂದ್ರಬಿಂದುವಾಗಿ ಮಿಂಚಿ ವಿಶ್ವದ ಗಮನ ಸೆಳೆದವರು ಭಾರತದ ಯುವ ಸಂನ್ಯಾಸಿ ಸ್ವಾಮಿ ವಿವೇಕಾನಂದರು ಎಂಬುದು ನಿರ್ವಿವಾದ. ಅವರು ಹೊಸತೇನನ್ನೂ ಬೋಧಿಸಲಿಲ್ಲ , ಹೊಸ ತತ್ತ್ವಗಳನ್ನೂ ಹುಟ್ಟುಹಾಕಲಿಲ್ಲ. ಅವರು ಸನಾತನ ಹಿಂದೂಧರ್ಮದ ತತ್ತ್ವಗಳನ್ನು ಪರಿಣಾಮಕಾರಿಯಾಗಿ ಅಲ್ಲಿ ಮಂಡಿಸಿದರು. ಅವುಗಳ ಶ್ರೇಷ್ಠತೆಯನ್ನು ಸಾರಿದರು. ಅವುಗಳಲ್ಲಿ ಅಡಗಿರುವ ಮಾನವೀಯ ಮೌಲ್ಯಗಳಿಗೆ ಒತ್ತುಕೊಟ್ಟು , ಅದರ ಅರಿವನ್ನು ಮನಮುಟ್ಟುವಂತೆ ಮಾಡಿಕೊಟ್ಟರು. ಭಾರತದ ಬಗ್ಗೆ ಪಾಶ್ಚಾತ್ಯರಲ್ಲಿದ್ದ ಸಂಕುಚಿತ ಭಾವನೆಗಳನ್ನು, ತಪ್ಪುಕಲ್ಪನೆಗಳನ್ನು ಹೋಗಲಾಡಿಸಿ ಹೊಸ ಭಾವನೆಗಳು ಮೂಡುವಂತೆ ಮಾಡಿದರು. ಹಿಂದೂ ಧರ್ಮದ ವೈಶಾಲ್ಯತೆಯನ್ನೂ, ಅದರ ಉದಾರತೆಯನ್ನೂ ಜಗತ್ತಿಗೆ ಮನದಟ್ಟಾಗಿಸಿದರು.

ಸ್ವಾಮಿ ವಿವೇಕಾನಂದರು ಸರ್ವಧರ್ಮ ಸಮ್ಮೇಳನದಲ್ಲಿ ನೀಡಿದ ಉಪನ್ಯಾಸದ ವಿಷಯ: ''ಸಂಪ್ರದಾಯ ಹಿಂದೂ ಧರ್ಮ'' ಎಂಬುದಾಗಿತ್ತು. ಹಿಂದೂಧರ್ಮದ ಪ್ರತಿನಿಧಿಯಾಗಿ ಸ್ವಾಮೀಜಿ ಅಲ್ಲಿ ಭಾಗವಹಿಸಿದ್ದರು. ಅದರ ಪ್ರತಿಪಾದಕರಾಗಿ ಅವರು ಎಲ್ಲರ ಗಮನ ಸೆಳೆದರು.

ಆದರೆ, ಅವರು ಆ ವೇದಿಕೆಗೆ ತಲುಪಿ ನಿಂತು ಮಾತನಾಡುವವರೆಗೆ ಅವರು ಅನುಭವಿಸಿದ ನೋವು, ಸಂಕಟ ಅಷ್ಟಿಷ್ಟಲ್ಲ. ಅನುಭವಿಸಿದ ಯಾತನೆ, ಆತಂಕ ಒಂದೆರಡಲ್ಲ. ಬೊಂಬಾಯಿಯಲ್ಲಿ ಹಡಗನ್ನು ಹತ್ತಿ ಪ್ರಯಾಣವನ್ನು ಆರಂಭಿಸಿ ಸಿಲೋನ್, ಸಿಂಗಾಪುರ, ಜಪಾನ್ ದೇಶಗಳನ್ನು ಹಾಯ್ದು ಅಮೇರಿಕಾ ತಲುಪಿ ಚಿಕಾಗೋ ನಗರಕ್ಕೆ ಬಂದರೂ, ಸಮ್ಮೇಳನದ ದಿನಾಂಕ ಎರಡು ತಿಂಗಳಷ್ಟು ಮುಂದೆ ಹೋಗಿರುವುದು ತಿಳಿದಾಗ ಆತಂಕ ಮತ್ತಷ್ಟು ಹೆಚ್ಚಾಯಿತು. ಕಷ್ಟದ ದಿನಗಳು ಮತ್ತಷ್ಟು ಎದುರಾದವು. ಕೈಯಲ್ಲಿನ ಹಣ ನೀರಿನಂತೆ ಖರ್ಚಾಗತೊಡಗಿತು. ಅಲ್ಲದೇ, ಸಮ್ಮೇಳನದಲ್ಲಿ ಭಾಗವಹಿಸಲು ಇರಬೇಕಾದ ಕೆಲವೊಂದು ತಾಂತ್ರಿಕ ತೊಂದರೆಗಳೂ ಅವರಿಗೆ ಹೆಚ್ಚಿನ ಆತಂಕಕ್ಕೆ ಕಾರಣವಾದವು. ಮುಖ್ಯವಾಗಿ ಸಮ್ಮೇಳನದಲ್ಲಿ ಭಾಗವಹಿಸುವವರು ಒಂದು ಸಂಘವನ್ನು ನಿರ್ದಿಷ್ಟವಾಗಿ ಪ್ರತಿನಿಧಿಸಬೇಕೆಂಬುದಾಗಲೀ ಅಥವಾ ತಮ್ಮ ಭಾಗವಹಿಸುವಿಕೆಯನ್ನು ಮೊದಲೇ ತಿಳಿಸಿರಬೇಕೆಂಬುದಾಗಲೀ ಪೂರ್ಣಗೊಂಡಿರಲಿಲ್ಲ. ಇವೆಲ್ಲದರ ಜೊತೆಗೆ, ಚಿಕಾಗೋ ನಗರದಲ್ಲಿ ವಾಸ್ತವ್ಯ ತುಂಬಾ ದುಬಾರಿಯಾದ್ದರಿಂದ ಅವರು ಬೇರೆಡೆಗೆ ತೆರಳುವುದು ಅನಿವಾರ್ಯವಾಗಿತ್ತು. ಆ ಕಾರಣದಿಂದ ಸ್ವಾಮೀಜಿಯವರು ಚಿಕಾಗೋದಿಂದ ಬಾಸ್ಟನ್ನಿಗೆ ತಮ್ಮ ವಾಸ್ತವ್ಯವನ್ನು ಬದಲಾಯಿಸಿದರು. ಅದು ಹಲವು ರೀತಿಯಲ್ಲಿ ಅವರಿಗೆ ಅನುಕೂಲವೇ ಆದರೂ, ಕೆಲವೊಂದು ತೊಂದರೆಗಳೂ ಬೆನ್ನುಬಿಡದೆ ಕಾಡಿದವು. ಹಾಗೇ ರೈಲಿನಲ್ಲಿ ಪ್ರಯಾಣಿಸುವಾಗ ಅವರಿಗೆ ಒಬ್ಬ ಅಮೇರಿಕನ್ ಮಹಿಳೆಯ ಪರಿಚಯವಾಯಿತು. ಅವಳಿಂದ ಸಹಾಯವೂ ದೊರೆಯಿತು. ಆಕೆ ತನ್ನ ಮನೆಯಲ್ಲಿಯೇ ಇರಲು ಅವಕಾಶ ಮಾಡಿಕೊಟ್ಟಳು. ಅಲ್ಲಿ ಅವರಿಗೆ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪ್ರೊ. ರೈಟ್ ಎಂಬುವವರ ಪರಿಚಯವಾಗಿ, ಮುಂದಿನ ತಾಂತ್ರಿಕ ತೊಂದರೆಗಳೆಲ್ಲವೂ ಬಗೆಹರಿದು ಸಮ್ಮೇಳನದಲ್ಲಿ ಭಾಗವಹಿಸುವ ದಾರಿ ಸುಗಮವಾಯಿತು. ನಂತರ, ಸ್ವಾಮೀಜಿ ಬಾಸ್ಟನ್ನಿನಿಂದ ಚಿಕಾಗೋಗೆ ಪ್ರಯಾಣ ಬೆಳೆಸಿದರು. ಪ್ರೊ. ರೈಟ್‌ರವರು ಸ್ವಾಮೀಜಿಯವರಿಗೆ ಎಲ್ಲಾ ಅನುಕೂಲಗಳನ್ನು ಮಾಡಿಕೊಟ್ಟಿದ್ದರು. ಆದರೆ, ಅಲ್ಲಿಯೂ ಕೆಲವು ಅಡಚಣೆಗಳು ಅವರಿಗೆ ಎದುರಾದವು. ಹಸಿವು ನಿದ್ದೆಗಳಿಲ್ಲದ ರಾತ್ರಿಗಳು ಸಾಮಾನ್ಯವೆನಿಸಿದವು. ಸ್ವಾಮೀಜಿ ಸ್ವಲ್ಪವೂ ವಿಚಲಿತರಾಗದೆ ಅವೆಲ್ಲವನ್ನೂ ಧೈರ್ಯದಿಂದ ಎದುರಿಸಿದರು. ಆಗ ಅವರ ನೆರವಿಗೆ ಬಂದದ್ದು ಅಲ್ಲಿಯ ಶ್ರೀಮಂತ ಮನೆಯ ಒಬ್ಬ ಹೆಣ್ಣುಮಗಳು. ಹಸಿದು ಕಂಗಾಲಾಗಿದ್ದ ಇವರನ್ನು ನೋಡಿ ವಿಚಾರಿಸಿ ಅವರನ್ನು ಸರ್ವಧರ್ಮ ಸಮ್ಮೇಳನಕ್ಕೆ ತಲುಪಿಸುವ ವ್ಯವಸ್ಥೆ ಮಾಡಿಕೊಟ್ಟಳು.

ಸ್ವಾಮಿ ವಿವೇಕಾನಂದರು ಎಂದೂ ತಮ್ಮ ಗುರಿಯನ್ನು ಬಿಟ್ಟುಕೊಟ್ಟವರಲ್ಲ , ಸಂಕಲ್ಪ ಶಕ್ತಿಯನ್ನು ದುರ್ಬಲಗೊಳಿಸಿಕೊಂಡವರಲ್ಲ. ಹಸಿವು, ನೀರಡಿಕೆ, ನಿದ್ರೆಯಂತಿರಲಿ, ಎಂತಹ ಅವಮಾನವನ್ನೂ ನುಂಗಿಕೊಂಡು ತಮ್ಮ ಗುರಿಯತ್ತ ದಿಟ್ಟ ಹೆಜ್ಜೆಯಿಟ್ಟವರು. ಸರ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಿ ಇಡೀ ವಿಶ್ವಕ್ಕೆ ಹಿಂದೂ ಧರ್ಮದ ಪರಿಚಯ ಮಾಡಿಕೊಡಬೇಕೆಂಬ ಅವರ ನಿರ್ಧಾರದಿಂದ ಅವರು ಹಿಂದೆ ಸರಿಯಲಿಲ್ಲ. ಕೊನೆಗೂ ಸ್ವಾಮೀಜಿ ಸರ್ವಧರ್ಮ ಸಮ್ಮೇಳನದ ವೇದಿಕೆಯನ್ನೇರಿ, ಹಿಂದೂ ಧರ್ಮದ ಪ್ರತಿನಿಧಿಯಾಗಿ ಉಜ್ವಲ ಉಪನ್ಯಾಸ ನೀಡಿ ವಿಶ್ವದ ಗಮನ ಸೆಳೆದರು. ಅದನ್ನು ಅಲ್ಲಿಯ ವಿವಿಧ ಪತ್ರಿಕೆಗಳು ಬಣ್ಣಿಸಿದ್ದು ಹೀಗೆ: ''ವಿಶ್ವಧರ್ಮ ಸಮ್ಮೇಳನದಲ್ಲಿ ಎಲ್ಲರ ಗಮನ ಸೆಳೆದ ವ್ಯಕ್ತಿಯೆಂದರೆ ಸ್ವಾಮಿ ವಿವೇಕಾನಂದ ಎಂಬ ಯುವ ಸಂನ್ಯಾಸಿ. ಇವರದು ಸದೃಢ ಕಾಯ, ಇವರ ಮುಗುಳ್ನಗೆಯು ಅಯಸ್ಕಾಂತದಂತೆ ಎಲ್ಲರನ್ನೂ ಆಕರ್ಷಿಸುತ್ತದೆ. ಇವರು ನಿಂಬೆ ಬಣ್ಣದ ಅಥವಾ

ಕೆಂಪು ಬಣ್ಣದ ಮುಂಡಾಸನ್ನು ಧರಿಸುತ್ತಾರೆ. ಅದು ಅವರ ತಲೆಗೆ ಕಿರೀಟದಂತಹ ಶೋಭೆಯನ್ನು ತರುತ್ತದೆ. ಉದ್ದ ನಿಲುವಂಗಿ, ಕೇಸರಿ ಬಣ್ಣದ ಪಟ್ಟಿಯನ್ನು ಸೊಂಟದಭಾಗಕ್ಕೆ ಕಟ್ಟಿದ್ದು, ಅದು ಮೊಣಕಾಲವರೆಗೆ ತೂಗಿದೆ. ಅವರು ಉತ್ತಮವಾಗಿ ಆಂಗ್ಲ ಭಾಷೆಯನ್ನು ಮಾತನಾಡಬಲ್ಲರು. ಸಭಿಕರು ಕೇಳುವ ಪ್ರಶ್ನೆಗಳಿಗೆ ಪ್ರಾಮಾಣಿಕವಾಗಿ ಕ್ಷಣಮಾತ್ರದಲ್ಲಿ ಉತ್ತರವನ್ನು ನೀಡುತ್ತಾರೆ. ಅವರ ಸಂಭಾಷಣೆಯಲ್ಲಿ ಸರಳತೆ ಎದ್ದು ಕಾಣುತ್ತದೆ. ಆದರೆ, ಸ್ತ್ರೀಯರ ಜೊತೆ ಮಾತನಾಡುವ ವೇಳೆ ಸ್ವಲ್ಪ ಸಂಕೋಚಪಡುತ್ತಾರೆ.''

''ದಿ ಇಂಡಿಯನ್ ಮಿರರ್'' ನಿಯತಕಾಲಿಕೆಯಲ್ಲಿ ಸ್ವಾಮೀಜಿಯವರ ನಿಲುವು ಮತ್ತು ಮಾತುಗಾರಿಕೆಯ ಬಗ್ಗೆ ಬರೆದದ್ದು ಹೀಗೆ: ''ಪ್ರೊ. ಸ್ವಾಮಿ ವಿವೇಕಾನಂದರು ಭಾರತದ ಪುರಾತನ ವಿದ್ಯೆಗಳನ್ನು ಕರಗತ ಮಾಡಿಕೊಂಡಿರುವ ಒಬ್ಬ ಸ್ಫುರದ್ರೂಪಿಯುವ ಸಂನ್ಯಾಸಿ. ವೇದಿಕೆಯಲ್ಲಿ ಕ್ರೈಸ್ತ ಚರ್ಚುಗಳಿಂದ ಬಂದಿದ್ದ ಅನೇಕ ಮಂದಿ ಪಾದ್ರಿಗಳು ಇದ್ದರು. ಆದರೆ ಪ್ರೊಫೆಸರ್‌ರವರ (ಸ್ವಾಮೀಜಿ) ಮಾತಿನ ಬಿರುಗಾಳಿಯ ಮುಂದೆ ಅವರು ಅಶಕ್ಯರಾದರು. ಪ್ರೊಫೆಸರ್‌ರವರ ಪ್ರಕಾಂಡ ಪಾಂಡಿತ್ಯದಿಂದ ಕೂಡಿದ ಮಾತುಗಾರಿಕೆ, ಫಳ ಫಳ ಹೊಳೆಯುವ ಅವರ ಸುಂದರ ಮುಖ, ಉತ್ಕೃಷ್ಟ ಆಂಗ್ಲ ಭಾಷೆಯ ಮಾತುಗಳು ಶ್ರೋತೃವರ್ಗವನ್ನು ಮೂಕವಿಸ್ಮಿತರನ್ನಾಗಿ ಮಾಡಿತು. ಅವರು ಮಾಡಿದ ಮೊದಲನೆಯ ಭಾಷಣದಿಂದ ಹಿಡಿದು ಅವರು ಹೋದಲ್ಲೆಲ್ಲಾ ಜನರು ತಂಡೋಪತಂಡವಾಗಿ ಹಿಂಬಾಲಿಸುತ್ತಿದ್ದಾರೆ. ಕಟ್ಟಡಕ್ಕೆ ಹೋಗುವಾಗಲೂ, ಹೊರಗೆ ಬರುವಾಗಲೂ ನೂರಾರು ಜನರು ವಿಶೇಷವಾಗಿ ಎಲ್ಲಾ ಸ್ತರದ ಸ್ತ್ರೀಯರೂ ಅವರನ್ನು ಒಮ್ಮೆಯಾದರೂ ಭೇಟಿಯಾಗಬೇಕೆಂದು, ಹಸ್ತಲಾಘವ ಮಾಡಬೇಕೆಂದು ಹಾತೊರೆಯುತ್ತಿದ್ದಾರೆ. ಅನೇಕ ಶ್ರೀಮಂತ ಮಹಿಳೆಯರು ತಮ್ಮ ಸ್ಥಾನಮಾನಗಳನ್ನು ಲೆಕ್ಕಿಸದೇ, ಎಲ್ಲ ಕಟ್ಟಳೆಗಳನ್ನೂ ಮೀರಿ ಒಮ್ಮೆಯಾದರೂ ಭೇಟಿ ಮಾಡಲು ಹಂಬಲಿಸುತ್ತಿದ್ದಾರೆ....''

ಸ್ವಾಮಿ ವಿವೇಕಾನಂದರ ಆಕೃತಿ, ವ್ಯಕ್ತಿತ್ವ ಹಾಗೂ ಮಾತುಗಾರಿಕೆ ಈ ಮೂರೂ ಮುಪ್ಪುರಿಗೊಂಡು ಅಲ್ಲಿ ನೆರೆದಿದ್ದವರ ಮನಸ್ಸನ್ನು ಸೂರೆಗೊಂಡಿತು. ಭಾರತೀಯ ಯುವ ಸಂನ್ಯಾಸಿಯ ಆ ಸಿಂಹಗರ್ಜನೆಯ ಮಾತುಗಳು ಅವರನ್ನೆಲ್ಲಾ ಮಂತ್ರಮುಗ್ಧರನ್ನಾಗಿಸಿದ್ದವು. ಅಮೇರಿಕಾದ ಉದ್ದಗಲಕ್ಕೆ ಅವರ ಉಪನ್ಯಾಸದ ಸರಮಾಲೆಗೆ ಮನಸೋಲದವರಿರಲಿಲ್ಲ. ಅವರ ಮಾತನ್ನು ಕೇಳಲು, ಅವರ ವಿವರಗಳನ್ನು ತಿಳಿಯಲು ಜನ ಮುಗಿಬೀಳುತ್ತಿದ್ದರು. ಸ್ವಾಮಿ ವಿವೇಕಾನಂದರಂತಹ ಆಕರ್ಷಕ ವ್ಯಕ್ತಿತ್ವ ಅವರೆಲ್ಲರ ಮನ ಸೂರೆಗೊಂಡಿತ್ತು. ''East is East West is West, They never meet'' ಎಂಬ ಮಾತನ್ನು ಸುಳ್ಳಾಗಿಸಿ, ವಿಶ್ವಮಾನ್ಯತೆಯನ್ನು ಮೆರೆದ ಅವರ ಮಾತುಗಳು ಅವರೆಲ್ಲರನ್ನೂ ರೋಮಾಂಚನಗೊಳಿಸಿದವು. ಅಲ್ಲಿ ನೆರೆದಿದ್ದವರ ಮನದಲ್ಲಿ ಹೊಸ ಭಾವನೆಗಳನ್ನು, ಆಲೋಚನೆಗಳನ್ನು ಬಿತ್ತತೊಡಗಿದವು. ಅವರ ವೈಚಾರಿಕ ಮನೋಭಾವಕ್ಕೆ ಎಲ್ಲರೂ ಮನಸೋತಿದ್ದರು.

ಸರ್ವಧರ್ಮ ಸಮ್ಮೇಳನದಲ್ಲಿ ಮಾಡಿದ ಉಪನ್ಯಾಸಗಳ ಸಂಖ್ಯೆ ಹಲವು, ಉಪನ್ಯಾಸ ಮಾಡಿದವರ ಸಂಖ್ಯೆಯೂ ಹಲವು, ಆದರೆ ನೆನಪಿನಲ್ಲಿ ಉಳಿದದ್ದು, ಪ್ರಚಂಡ ಪ್ರಭಾವ – ಪರಿಣಾಮ ಬೀರಿದ್ದು ಮಾತ್ರ ಒಂದೇ, ಅದು ಸ್ವಾಮಿ ವಿವೇಕಾನಂದರ ಉಪನ್ಯಾಸ. ಅವರೇ ಅದರ ಕೇಂದ್ರಬಿಂದುವಾಗಿ ಮೆರೆದರು. ಎಷ್ಟರ ಮಟ್ಟಿಗೆಂದರೆ, ಸಮ್ಮೇಳನದ ಅಷ್ಟೂ ದಿನವೂ, ಪ್ರತಿ ಕೊನೆಯ ಉಪನ್ಯಾಸ ಸ್ವಾಮೀಜಿಯವರದ್ದಾಗಿರುತ್ತಿತ್ತು. ಸಮ್ಮೇಳನಾಧ್ಯಕ್ಷರೇ ಸ್ವಾಮೀಜಿಯವರಿಗೆ ಅಂತಹ ಒಂದು ಬೇಡಿಕೆ ಇಟ್ಟಿದ್ದರಂತೆ. ನೀರಸ ಉಪನ್ಯಾಸದ ಮಧ್ಯೆ ಎದ್ದು ಹೋಗುವವರನ್ನು ತಡೆಯುವ ತಂತ್ರವೂ ಇದಾಗಿತ್ತು. ಸ್ವಾಮೀಜಿಯವರ ಭಾಷಣ ಕೊನೆಯಲ್ಲಿದೆ ಎಂಬುದನ್ನು ತಿಳಿದು ಅದಕ್ಕೆ ಆಕರ್ಷಿತರಾಗಿ ಶ್ರೋತೃಗಳು ಕಾದು ಕುಳಿತಿರುತ್ತಿದ್ದರು.

ಅಷ್ಟಕ್ಕೂ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಮಂಡಿಸಿದ ವಿಚಾರಗಳೇನು? ಹಿಂದೂಧರ್ಮದ ಬಗ್ಗೆ ಅವರು ಏನು ಹೇಳಿದರು? ಅದನ್ನು ಪ್ರತಿಪಾದಿಸಿದ ರೀತಿಯಾದರೂ ಹೇಗಿತ್ತು? ಅವರ ಸರ್ವಧರ್ಮದ ಕಲ್ಪನೆಯಾದರೂ ಎಂತಹುದು? ಅವರ ಉಪನ್ಯಾಸದ ಆಕರ್ಷಣೆಯಾದರೂ ಏನು? ಈ ಮುಂತಾದ ಪ್ರಶ್ನೆಗಳು ನಮ್ಮನ್ನು ಕಾಡುವುದು ಸಹಜ.

ಕೊನೆಯ ಪ್ರಶ್ನೆಯನ್ನೇ ಮೊದಲ ಪ್ರಶ್ನೆಯಾಗಿ ನೋಡುವುದಾದರೆ: ಅವರ ಮಾತುಗಾರಿಕೆ, ಅದನ್ನು ಅವರು ಆರಂಭಿಸಿದ ರೀತಿ ಹಾಗೂ ಅಲ್ಲಿ ಅನಾವರಣಗೊಂಡ ಅವರ ವ್ಯಕ್ತಿತ್ವ ಅಪೂರ್ವ ರೀತಿಯದ್ದು. ಅವರ ಮಾತುಗಳಲ್ಲೇ ನೋಡುವುದಾದರೆ : ''ಅಮೇರಿಕಾದ ಸಹೋದರಿಯರೆ ಮತ್ತು ಸಹೋದರರೆ, ನಮಗೆ ನೀವು ನೀಡಿರುವ ಆತ್ಮೀಯವಾದ ಸ್ವಾಗತಕ್ಕೆ ವಂದನೆಗಳನ್ನು ಸಲ್ಲಿಸಲು ಪ್ರಯತ್ನಿಸುತ್ತಿರುವ ಈ ಸಮಯದಲ್ಲಿ ನನ್ನ ಹೃದಯ ಅವರ್ಣನೀಯ ಆನಂದದಿಂದ ತುಂಬಿ ತುಳುಕುತ್ತಿದೆ. ಪ್ರಪಂಚದ ಅತ್ಯಂತ ಪ್ರಾಚೀನವಾದ ಸಂನ್ಯಾಸಿಗಳ ಸಂಘದ ಪರವಾಗಿ ನಿಮಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ವಿವಿಧ ಧರ್ಮಗಳ ಮಾತೆಯರ ಪರವಾಗಿ ನಿಮಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಹಿಂದೂಧರ್ಮಕ್ಕೆ ಸೇರಿದ ಎಲ್ಲಾ ವರ್ಗಗಳ, ಎಲ್ಲಾ ಪಂಥಗಳ ಕೋಟ್ಯನುಕೋಟಿ ಜನರ ಪರವಾಗಿ ನಿಮಗೆ ಕೃತಜ್ಞತೆಯನ್ನು ಅರ್ಪಿಸುತ್ತೇನೆ.... ಇದೇ ವೇದಿಕೆಯಲ್ಲಿ ನಿಂತು ಕೆಲವು ಭಾಷಣಕಾರರು; ಪೂರ್ವ ದೇಶಗಳಿಂದ ಬಂದಿರುವ ಇವರು ಧಾರ್ಮಿಕ ಸಹನೆಯ ಭಾವನೆಯನ್ನು ವಿವಿಧ ದೇಶಗಳಿಗೆ ಒಯ್ಯುವ ಗೌರವಕ್ಕೆ ಪಾತ್ರರಾಗುವರು ಎಂದು ಹೇಳಿದ್ದು, ಹಾಗೆ ಹೇಳಿದ ಭಾಷಣಕಾರರಿಗೂ ನಾನು ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಧಾರ್ಮಿಕ ಸಹನೆಯನ್ನು, ಎಲ್ಲ ಧರ್ಮಗಳೂ ಸ್ವೀಕಾರಯೋಗ್ಯ ಎಂಬುದನ್ನು ಜಗತ್ತಿಗೆ ಬೋಧಿಸಿದ ಧರ್ಮಕ್ಕೆ ಸೇರಿದವನು ನಾನು ಎಂಬ ಹೆಮ್ಮೆ

ನನ್ನದು. ಪರಧರ್ಮ ಸಹಿಷ್ಣುತೆಯಲ್ಲಿ ನಮಗೆ ನಂಬಿಕೆ ಉಂಟು. ಅಷ್ಟೇ ಅಲ್ಲ, ಎಲ್ಲ ಧರ್ಮಗಳೂ ಸತ್ಯ ಎಂಬುದನ್ನು ನಾವು ಒಪ್ಪುತ್ತೇವೆ. ಜಗತ್ತಿನ ಎಲ್ಲಾ ರಾಷ್ಟ್ರಗಳಲ್ಲಿ, ಎಲ್ಲಾ ಧರ್ಮಗಳಲ್ಲಿ ಯಾರು ಯಾರು ಹಿಂಸೆಗೆ ಒಳಗಾದರೋ ಅವರಿಗೆಲ್ಲಾ ಆಶ್ರಯ ನೀಡಿದ ದೇಶಕ್ಕೆ ಸೇರಿದವನು ನಾನು ಎಂಬ ಹೆಮ್ಮೆ ನನ್ನದು. ಇಂದಿಗೂ ಕೋಟ್ಯಂತರ ಜನರು ಪಠಿಸುತ್ತಿರುವ ಶ್ಲೋಕವೊಂದರ ಕೆಲವು ಪಂಕ್ತಿಗಳನ್ನು ನಿಮ್ಮ ಮುಂದೆ ಹೇಳುತ್ತೇನೆ. ಬೇರೆ ಬೇರೆ ಕಡೆಗಳಲ್ಲಿ ಹುಟ್ಟಿದ ನದಿಗಳು ಕೊನೆಗೆ ಸಾಗರದಲ್ಲಿ ಸಂಗಮಗೊಳ್ಳುವಂತೆ, ಹೇ ಭಗವನ್, ಮಾನವರು ತಮ್ಮ ತಮ್ಮ ಸಂಸ್ಕಾರಗಳಿಗೆ ತಕ್ಕಂತೆ, ನೇರವಾಗಿಯೋ ವಕ್ರವಾಗಿಯೋ ಇರುವ ಪಂಥಗಳನ್ನು ಅನುಸರಿಸುತ್ತಾರೆ. ಅವೆಲ್ಲವೂ ನಿನ್ನೆಡೆಗೆ ಕರೆದೊಯ್ಯುತ್ತವೆ'' ಎಂದು ಆರಂಭಿಸಿ, ವಿಶ್ವದ ಅಶಾಂತಿಗೆ ಕಾರಣವಾಗಿರುವುದರತ್ತ ಗಮನ ಸೆಳೆದು, ಅದರಿಂದ ಹೊರಬರುವುದಕ್ಕೆ ಈ ವಿಶ್ವಧರ್ಮ ಸಮ್ಮೇಳನ ನಾಂದಿಯಾಗಬೇಕೆಂಬ ಸ್ವಾಮಿ ವಿವೇಕಾನಂದರ ಆಶಯದ ಮಾತುಗಳು ಇಡೀ ಸಭೆಯನ್ನು ರೋಮಾಂಚನಗೊಳಿಸಿದವು. ಅವರ ಒಂದೊಂದು ನುಡಿಯೂ ಬೆಂಕಿಯ ಚೆಂಡಿನಂತೆ ಎಲ್ಲರ ಹೃದಯವನ್ನು ಬಡಿದು ಎಚ್ಚರಗೊಳಿಸಿತು. ಮುಂದುವರಿದು, ''ಅತ್ಯಂತ ಮಹತ್ವಪೂರ್ಣವಾದ ಸಭೆಗಳಲ್ಲಿ ಒಂದು ಇಂದು ನಡೆದಿರುವ ಈ ಸಭೆ. 'ಯಾರೇ ಆಗಲೀ, ಯಾವುದೇ ರೂಪದಲ್ಲೇ ಆಗಲಿ ನನ್ನ ಬಳಿಗೆ ಬಂದರೆ ನಾನು ಅವರನ್ನು ಸ್ವೀಕರಿಸುತ್ತೇನೆ. ಅಂತಿಮವಾಗಿ ನನ್ನ ಬಳಿಗೆ ಬರುವ ವಿವಿಧ ಪಂಥಗಳಲ್ಲಿ ಸಾಗಿ ಬಂದು ನನ್ನನ್ನೇ ಸೇರಲು ಎಲ್ಲ ಜನರೂ ಪ್ರಯತ್ನಿಸುತ್ತಿದ್ದಾರೆ' ಎಂಬ ಗೀತೆಯ ಅದ್ಭುತ ತತ್ತ್ವ ಸತ್ಯವನ್ನು ಜಗತ್ತಿಗೆ ಸಾರುವುದಕ್ಕೆ ಈ ಸಭೆಯೊಂದು ಸಾಕು. ಸಂಕುಚಿತ ಪಂಥಭಾವನೆ, ಸ್ವಮತಾಭಿಮಾನ, ಅದರ ಭೀಕರ ಸಂತಾನವಾದ ಮತಾಂಧತೆ, ಇವು ಸುಂದರ ಪೃಥ್ವಿಯನ್ನು ಬಹು ಕಾಲದಿಂದ ಬಾಧಿಸುತ್ತಿವೆ.....'' ಎಂದು ಮುಂದುವರಿಸಿ, ಇವುಗಳ ಅಂತ್ಯಕ್ರಿಯೆಯನ್ನು ಸೂಚಿಸುವ ಘಂಟಾನಾದವಾಗಲಿ ಎಂಬ ಆಶಯವನ್ನು ವ್ಯಕ್ತಪಡಿಸಿದ ರೀತಿ ಹೊಸದೊಂದು ಚಿಂತನ ಜಗತ್ತನ್ನೇ ತೆರೆದಂತಾಗಿತ್ತು.

### ''ನಮ್ಮಲ್ಲಿ ಏಕೆ ಒಮ್ಮತವಿಲ್ಲ?''

ಎಂಬ ಪ್ರಶ್ನೆಯನ್ನು ಎತ್ತಿಕೊಂಡು ಸ್ವಾಮೀಜಿ, ಬಾವಿಯ ಕಪ್ಪೆ, ಸಮುದ್ರ ಕಪ್ಪೆಯ ಉದಾಹರಣೆ ಮೂಲಕ ಅದನ್ನು ವಿವರಿಸಿದ ರೀತಿ ಅದ್ಭುತವಾಗಿತ್ತು: ''ಯಾವಾಗಲೂ ನಮ್ಮ ಮುಂದಿರುವ ಕಷ್ಟ ಇದೇ, ನಾನೊಬ್ಬ ಹಿಂದು, ನಾನು ಸಣ್ಣ ಬಾವಿಯಲ್ಲಿ ಕುಳಿತುಕೊಂಡು ಜಗತ್ತೆಲ್ಲಾ ಈ ನನ್ನ ಬಾವಿ ಎಂದು ಯೋಚಿಸುತ್ತಿರುವೆ. ಕ್ರೈಸ್ತರು ತಮ್ಮ ಪುಟ್ಟ ಬಾವಿಯಲ್ಲಿ ಕುಳಿತು ಜಗತ್ತೆಲ್ಲಾ ಇಷ್ಟೇ ಎಂದು ತಿಳಿಯುವರು. ಮಹಮ್ಮದೀಯರು ತಮ್ಮ ಪುಟ್ಟ ಬಾವಿಯಲ್ಲಿ ಕುಳಿತು ಪ್ರಪಂಚವೆಲ್ಲಾ ಇಷ್ಟೇ ಎಂದು ತಿಳಿಯುವರು. ನಮ್ಮ ನಮ್ಮ ಪುಟ್ಟ ಪ್ರಪಂಚಗಳ ಗೋಡೆಗಳನ್ನು ಒಡೆದು ಹಾಕಲು ಮಹತ್ತರವಾದ ಪ್ರಯತ್ನಗಳನ್ನು ನಡೆಸುತ್ತಿರುವ ಅಮೆರಿಕನ್ನರೇ, ನಿಮಗೆ ನನ್ನ ಕೃತಜ್ಞತೆಗಳು. ಈ ನಿಮ್ಮ ಗುರಿಯನ್ನು ಸಾಧಿಸಲು ಭಗವಂತ ಸಹಾಯಮಾಡುವನೆಂದು ಆಶಿಸುತ್ತೇನೆ.''

ಸ್ವಾಮಿ ವಿವೇಕಾನಂದರು ಸರ್ವಧರ್ಮ ಸಮ್ಮೇಳನಕ್ಕೆ ಅದ್ಭುತವಾದ ಚಾಲನೆಯನ್ನು, ಶಕ್ತಿಯನ್ನೂ ತುಂಬಿದರು. ಅಷ್ಟೇ ಅಲ್ಲ ತಮ್ಮ ಅಪೂರ್ವ ಚಿಂತನೆಗಳ ಮೂಲಕ ಎಲ್ಲರ ಕಣ್ತೆರೆಸಿ ಹೊಸ ಆಲೋಚನೆಗೆ ತೊಡಗುವಂತೆ ಪ್ರೇರೇಪಿಸಿದರು. ಹಿಂದೂ ಧರ್ಮ ಏಕೆ ಶ್ರೇಷ್ಠ? ಅದರಲ್ಲಿರುವ ತತ್ತ್ವಗಳೇನು? ಸಿದ್ಧಾಂತಗಳೇನು? ಅವು ಎಷ್ಟು ಪ್ರಸ್ತುತ? ಭಾರತೀಯರು ಅವನ್ನು ಏಕೆ ನಂಬುತ್ತಾರೆ? ಆತ್ಮದ ಕಲ್ಪನೆ ಎಷ್ಟು ಸರಿ? ವೇದಗಳ ಮಹತ್ವ ಎಂತಹುದು? ಮೂರ್ತಿಪೂಜೆಯ ಆವಶ್ಯಕತೆ ಎಷ್ಟು? ಮುಂತಾದ ಪ್ರಶ್ನೆಗಳನ್ನು ಎತ್ತಿಕೊಂಡು ಸ್ವಾಮೀಜಿ ವಿಶ್ಲೇಷಿಸತೊಡಗಿದರು. ಅಲ್ಲಿ ನೆರೆದಿದ್ದ ಅನ್ಯಧರ್ಮೀಯರಿಗೆ ಅದೊಂದು ವಿಸ್ಮಯಲೋಕಕ್ಕೆ ಕರೆದೊಯ್ದಂತಾಗಿತ್ತು.

ಹಿಂದೂ ಧರ್ಮದ ಭದ್ರ ಬುನಾದಿಗೆ ಕಾರಣವೇನೆಂಬುದನ್ನು ಸ್ವಾಮಿ ವಿವೇಕಾನಂದರು ವಿವರಿಸಿದ್ದು ಹೀಗೆ: ''ಹಿಂದೂಗಳು ತಮ್ಮ ಧರ್ಮವನ್ನು ಪಡೆದದ್ದು ಶ್ರುತಿಯ ಎಂದರೆ ವೇದಗಳ ಮೂಲಕ. ವೇದಗಳಿಗೆ ಆದಿಯಾಗಲೀ ಅಂತ್ಯವಾಗಲೀ ಇಲ್ಲ ಎಂಬುದು ಅವರ ನಂಬಿಕೆ. ಒಂದು ಗ್ರಂಥಕ್ಕೆ ಆದಿ ಮತ್ತು ಅಂತ್ಯ ಇಲ್ಲವೆಂದರೆ ಇಲ್ಲಿ ನೆರೆದಿರುವ ಶ್ರೋತೃವರ್ಗಕ್ಕೆ ಹಾಸ್ಯಾಸ್ಪದವಾಗಿ ತೋರಬಹುದು. ಆದರೆ, ವೇದವೆಂಬುದು ಇಲ್ಲಿ ಯಾವ ಪುಸ್ತಕಕ್ಕೂ ಅನ್ವಯಿಸುವುದಿಲ್ಲ. ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ಕಾಲಗಳಲ್ಲಿ ಕಂಡುಹಿಡಿದ ಆಧ್ಯಾತ್ಮಿಕ ನಿಯಮಗಳ ಭಂಡಾರವೇ ವೇದ. ಗುರುತ್ವಾಕರ್ಷಣ ನಿಯಮ ಹೇಗೆ ಅದು ಕಂಡುಹಿಡಿಯುವ ಮೊದಲು ಇದ್ದಿತೋ, ಮುಂದೆ ಮಾನವ ಮರೆತರೂ ಅದು ಹೇಗೆ ಇದ್ದೇ ಇರುತ್ತದೆಯೋ, ಹಾಗೆಯೇ ಆಧ್ಯಾತ್ಮಿಕ ಜಗತ್ತನ್ನು ಆಳುತ್ತಿರುವ ನಿಯಮಗಳೂ ಕೂಡಾ. ಜೀವಿಗಳ ಜೀವ ಮತ್ತು ಎಲ್ಲ ಜೀವಗಳ ತಂದೆಯಾದ ದೇವರ ನಡುವೆ ಇರುವ ನೈತಿಕ, ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಂಬಂಧಗಳು, ಇವುಗಳನ್ನು ಕಂಡುಹಿಡಿಯುವ ಮುಂಚೆಯೂ ಇದ್ದುವು, ಅವುಗಳನ್ನು ನಾವು ಮರೆತರೂ ಅವು ಇರಬಲ್ಲವು.''

ಸ್ವಾಮಿ ವಿವೇಕಾನಂದರು ಭಾರತದಲ್ಲಿ ನೆಲೆಯೂರಿ, ಭಾರತೀಯ ಧರ್ಮಕ್ಕೆ ಆಧಾರಸ್ತಂಭವಾಗಿರುವ ಹಿಂದೂಧರ್ಮದ ಬಗ್ಗೆ ಕೊಟ್ಟ ಈ ವ್ಯಾಖ್ಯಾನ, ಅದಕ್ಕೆ ಪೂರಕವಾಗಿ ಕೊಟ್ಟ ಉದಾಹರಣೆ ಅತ್ಯಂತ ಸಮರ್ಥನೀಯವಾದುದಾಗಿತ್ತು. ಹಿಂದೂ ಧರ್ಮದ ಮೂಲ ಅಗೋಚರವಾದುದೆನಿಸಿದರೂ, ಅಸ್ಥಿರವಾದುದಲ್ಲ ಎಂಬುದನ್ನು ಅವರು ಸ್ಪಷ್ಟಪಡಿಸಿದ ರೀತಿ ವಿಶಿಷ್ಟವಾದುದಾಗಿತ್ತು.

ವೇದಾಂತದ ಬಗ್ಗೆ ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳೂ ಕೂಡಾ ಅಷ್ಟೇ ಮಹತ್ವ ಪಡೆದವು: ''ವೇದಾಂತ ಒಂದು

ತತ್ತ್ವ, ಮತವಲ್ಲ. ಅದರಿಂದ ಕ್ರೈಸ್ತನು ಉತ್ತಮ ಕ್ರೈಸ್ತನಾಗುವನು, ಹಿಂದುವು ಉತ್ತಮ ಹಿಂದುವಾಗುವನು, ಬೌದ್ಧನು ಉತ್ತಮ ಬೌದ್ಧನಾಗುವನು; ಮತ್ತೊಂದು ಜಾತಿಯನ್ನು ನಿಂದಿಸುವುದು ಹಿಂದೂಧರ್ಮಕ್ಕೆ ವಿರುದ್ಧ. ಹಿಂದೂಧರ್ಮದ ಅಡಿಯಲ್ಲಿ ಎಲ್ಲರೂ ಸೌಹಾರ್ದದಿಂದ ಬಾಳಬಹುದು. ಹಿಂದುವು ಧರ್ಮದ ಹೆಸರಿನಲ್ಲಿ ರಕ್ತವನ್ನು ಹರಿಸಿಲ್ಲ. ಹಿಂದೆ ಬಂದ, ಈಗ ಬರುವ, ಮುಂದೆ ಬರಲಿರುವ ಎಲ್ಲಾ ದೇಶದ ಮಹಾತ್ಮರನ್ನೂ ಅವನು ಗೌರವಿಸುವನು.'' — ಹಿಂದೂಧರ್ಮದ ವಿಶೇಷತೆಯನ್ನು ಅವರು ವಿವರಿಸಿದ್ದು ಹೀಗೆ. ಎಲ್ಲರೊಂದಿಗೂ ಸೌಹಾರ್ದತೆಯಿಂದ ಕೂಡಿ ಬಾಳಿ ಬದುಕುವುದೇ ಹಿಂದೂಧರ್ಮದ ಮುಖ್ಯ ಆಶಯ ಎಂಬುದನ್ನು ಸ್ವಾಮೀಜಿ ಸ್ಪಷ್ಟಪಡಿಸಿದರು.

ಸ್ವಾಮಿ ವಿವೇಕಾನಂದರು ತಮ್ಮ ಉಪನ್ಯಾಸದಲ್ಲಿ ಹಿಂದೂಧರ್ಮದ ಸಾರವನ್ನು ವಿವರಿಸಿದ ರೀತಿ ತುಂಬಾ ಸರಳವಾಗಿತ್ತು ಮತ್ತು ಅಷ್ಟೇ ನೇರವಾಗಿತ್ತು: ''ಹಿಂದೂಧರ್ಮವೆಂದರೆ, ಯಾವುದಾದರೂ ಕೆಲವು ಸಿದ್ಧಾಂತಗಳನ್ನು ನಂಬುವುದಕ್ಕೆ ಪಡುವ ಪ್ರಯತ್ನವಲ್ಲ. ಅದು ಸತ್ಯ ಸಾಕ್ಷಾತ್ಕಾರ. ಅದರಂತೆ ಇರುವುದು, ಅದರಂತೆ ಆಗುವುದು... ಮುಕ್ತಾತ್ಮರಾಗಲು, ಪವಿತ್ರಾತ್ಮರಾಗಲು, ದೇವರನ್ನು ಸೇರಲು ಮತ್ತು ದೇವರನ್ನು ನೋಡಲು ಅನವರತ ಹೋರಾಡುವುದೇ ಹಿಂದೂಗಳ ಸಿದ್ಧಾಂತದ ಗುರಿ. ಹೀಗೆ ದೇವರನ್ನು ಸೇರುವುದೇ, ದೇವರನ್ನು ನೋಡುವುದೇ, ಪರಂಧಾಮದಲ್ಲಿರುವ ಭಗವಂತನಂತೆ ಪವಿತ್ರಾತ್ಮರಾಗುವುದೇ ಹಿಂದೂಧರ್ಮ.'' — ಹಿಂದೂಧರ್ಮದ ಸರಳತೆಯನ್ನೂ, ವೈಶಾಲ್ಯತೆಯನ್ನೂ ಅವರು ವಿವರಿಸಿದ ರೀತಿ ಅಲ್ಲಿದ್ದವರನ್ನೆಲ್ಲಾ ಬೆರಗುಗೊಳಿಸಿತು.

ಸ್ವಮತ ಭ್ರಾಂತಿ ಎಷ್ಟು ದೊಡ್ಡ ಅನಾಹುತವನ್ನು ಉಂಟುಮಾಡುತ್ತದೆ ಎಂಬುದರ ಬಗ್ಗೆ ಸ್ವಾಮೀಜಿ ಎಚ್ಚರಿಸಿದರು. ಮೂಢನಂಬಿಕೆ ಮಾನವನ ದೊಡ್ಡ ಶತ್ರು ನಿಜ. ಆದರೆ, ಅದಕ್ಕಿಂತ ದೊಡ್ಡ ವಿನಾಶಕಾರಿ ಶತ್ರು ಸ್ವಮತ ಭ್ರಾಂತಿ. ಹಾಗೆಯೇ ವಿಗ್ರಹಾರಾಧನೆಯನ್ನು ಟೀಕಿಸುವವರಿಗೆ ಅವರು ಕೊಟ್ಟ ಉತ್ತರ ಕೂಡಾ ಅಷ್ಟೇ ಪರಿಣಾಮಕಾರಿಯಾದುದಾಗಿತ್ತು. ಹಿಂದೂಗಳು ಏಕೆ ವಿಗ್ರಹಾರಾಧನೆಯಲ್ಲಿ ತೊಡಗುತ್ತಾರೆ? ಅದರಿಂದಾಗುವ ಪ್ರಯೋಜನವೇನು? ಎಂಬುದನ್ನು ಅವರು ಸಕಾರಣವಾಗಿ ವಿವರಿಸಿ ಎಲ್ಲರ ಬಾಯಿ ಮುಚ್ಚಿಸಿದರು. ಅದಕ್ಕೆ ಅವರು ಕೊಟ್ಟ ಉತ್ತರ ಇದಾಗಿತ್ತು: ''ಸಹೋದರರೇ, ನಾವು ಹೇಗೆ ಉಸಿರಾಡದೆ ಜೀವಿಸಿರಲಾರೆವೋ ಹಾಗೆಯೇ ರೂಪು ಕೊಡದೇ ಮನಸ್ಸಿನಲ್ಲಿ ಏನನ್ನೂ ಯೋಚಿಸಲಾರೆವು. ಪರಸ್ಪರ ಸಹಯೋಗದ ನಿಯಮದ ಪ್ರಕಾರ ಬಾಹ್ಯವಿಗ್ರಹ ಮಾನಸಿಕ ವಿಗ್ರಹವನ್ನು ನೆನಪಿಗೆ ತರುತ್ತದೆ. ಆದಕಾರಣವೇ ಹಿಂದೂ ಪ್ರಾರ್ಥಿಸುವಾಗ ಬಾಹ್ಯಪ್ರತೀಕದ ನೆರವನ್ನು ಪಡೆಯುತ್ತಾನೆ. ತಾನು ಯಾರಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದಾನೆಯೋ ಆ ಚೇತನದ ಮೇಲೆ ತನ್ನ ಮನಸ್ಸನ್ನು ಕೇಂದ್ರೀಕರಿಸುವುದಕ್ಕೆ ಇದು ಸಹಾಯ ಮಾಡುತ್ತದೆಯೆಂದು ಅವನು ಹೇಳುತ್ತಾನೆ. ನಮ್ಮಂತೆಯೇ ಅವನಿಗೂ ವಿಗ್ರಹ ದೇವರಲ್ಲ ಎಂಬುದು, ಅದು ಸರ್ವವ್ಯಾಪಕವಲ್ಲವೆಂಬುದು ಗೊತ್ತಿದೆ.''

ಸ್ವಾಮಿ ವಿವೇಕಾನಂದರು ಕೊಡುತ್ತಿದ್ದ ಒಂದೊಂದು ವಿವರಣೆಯೂ ಸಮರ್ಥನೀಯವಾಗಿರುತ್ತಿದ್ದ ಕಾರಣ, ಅಲ್ಲಿ ಪ್ರತಿವಾದವಿಲ್ಲದಂತೆ ಅವು ಸ್ವೀಕಾರಗೊಳ್ಳುತ್ತಿದ್ದವು. ಎಲ್ಲಕ್ಕಿಂತ ಹೆಚ್ಚಾಗಿ ಅವರು ತಮ್ಮ ವಾದವನ್ನು ಮಂಡಿಸುತ್ತಿದ್ದ ರೀತಿ ಕೂಡಾ ಅಷ್ಟೇ ಪರಿಣಾಮಕಾರಿಯಾಗಿರುತ್ತಿದ್ದ ಕಾರಣ ಎಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತಿತ್ತು. ತಮ್ಮ ವಿಚಾರ ಮಂಡನೆಯ ನಂತರ ಅದನ್ನು ಮುಕ್ತಾಯಗೊಳಿಸುತ್ತಿದ್ದ ರೀತಿ ಕೂಡ ಪರಿಣಾಮಕಾರಿಯಾಗಿರುತ್ತಿತ್ತು: ''ಬಾಹ್ಯಪೂಜೆ ಮತ್ತು ವಿಗ್ರಹಾರಾಧನೆ ಬಹಳ ಕೆಳದರ್ಜೆಯದು. ಇನ್ನೂ ಮೇಲಕ್ಕೆ ಏರುವ ಪ್ರಯತ್ನದಲ್ಲಿ ನಡೆಸುವ ಮಾನಸಿಕ ಪೂಜೆ ಇದಕ್ಕಿಂತ ಮೇಲಿನ ತರಗತಿಯದು. ಆದರೆ, ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು ಮಾತ್ರವೇ ಅತ್ಯುತ್ತಮಾವಸ್ಥೆ.'' ಹಿಂದೂಧರ್ಮಶಾಸ್ತ್ರದ ಅಂತಿಮ ಗುರಿ ಇದೆಂಬುದು ಅವರ ಇಂಗಿತವಾಗಿತ್ತು.

ಸೆಪ್ಟಂಬರ್ ೨೦ ರಂದು ಅವರು ಮಾಡಿದ ಉಪನ್ಯಾಸ, ''ಭಾರತದ ತೀವ್ರವಾದ ಅಗತ್ಯ ಮತ-ಧರ್ಮವಲ್ಲ'' ಎಂಬ ವಿಷಯ ಕುರಿತದ್ದಾಗಿತ್ತು. ಅವರ ಈ ವಿಷಯ ಕುರಿತಾದ ಮಾತುಗಳಲ್ಲಿ — ನೋವು, ವ್ಯಥೆ, ಸಂಕಟ, ರೋಷ, ವಿಷಾದ ಎಲ್ಲವೂ ಮಿಶ್ರಣವಾಗಿತ್ತು. ಅತ್ಯಂತ ಕಠಿಣವಾದ ಮಾತುಗಳಲ್ಲಿಯೇ ಅವರು ತಮ್ಮ ಅನಿಸಿಕೆಗಳನ್ನು ಹೊರಹಾಕಿದ್ದರು. ನಿಜಕ್ಕೂ ಅವು ಬೆಂಕಿಯ ಚೆಂಡಿನಂತೆಯೇ ಹೊರಚೆಲ್ಲಿದವು: ''ಕ್ರೈಸ್ತರು ಹಿತಕರ ವಿಮರ್ಶೆಯನ್ನು ಸ್ವೀಕರಿಸಲು ಸದಾ ಸಿದ್ಧರಿರಬೇಕು. ನಾನು ನಿಮ್ಮನ್ನು ಟೀಕಿಸಿದರೆ ನೀವು ತಪ್ಪು ತಿಳಿಯುವುದಿಲ್ಲವೆಂದು ಭಾವಿಸುತ್ತೇನೆ. ಕ್ರೈಸ್ತರೇ, ಕ್ರೈಸ್ತರಲ್ಲದವರ ಆತ್ಮವನ್ನು ಉದ್ಧರಿಸುವುದಕ್ಕೆ ಪಾದ್ರಿಗಳನ್ನು ಕಳುಹಿಸಲು ನೀವು ಇಷ್ಟು ಕಾತುರರಾಗಿದ್ದೀರಲ್ಲ , ಉಪವಾಸದಿಂದ ನಶಿಸುತ್ತಿರುವ ಆ ಜನರ ದೇಹವನ್ನು ಉಳಿಸಲು ನೀವೇಕೆ ಪ್ರಯತ್ನಿಸಬಾರದು? ಭಾರತದಲ್ಲಿ ಭಯಂಕರವಾದ ಕ್ಷಾಮ ಬಂದು ಸಹಸ್ರಾರು ಜನರು ಉಪವಾಸದಿಂದ ಸತ್ತರು. ಆದರೂ ನೀವು ಕ್ರೈಸ್ತರು ಏನೂ ಮಾಡಲಿಲ್ಲ. ಭಾರತದಾದ್ಯಂತ ನೀವು ಚರ್ಚುಗಳನ್ನು ಕಟ್ಟುತ್ತಿದ್ದೀರಿ. ಆದರೆ, ಪೂರ್ವದೇಶದ ಅಗತ್ಯ ಮತಧರ್ಮವಲ್ಲ , ಅವರಲ್ಲಿ ಅದು ಯಥೇಚ್ಛವಾಗಿದೆ. ಉರಿಯುತ್ತಿರುವ ಭಾರತದಲ್ಲಿ ಲಕ್ಷಾಂತರ ಜನ ಒಣಗಿದ ಗಂಟಲುಗಳಿಂದ ಬೇಡುತ್ತಿರುವುದು ಒಂದು ತುತ್ತು ಕೂಳನ್ನು... ಭಾರತದಲ್ಲಿ ಹಣ ಪಡೆದು ಧರ್ಮವನ್ನು ಬೋಧಿಸಿದರೆ ಅಂತಹವರನ್ನು ಜಾತಿಭ್ರಷ್ಟರನ್ನಾಗಿ ಮಾಡುತ್ತಾರೆ. ಜನರು ಅಂತಹವರ ಮುಖದ ಮೇಲೆ ಉಗುಳುತ್ತಾರೆ. ನನ್ನ ದೇಶದಲ್ಲಿ ದಾರಿದ್ರ್ಯದಿಂದ ನರಳುತ್ತಿರುವವರಿಗೆ ಸಹಾಯ ಮಾಡಲು ನಾನು ಇಲ್ಲಿಗೆ ಬಂದೆ. ಕ್ರೈಸ್ತ ದೇಶದಲ್ಲಿ, ಕ್ರೈಸ್ತರಿಂದ, ಕ್ರೈಸ್ತರಲ್ಲದವರಿಗೆ ನೆರವು ಪಡೆಯು

ವುದು ಎಷ್ಟು ಕಷ್ಟ ಎಂದು ಈಗ ನನಗೆ ಚೆನ್ನಾಗಿ ಮನದಟ್ಟಾಯಿತು.''

ಸ್ವಾಮಿ ವಿವೇಕಾನಂದರು ತನ್ನದಲ್ಲದ ನಾಡಿನಲ್ಲಿ ತನ್ನವರ ಸ್ಥಿತಿಗತಿಗಳನ್ನು ನೆನೆದು ನೋವಿನಿಂದ ಸಿಡಿಮಿಡಿಗೊಂಡು ಆಡಿದ ಮಾತುಗಳಿವು. ಆದರೆ ವಾಸ್ತವಿಕ ಸಂಗತಿಯನ್ನು ಬಿಚ್ಚುಮನಸ್ಸಿನಿಂದ ಮುಚ್ಚುಮರೆಯಿಲ್ಲದೆ ಧೈರ್ಯವಾಗಿ ಆಡಿದ್ದನ್ನು ಮೆಚ್ಚಲೇಬೇಕು. ಅತ್ಯಂತ ಕಠಿಣ ಶಬ್ದಗಳಿಂದಲೇ ತಮ್ಮ ಅಭಿಪ್ರಾಯಗಳನ್ನು ಹೊರಹಾಕುತ್ತಾರೆ.

ಸೆಪ್ಟಂಬರ್ ೨೭ ಸರ್ವಧರ್ಮ ಸಮ್ಮೇಳನದ ಕಡೆಯ ದಿನ. ಅಂದು ಸ್ವಾಮಿ ವಿವೇಕಾನಂದರು ಮಾಡಿದ ಉಪನ್ಯಾಸ ಇಡೀ ಸಮ್ಮೇಳನದ ಯಶಸ್ಸಿಗೆ ತಿಲಕವಿಟ್ಟಂತಿತ್ತು. ಸಮ್ಮೇಳನವನ್ನು ಆಯೋಜಿಸಿದ್ದವರಿಗೆ ಕೃತಜ್ಞತೆ, ಅಭಿನಂದನೆಗಳನ್ನು ಸಲ್ಲಿಸುವುದರ ಜೊತೆಗೆ ಅದರಲ್ಲಿ ಭಾಗವಹಿಸಿದ್ದ ಎಲ್ಲರಿಗೂ ತಮ್ಮ ವೈಯಕ್ತಿಕ ವಂದನೆಗಳನ್ನು ಸ್ವಾಮೀಜಿಯವರು ಅರ್ಪಿಸಿದರು: ''ಯಾರು ಉದಾರ ಹೃದಯ ಮತ್ತು ಸತ್ಯ ಪ್ರೇಮದಿಂದ ಈ ಅದ್ಭುತವಾದ ಕನಸನ್ನು ಕಂಡು ಅದನ್ನು ನನಸಾಗಿಸಿದರೋ ಅಂಥ ಉದಾತ್ತ ಚೇತನರಿಗೆ ನನ್ನ ವಂದನೆಗಳು. ಈ ವೇದಿಕೆ ಮೇಲೆ ಉದಾರ ಭಾವನೆಗಳನ್ನು ಮಳೆಗರೆದವರಿಗೆ ನನ್ನ ವಂದನೆಗಳು. ಇಲ್ಲಿ ನೆರೆದು ನನ್ನ ವಿಷಯದಲ್ಲಿ ಏಕಪ್ರಕಾರವಾಗಿ ವಿಶ್ವಾಸವನ್ನು ತೋರಿದುದಲ್ಲದೆ, ಧರ್ಮಗಳಲ್ಲಿರುವ ಪರಸ್ಪರ ಘರ್ಷಣೆಗಳನ್ನು ವಿವರಿಸಿದ ಪ್ರತಿಯೊಂದು ಭಾವನೆಗಳನ್ನು ಮೆಚ್ಚಿರುವ ಪ್ರಬುದ್ಧರಾದ ಶ್ರೋತೃಗಳಿಗೂ ನನ್ನ ವಂದನೆಗಳು. ಈ ಸ್ವರಮೇಳದಲ್ಲಿ ಒಮ್ಮೊಮ್ಮೆ ಅಪಸ್ವರಗಳು ಕೇಳಿಬಂದದ್ದುಂಟು. ಅದನ್ನು ಮೂಡಿಸಿದವರು ತಮ್ಮ ಭಿನ್ನ ಸ್ವರಗಳಿಂದ ಒಟ್ಟಾಗಿ ಸ್ವರಮೇಳವನ್ನು ಮಧುರವನ್ನಾಗಿ ಮಾಡಿದ್ದಾರೆ, ಅಂಥವರಿಗೆ ನನ್ನ ವಿಶೇಷ ವಂದನೆಗಳು.''

ಸರ್ವಧರ್ಮ ಸಮ್ಮೇಳನದ ಫಲಿತಗಳು ಏನೇ ಇರಲಿ, ಎಷ್ಟೇ ಇರಲಿ, ಭಾರತದ ಪಾಲಿಗೆ ಅದೊಂದು ವರದಾನವಾದದ್ದಂತೂ ಸತ್ಯ. ಭಾರತದ ಕೀರ್ತಿಯನ್ನು, ಹಿಂದೂಧರ್ಮದ ಶ್ರೇಷ್ಠತೆಯನ್ನೂ ಜಗತ್ತಿಗೆ ಸಾರಲು ಮಹಾನ್ ವೇದಿಕೆಯಾದದ್ದಂತೂ ನಿಜ. ಅದೆಲ್ಲವೂ ಸಾಧ್ಯವಾದದ್ದು ಸ್ವಾಮಿ ವಿವೇಕಾನಂದರ ಮೂಲಕ ಎಂಬುದು ಅಷ್ಟೇ ಸತ್ಯ ಸಂಗತಿ. ಅದೆಲ್ಲದರ ಕೀರ್ತಿ ಅವರಿಗೇ ಸಲ್ಲುವಂತಹುದು. ಸ್ವಾಮೀಜಿ ತಮ್ಮ ಅಸಾಧಾರಣ ಬುದ್ಧಿಶಕ್ತಿಯ ಮೂಲಕ, ಅಪೂರ್ವ ಆಲೋಚನೆ ಹಾಗು ಚಿಂತನೆಗಳ ಮೂಲಕ ಇಡೀ ವಿಶ್ವದ ಗಮನ ಸೆಳೆದರು. ಭಾರತೀಯರ, ಹಿಂದೂಧರ್ಮದ ಶ್ರೇಷ್ಠತೆಯನ್ನು ಜಗತ್ತಿಗೆ ಪರಿಚಯಿಸಿದರು. ಅಧಿವೇಶನದ ಕೊನೆಯ ಉಪನ್ಯಾಸದಲ್ಲಿ , ''ಪ್ರತಿಯೊಂದು ಧರ್ಮದ ಧ್ವಜದ ಮೇಲೂ ಬಹುಬೇಗ ಈ ಮಾತುಗಳು ಬರೆಯಲ್ಪಡುತ್ತವೆ: ಹೋರಾಟವಲ್ಲ – ಸೌಹಾರ್ದ ; ವಿನಾಶವಲ್ಲ – ಸ್ವೀಕಾರ ; ವೈಮನಸ್ಯವಲ್ಲ – ಸಾಮರಸ್ಯ ಮತ್ತು ಶಾಂತಿ'' ಎಂಬ ಘೋಷಣೆ ಅಲ್ಲಿ ಪ್ರತಿಧ್ವನಿಸಿತು.

ಸಮ್ಮೇಳನದ ಅಧ್ಯಕ್ಷರಾದ ಡಾ. ಜಾನ್ ಹೆನ್ರಿ ಬರೋಸ್‌ರವರು ಸ್ವಾಮೀಜಿ ಅವರನ್ನು ಮುಕ್ತಕಂಠದಿಂದ ಹೊಗಳಿದ್ದು ಹೀಗೆ: ''ಸ್ವಾಮಿ ವಿವೇಕಾನಂದರ ಖ್ಯಾತಿಯನ್ನು ಕಂಡು ಕೆಲವರು ಈರ್ಷೆಗೆ ಒಳಗಾದರು, ಆದರೆ ವಿವೇಕಾನಂದರನ್ನು ತೆಗಳುವುದಕ್ಕೆ ಅವರಿಗೆ ಯಾವ ಕಾರಣವೂ ಸಿಗಲಿಲ್ಲ. ಸ್ವಾಮಿ ವಿವೇಕಾನಂದರ ವ್ಯಕ್ತಿತ್ವದಲ್ಲಾಗಲಿ, ಭಾಷಣದಲ್ಲಾಗಲೀ ಯಾವ ನ್ಯೂನತೆಗಳೂ ದೊರೆಯಲಿಲ್ಲ. ಅವರೊಬ್ಬ ಪರಿಪೂರ್ಣ ಮನುಷ್ಯ ಎಂದರೆ ತಪ್ಪಾಗಲಾರದು. ಅಮೆರಿಕಾ, ಕೆನಡಾ ದೇಶಗಳಲ್ಲಿ ಅವರು ಎಷ್ಟು ಪ್ರಸಿದ್ಧರಾಗಿದ್ದಾರೆಂದರೆ ಅವರ ಶೈಲಿ, ನಮೂನೆಗಳಿಗೆ ಜನರು ಮನಸೋತು ಅವರನ್ನು ಒಬ್ಬ ಆದರ್ಶ ವ್ಯಕ್ತಿಯನ್ನಾಗಿ ಸ್ವೀಕರಿಸಲು ಪ್ರಾರಂಭಿಸಿದ್ದಾರೆ. ಒಬ್ಬ ಹಿಂದೂ ಸಂನ್ಯಾಸಿ ದೂರದ ಕ್ರೈಸ್ತರ ನಾಡಿನಲ್ಲಿ ಅಷ್ಟೊಂದು ಪ್ರಸಿದ್ಧಿಯನ್ನು ಪಡೆದಿರುವುದು ನಿಜವಾಗಿಯೂ ಸೋಜಿಗದ ವಿಷಯ!''

ಸ್ವಾಮಿ ವಿವೇಕಾನಂದರು ಚಿಕಾಗೋದ ಸರ್ವಧರ್ಮ ಸಮ್ಮೇಳನದಲ್ಲಿ ಮಾಡಿದ ಪರಿಣಾಮಕಾರಿ ಉಪನ್ಯಾಸಗಳ ಸರಮಾಲೆಯ ಫಲಶ್ರುತಿ ಚಿಕಾಗೋದ 'ಆರ್ಟ್ ಇನ್‌ಸ್ಟಿಟ್ಯೂಟ್' ನಲ್ಲಿರುವ ಫಲಕದಲ್ಲಿ ಹೀಗೆ ದಾಖಲಾಗಿದೆ: ''ಈ ಸ್ಥಳದಲ್ಲಿ ೧೮೯೩, ಸೆಪ್ಟಂಬರ್, ೧೧ ರಿಂದ ೨೭ ರ ವರೆಗೆ, ಅಮೆರಿಕಾದಲ್ಲಿ ವೇದಾಂತವನ್ನು ಬೋಧಿಸಿದ ಪ್ರಥಮ ಹಿಂದೂ ಸಂನ್ಯಾಸಿಗಳಾದ ಸ್ವಾಮಿ ವಿವೇಕಾನಂದರು ವಿಶ್ವಧರ್ಮ ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡಿದರು. ಅವರ ಅಭೂತಪೂರ್ವ ಯಶಸ್ಸು ಪ್ರಾಚ್ಯ ಮತ್ತು ಪಾಶ್ಚಾತ್ಯ ಧರ್ಮಗಳ ನಡುವೆ ವಿಚಾರ ವಿನಿಮಯಕ್ಕೆ ದಾರಿ ಮಾಡಿಕೊಟ್ಟಿತು.''



## ಪ್ರಾಮಾಣಿಕತೆಯ ಮಹತ್ವ

ಅವರ ಉದಾತ್ತ ಬೋಧನೆಗಳನ್ನು ಅನುಸರಿಸುವವರೇ ಇಲ್ಲವೆಂದು ನಾನೊಮ್ಮೆ ಹೇಳಿದಾಗ ಅವರು ಸೂಕ್ತವಾದ ಉತ್ತರ ನೀಡಿದರು: ''ನಾನು ಇಷ್ಟಪಟ್ಟಿದ್ದರೆ ಇನ್ನೂ ಸಾವಿರಾರು ಜನರು ನನ್ನ ಉಪನ್ಯಾಸಕ್ಕೆ ಬರುತ್ತಿದ್ದರು. ಪ್ರಾಮಾಣಿಕ ವಿದ್ಯಾರ್ಥಿ ಮಾತ್ರ ಈ ಕೆಲಸವನ್ನು ಯಶಸ್ವಿಗೊಳಿಸಬಲ್ಲ, ಬೃಹತ್ ಸಂಖ್ಯೆಯ ಶ್ರೋತೃಗಳಲ್ಲ. ಒಬ್ಬ ವ್ಯಕ್ತಿಯ ಮುಕ್ತಿಗೆ ನಾನು ಸಹಾಯ ಮಾಡಲು ಯಶಸ್ವಿಯಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ತಿಳಿಯುತ್ತೇನೆ.'' ಈ ಹೇಳಿಕೆ ಅವರ ಒಬ್ಬ ವಿದ್ಯಾರ್ಥಿಯಾಗುವ ಆಸೆಯನ್ನು ನನ್ನಲ್ಲಿ ಸ್ಫುರಿಸಿತು.

— ಹೆಚ್. ಜೆ. ವಾನ್ ಹಾಗನ್

*('ಸ್ವಾಮಿ ವಿವೇಕಾನಂದರ ದಿವ್ಯಸ್ಮೃತಿ', ಪು.೧೩೨)*

# ‘ನನ್ನ ಸಹೋದರಿಯರೆ, ಮತ್ತು ಸಹೋದರರೆ’ ಸಂಬೋಧನೆಯ ವಿಶೇಷತೆ

ಉಷಾ ಎಸ್. ಮೂರ್ತಿ

ಚಿಕಾಗೋ ಭಾಷಣವೆಂದರೆ ನೆನಪಾಗುವುದು ಸ್ವಾಮಿ ವಿವೇಕಾನಂದರು ಅಮೆರಿಕದಲ್ಲಿ ಮಾಡಿದ ‘ಅಮೆರಿಕಾದ ನನ್ನ ಸಹೋದರಿಯರೆ ಮತ್ತು ಸಹೋದರರೇ’ ಎಂಬ ಸಂಬೋಧನೆ. ಅದು ಅಷ್ಟು ಪ್ರಸಿದ್ಧವಾಗಲು ಕಾರಣವೇನು? ಈ ಕುರಿತು ಇಲ್ಲಿ ಚಿಂತಿಸಲಾಗಿದೆ. ಲೇಖಕಿ ಮೈಸೂರು ನಿವಾಸಿಗಳು, ಹಾಗೂ ಶ್ರೀರಾಮಕೃಷ್ಣ ಆಶ್ರಮದ ಭಕ್ತರು.



‘‘ಅಮೆರಿಕದ ಸಹೋದರ ಸಹೋದರಿಯರೆ... ’’

ಇದು ೧೮೯೩ರ ಸೆಪ್ಟೆಂಬರ್ ೧೧ರಂದು, ಅಮೇರಿಕಾ ದೇಶದ ಚಿಕಾಗೋ ನಗರದಲ್ಲಿ ನಡೆದ ಪ್ರಪಂಚದ ಸರ್ವಧರ್ಮ ಸಮ್ಮೇಳನದ ಸಭಿಕರನ್ನುದ್ದೇಶಿಸಿ, ಸ್ವಾಮಿ ವಿವೇಕಾನಂದರು ನುಡಿದ ಮಾತು. ಸ್ವಾಮೀಜಿಯವರ ಬಾಯಿಂದ ಈ ಮಾತುಗಳು ಹೊರಗೆ ಬಂದ ತಕ್ಷಣ ಏನಾಶ್ಚರ್ಯ, ಏನದ್ಭುತ! ಸಭಿಕರೆಲ್ಲಾ ಎದ್ದು ನಿಂತು ಕೆಲ ನಿಮಿಷ ಕಾಲ ಕಿವಿಗಡಚಿಕ್ಕುವಂತೆ ಚಪ್ಪಾಳೆ ತಟ್ಟಿದರು. ನಂತರ ಜಯಘೋಷ ಮಾಡುತ್ತಾ ತಮ್ಮ ಕರವಸ್ತ್ರ, ಟೋಪಿಗಳನ್ನು ಬೀಸುತ್ತಾ ಹರ್ಷೋದ್ಗಾರ ಮಾಡಿದರು. ಅವರಲ್ಲಿ ಒಂದು ಅದ್ಭುತ ಸ್ಫೂರ್ತಿ ಉಂಟಾಯಿತು.

ಈವರೆಗೆ ಯಾವ ಉಪನ್ಯಾಸಕರೂ ಈ ರೀತಿ ‘ಸಹೋದರ ಸಹೋದರಿಯರೆ’ ಎಂದು ಕರೆದಿರಲಿಲ್ಲ. ಈ ಸಂನ್ಯಾಸಿ ನಮ್ಮ ಧರ್ಮದವರೂ ಅಲ್ಲ, ನಮ್ಮ ದೇಶಕ್ಕೆ ಸೇರಿದವರೂ ಅಲ್ಲ ಆದರೆ ಅವರ ಹೃದಯವೈಶಾಲ್ಯವೆಷ್ಟಿದೆ ಎಂಬ ಅರಿವು ಅವರಿಗುಂಟಾಯಿತು. ಈ ಮೂರು ಪದಗಳ ಮೂಲಕ ಸ್ವಾಮೀಜಿಯವರಿಗೆ ಶ್ರೀರಾಮಕೃಷ್ಣರಿಂದ ಬಂದ ಆಧ್ಯಾತ್ಮಿಕಶಕ್ತಿ, ಆತ್ಮಸಾಕ್ಷಾತ್ಕಾರದಿಂದ ಪರಿಪೂರ್ಣಗೊಂಡ ವ್ಯಕ್ತಿತ್ವ, ಸುಂದರ ಚಿತ್ತಾಕರ್ಷಕರೂಪ, ಅಮೋಘ ವಾಕ್‌ಚಾತುರ್ಯ, ರಾಜಗಾಂಭೀರ್ಯ – ನೋಡುವ ಎಲ್ಲರನ್ನೂ ಮಂತ್ರಮುಗ್ಧರನ್ನಾಗಿಸಿತು ಮತ್ತು ಅವರು ತಮ್ಮವರೆಂದೇ ಅನಿಸಿತು. ರೋಮಾರೋಲಾ ಅವರು ಸ್ವಾಮೀಜಿಯವರನ್ನು Toung of Flame (ಜ್ವಾಲಾನಾಲಿಗೆ) ಎಂದಿದ್ದಾರೆ.

ಈ ‘‘ಸಹೋದರ, ಸಹೋದರಿ’’ ಪದಗಳ ಹೆಗ್ಗಳಿಕೆ ಏನು? ಸ್ವಾಮೀಜಿಯವರ ಬಾಯಿಂದ ಹೊರಟ ಈ ವಾಕ್ಯಗಳಿಗೆ ಕಾರಣವೇನು? ಎಂಬ ಪ್ರಶ್ನೆ ಸಹಜವಾಗೇ ಏಳುತ್ತದೆ. ಆದರೆ ಈ ವಾಕ್ಯವೇ, ಅತಿ ಮುಂದುವರಿದ ದೇಶಗಳ ಮಧ್ಯೆ, ಆಧ್ಯಾತ್ಮಿಕ ನೆಲೆಯಾಗಿರುವ ಭರತಖಂಡವನ್ನು ಸಮ್ಮೇಳನದಲ್ಲಿ ಮೇಲ್ದರ್ಜೆಗೆ ಏರಿಸಲು ಕಾರಣವಾಯಿತು. ಈ ಪದಗಳು ವಿಶ್ವಭ್ರಾತೃತ್ವದ ಸಂಕೇತ. ಈ ವಿಶ್ವದ ಪ್ರಜೆಗಳೆಲ್ಲ ಲೋಕಮಾತೆಯ ಸಂತಾನ. ಸಹೋದರ ಸಹೋದರಿಯರ ಮಧ್ಯೆ ಪ್ರೀತಿ, ವಿಶ್ವಾಸ, ಸಹಿಷ್ಣುತೆ ಇರುತ್ತದೆ, ಇರಬೇಕು. ಆಯಾ ದೇಶ, ಭಾಷೆ, ಧರ್ಮಗಳಿಗೆ ತಕ್ಕಂತಿದ್ದರೂ, ಲೋಕಮಾತೆಯ ಸಂತಾನವಾದ ನಾವೆಲ್ಲರೂ ಭ್ರಾತೃತ್ವದ ಅರ್ಥವನ್ನು ತಿಳಿದು ವರ್ತಿಸಿದರೆ ಮಾತ್ರ ಶಾಂತಿ ಸಮನ್ವಯ ಉಂಟಾಗುತ್ತದೆ. ಸ್ವಾರ್ಥಬುದ್ಧಿಯ, ಸಂಕುಚಿತ ಅಹಂಕಾರವನ್ನು ಹೋಗಲಾಡಿಸಿಕೊಂಡಾಗ ಅನಂತತೆಯ ಅರಿವಾಗುತ್ತದೆ. ಇದೇ ವಿಶ್ವಾತ್ಮಭಾವ; ಸಹೋದರತ್ವದ ಸತ್ವವೇ ಇದು.

ನಂತರ ಸ್ವಾಮಿ ವಿವೇಕಾನಂದರು ತಮ್ಮ ಪುಟ್ಟ ಭಾಷಣದಲ್ಲಿ ಮೊದಲು ಎಲ್ಲ ಪಂಗಡ, ಮತ, ಧರ್ಮಕ್ಕೆ ಸೇರಿದ ಸಮಸ್ತ ಭಾರತೀಯರ ಪರವಾಗಿ ತಮ್ಮ ಕೃತಜ್ಞತೆಯನ್ನು ಸಭಿಕರಿಗೆ, ಆಯೋಜಕರಿಗೆ ತಿಳಿಸಿದರು. ಸಮ್ಮೇಳನಕ್ಕೆ ಬಂದಿರುವ ಎಲ್ಲ ರಾಷ್ಟ್ರಗಳ ಮಹನೀಯರಿಗೆ ವಂದನೆಗಳನ್ನು ತಿಳಿಸಿದರು. ‘‘ವಿಶ್ವ

ಕ್ಕೆಲ್ಲ ಧಾರ್ಮಿಕ ಸಹಾನುಭೂತಿ, ಸಾರ್ವತ್ರಿಕ ಅಂಗೀಕಾರಗಳನ್ನು ಸಾರುವ, ಆಧ್ಯಾತ್ಮಿಕ ನೆಲೆಯಾಗಿರುವ ಧರ್ಮಕ್ಕೆ ಸೇರಿದವನು ನಾನು. ನಾವು ಎಲ್ಲ ಧರ್ಮಗಳನ್ನೂ ಸತ್ಯವೆಂದು ತಿಳಿಯುತ್ತೇವೆ. ಎಲ್ಲ ಜನಾಂಗ, ಧಾರ್ಮಿಕ ಪಂಥಗಳ ಕಷ್ಟಕೋಟಲೆಗಳಲ್ಲಿ ಸಿಕ್ಕಿರುವ ನಿರಾಶ್ರಿತರಿಗೆ ಆಶ್ರಯ ಕಲ್ಪಿಸಿಕೊಟ್ಟಿರುವ ದೇಶ ನನ್ನದೆಂಬ ಹೆಮ್ಮೆ ನನ್ನದು. ರೋಮನ್ ಚಕ್ರಾಧಿಪತ್ಯದ ದೌರ್ಜನ್ಯದಿಂದ ಯಹೂದ್ಯರ ಪವಿತ್ರವಾದ ದೇವಾಲಯ ಯಾವಾಗ ನುಚ್ಚುನೂರಾಯಿತೋ ಆಗ ಅವರು ನಮ್ಮ ದಕ್ಷಿಣ ಭರತಖಂಡಕ್ಕೆ ಬಂದು ಆಶ್ರಯ ಪಡೆದರು. ಹಿಂದೆ ಝುರತುಷ್ಟ (ಪಾರ್ಸಿ) ಜನಾಂಗಕ್ಕೂ ಆಶ್ರಯವಿತ್ತು ಈಗಲೂ ಅವರನ್ನು ಪೋಷಿಸುತ್ತಿರುವುದು ನಮ್ಮ ಭಾರತದೇಶವೇ.

''ಸಹೋದರರೇ, ನಾವು ಚಿಕ್ಕಂದಿನಿಂದ ಪಠಿಸುತ್ತಿರುವ ಶ್ಲೋಕವೊಂದನ್ನು ನಿಮಗೆ ತಿಳಿಸುತ್ತೇನೆ:

**ತ್ರಯೀಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ**
**ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ।**
**ರುಚೀನಾಂ ವೈಚಿತ್ರ್ಯಾದೃಜುಕುಟಿಲನಾನಾಪಥಜುಷಾಂ**
**ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥**

'ಬೇರೆ ಬೇರೆ ಸ್ಥಳಗಳಲ್ಲಿ ಹುಟ್ಟುವ ಹಲವು ನದಿಗಳು ಕೊನೆಗೆ ಎಲ್ಲಾ ಸಾಗರಕ್ಕೆ ಸೇರುವಂತೆ, ಹೇ ಭಗವಂತನೇ, ಮಾನವರು ಅವರವರ ಸಂಸ್ಕಾರಗಳಿಗೆ ತಕ್ಕಂತೆ ಅನುಸರಿಸುವ, ನೇರವಾಗಿಯೋ ವಕ್ರವಾಗಿಯೂ ಇರುವ ಬೇರೆ ಬೇರೆ ದಾರಿಗಳೆಲ್ಲ ನಿನ್ನಡೆಗೆ ಕರೆದೊಯ್ಯುವವು.'

ಅನೇಕ ಧರ್ಮ, ಪಂಥ, ಮತ ರಾಷ್ಟ್ರಗಳಿಗೆ ಎಲ್ಲಾ ಪ್ರಜೆಗಳೂ ಸಹೋದರತ್ವವನ್ನು ಪಾಲಿಸಿದರೆ, ಮೇಲೆ ಹೇಳಿದ ಶ್ಲೋಕದ ಅರ್ಥದಂತೆ ಕೊನೆಗೆ ಹಿಂಸೆ, ಪರಧರ್ಮನಿಂದೆ, ಇವುಗಳಿಂದ ಮುಕ್ತವಾಗಿ ಭಗವಂತನೆಡೆಗೆ ಸಾಗಬಹುದು. ಈಗ ದೇಶಗಳಲ್ಲೆಲ್ಲಾ ಕ್ರೌರ್ಯ ಹೆಚ್ಚಿದೆ. ಅನ್ಯಾಯವು ಹರಡಿಕೊಂಡಿದೆ. ಆದರೆ ನಾವುಗಳು ಒಂದಾಗಿ ಸಹೋದರರಂತಿದ್ದರೆ ಶಾಂತಿಯಿಂದ ಬಾಳಬಹುದು.

ಅತಿಯಾದ ಧರ್ಮಾಂಧತೆ, ಸ್ವಾಭಿಮಾನ, ಗುಂಪುಗಾರಿಕೆಯ ಪರಿಣಾಮದಿಂದ ನಾವು ಸೋದರತ್ವದ ಪ್ರೀತಿ, ವಿಶ್ವಾಸಗಳನ್ನೇ ಮರೆತುಬಿಟ್ಟಿದ್ದೇವೆ. ಇದರಿಂದ ಈಗ ನಾವು ಹೇಳುವ ನಾಗರಿಕತೆಯೇ ನಾಶವಾಗಿದೆ. ಬದಲಾಗಿ ಎಲ್ಲ ದೇಶಗಳಲ್ಲಿ ನಿರಾಶೆಯೇ ತುಂಬಿದೆ. ಈಗಿನ ಮಾನವ ಸಮಾಜವು ಈ ಘೋರ ರಾಕ್ಷಸತನವನ್ನು ಬಿಟ್ಟು ಭ್ರಾತೃತ್ವವನ್ನು ಬೆಳೆಸಿಕೊಂಡರೆ, ಇನ್ನೂ ಹೆಚ್ಚು ಮುಂದುವರಿಯಲು ಅವಕಾಶವಾಗುತ್ತದೆ. ಸಹೋದರತ್ವ ಎಂಬ ಪದದ ಮಹತ್ವವೂ ಹೆಚ್ಚಾಗುತ್ತದೆ.



ಅಂತರಂಗದಲ್ಲಿ ಭಕ್ತಿ ಇರಲಿ, ಕುತಂತ್ರ ಮತ್ತು ವೇಷ ಇವುಗಳನ್ನು ತ್ಯಜಿಸಿ. ಯಾರು ಆಫೀಸಿನಲ್ಲಿ ಅಥವಾ ವ್ಯಾಪಾರದ ವ್ಯವಹಾರದಲ್ಲಿರುವರೋ ಅವರು ಕೂಡ ಸತ್ಯಸಂಧರಾಗಿರಬೇಕು. ಕಲಿಯುಗದಲ್ಲಿ ಸತ್ಯವೇ ತಪಸ್ಸು.

— ಶ್ರೀರಾಮಕೃಷ್ಣರು



ದೇವರನ್ನು ಹೊರತಾದ ಯಾವುದೇ ವಸ್ತುವಿನ ಕಡೆಗೆ ಮನಸ್ಸು ಹರಿದರೆ, ಆ ವಸ್ತು ಕ್ಷಣಿಕವೆಂದು ಭಾವಿಸು. ಅನಂತರ ಮನಸ್ಸನ್ನು ಭಗವಂತನ ಪವಿತ್ರವಾದ ಪಾದಪದ್ಮಗಳಿಗೆ ಅರ್ಪಿಸಿ ಶರಣಾಗತನಾಗು.

— ಶ್ರೀಮಾತೆ ಶಾರದಾದೇವಿ



ಜೀವನದಲ್ಲಿ ನಮಗೆ ಶ್ರೇಷ್ಠವಾದ ಮಾರ್ಗದರ್ಶಕವೇ ಶಕ್ತಿ. ಇತರ ಕಡೆಗಳಲ್ಲಿರುವಂತೆ ಧರ್ಮಕ್ಷೇತ್ರದಲ್ಲಿಯೂ ನಿಮ್ಮನ್ನು ದುರ್ಬಲರನ್ನಾಗಿ ಮಾಡುವುದನ್ನೆಲ್ಲಾ ತ್ಯಜಿಸಿ. ಅದರೊಂದಿಗೆ ಯಾವ ವ್ಯವಹಾರವನ್ನೂ ಇಟ್ಟುಕೊಳ್ಳಬೇಡಿ.

— ಸ್ವಾಮಿ ವಿವೇಕಾನಂದ



# ಚಿಕಾಗೊ ಉಪನ್ಯಾಸಗಳಲ್ಲಿ ಮೊದಲ ಭಾಷಣ: ಚಾರಿತ್ರಿಕ ಮಹತ್ತ್ವ

ಡಾ. ಇ. ವಸಂತಕುಮಾರ್

ಐತಿಹಾಸಿಕ ಘಟನೆಯಾದ ಚಿಕಾಗೋ ಸರ್ವಧರ್ಮ ಸಮ್ಮೇಳನದ ಬಗ್ಗೆ ಆಳವಾಗಿ ಅಧ್ಯಯನ ಮಾಡಿದಲ್ಲದೆ ಅದರ ಮಹತ್ವವನ್ನು ಸರಿಯಾಗಿ ಅರಿತುಕೊಳ್ಳಲಾಗದು. ಚಾರಿತ್ರಿಕ ದೃಷ್ಟಿಕೋನದಿಂದ ಈ ಕುರಿತು ವಿಶ್ಲೇಷಿಸುವ ಲೇಖಕರು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರು. ಶ್ರೀರಾಮಕೃಷ್ಣ ಆಶ್ರಮದ ಭಕ್ತರಾಗಿರುವ ಅವರು 'ವಿವೇಕಪ್ರಭ'ದಲ್ಲಿ ಅನೇಕ ಲೇಖನಗಳನ್ನು ಬರೆದಿದ್ದಾರೆ.

ಸ್ವಾಮಿ ವಿವೇಕಾನಂದರು ಅಮೆರಿಕಾದ ಚಿಕಾಗೊ ನಗರದಲ್ಲಿ ಏರ್ಪಡಿಸಿದ್ದ ಸರ್ವಧರ್ಮ ಸಮ್ಮೇಳನದಲ್ಲಿ ತಮ್ಮ ವಿಶ್ವಪ್ರಸಿದ್ಧ ಭಾಷಣವನ್ನು ಮಾಡಿ ೧೨೫ ವರ್ಷಗಳಾದವು. ಅವರು ಆ ಸಮ್ಮೇಳನದಲ್ಲಿ ಮಾಡಿದ ಭಾಷಣಗಳು ಆರು. ಅವುಗಳಲ್ಲಿ ಅವರ ಮೊದಲನೆಯ ಭಾಷಣ ಅವರನ್ನು ಜಗದ್ವಿಖ್ಯಾತರನ್ನಾಗಿ ಮಾಡಿತು. ಅವರು ಮಾತನಾಡಿದುದು ಕೆಲವು ನಿಮಿಷಗಳು ಮಾತ್ರ. ಅವರ ಬಾಯಿಂದ ಬಂದುದು ಹನ್ನೆರಡು ವಾಕ್ಯಗಳಷ್ಟೆ. ಅದು ಭಾಷಣವಲ್ಲ, ಸಮ್ಮೇಳನಕ್ಕೆ ಆಹ್ವಾನಿತರಾಗಿದ್ದ ಭಾಷಣಕಾರರಿಗೆ ಸಮ್ಮೇಳನಾಧ್ಯಕ್ಷರು ಕೋರಿದ ಸ್ವಾಗತಕ್ಕೆ ಧನ್ಯವಾದ ಸಮರ್ಪಣೆ, ಅಷ್ಟೆ. ಅವರು ಪ್ರಥಮ ಭಾಷಣಕಾರರಾಗಿರಲಿಲ್ಲ. ಏಳು ಸ್ವಾಗತ ಭಾಷಣಗಳು ವಾಗ್ವೈಖರಿಯಿಂದ ನಡೆದ ಬಳಿಕ ನಾಲ್ಕು ಧರ್ಮಪ್ರತಿನಿಧಿಗಳು ಉತ್ತರ ರೂಪದಲ್ಲಿ ಮಾತನಾಡಿದ್ದರು. ಎರಡು ಅಧಿವೇಶನಗಳು ಮುಗಿದು ಮಧ್ಯಾಹ್ನವಾಗಿತ್ತು. ಸ್ವಾಮೀಜಿಯವರಿಗೆ ಮಾತನಾಡುವಂತೆ ಆಹ್ವಾನಿಸಿದರೂ, ನಂತರ ಮಾತನಾಡುವುದಾಗಿ ಸರದಿಯನ್ನು ಇತರರಿಗೆ ಬಿಟ್ಟುಕೊಡುತ್ತಿದ್ದರು. ಅವರ ಪಕ್ಕದಲ್ಲಿ ಕುಳಿತಿದ್ದ ವಿನಮ್ರರಾದ ಫ್ರೆಂಚ್ ವಿದ್ವಾಂಸ ಪಾದ್ರಿಗಳೊಬ್ಬರು ಸ್ವಾಮೀಜಿಯವರನ್ನು ಮಾತನಾಡುವಂತೆ ಒತ್ತಾಯಿಸಿದ ಬಳಿಕ ಅವರು ಮಾತನಾಡಲು ಮೇಲೆದ್ದರು. ಅವರ ಭಾಷಣ ಸಭಿಕರ ಹೃದಯವನ್ನು ಸೂರೆಗೊಂಡಿತು. ಅವರು ವಿಖ್ಯಾತರಾದರು. ಇದಕ್ಕೆ ಕಾರಣ ಏನಿರಬಹುದೆಂದು ನಾವು ಕುತೂಹಲದಿಂದ ಚಿಂತಿಸುವುದು ಸಹಜವಾಗಿದೆ ಮತ್ತು ಅಗತ್ಯವಾಗಿದೆ. ಈ ವಿಶ್ಲೇಷಣೆಗೆ ನಮಗೆ ಇರುವ ಆಧಾರ ಕೆಲವು ದಾಖಲೆಗಳು, ಟಿಪ್ಪಣಿಗಳು, ವೃತ್ತಪತ್ರಿಕಾ ವರದಿಗಳು, ಮತ್ತು ಒಂದೆರಡು ಪುಸ್ತಕಗಳು ಮಾತ್ರ. ಇವುಗಳ ಆಧಾರದ ಮೇಲೆ ನಾವು ಈ ಚಿಂತನೆಯನ್ನು

೧೨೫ ವರ್ಷಗಳ ದೀರ್ಘಕಾಲದ ಬಳಿಕ ಮಾಡುತ್ತಿರುವೆವು. ಧಾರ್ಮಿಕ ಜೀವನದಲ್ಲಿ ನಮಗೆ ಇದು ಚೇತೋಹಾರಿಯಾಗಿ, ಮಾರ್ಗದರ್ಶಕವಾಗಿ, ನಮ್ಮ ಚೈತನ್ಯದ ವಿಕಾಸಕ್ಕೆ ಸಹಾಯಕಾರಿಯಾಗಿದೆ. ಇದನ್ನು ಹಿಂದೆಯೂ ಆಗಾಗ ಮಾಡಿದೆ. ನಮ್ಮ ದೇಶದ ಧಾರ್ಮಿಕ ಜೀವನ ಸರಿಯಾದ ದಿಕ್ಕಿನಲ್ಲಿ ಮುಂದುವರಿಯಲು ಇದನ್ನು ಕಾಲಕಾಲಕ್ಕೆ ಸ್ಮರಿಸುತ್ತಾ ವಿಶ್ಲೇಷಣೆ ಮಾಡುವುದು ಒಳ್ಳೆಯದು.

## ಹಿನ್ನೆಲೆ

ಸ್ವಾಮೀಜಿಯವರ ಪ್ರಥಮ ಭಾಷಣ ಸಾಧಾರಣವಾಗಿ ಕಂಡರೂ, ಅನೇಕ ರೀತಿಗಳಲ್ಲಿ ಅದು ಚರಿತ್ರಾರ್ಹವಾಗಿದೆ. ಅದನ್ನು ಸಾವಧಾನವಾಗಿ, ಕೂಲಂಕಷವಾಗಿ ಪರಿಶೀಲಿಸಿದರೆ ಅದರ ಮಹತ್ತನ್ನು ಮನಗಾಣಬಹುದು. ಮೊದಲನೆಯದಾಗಿ, ಸ್ವಾಮೀಜಿಯವರನ್ನು ಅಂತರರಾಷ್ಟ್ರೀಯ ವೇದಿಕೆಯ ಮೇಲೆ ನಿಲ್ಲಿಸಿ, ಅವರ ವ್ಯಕ್ತಿತ್ವ ಜಗತ್ತಿಗೇ ಕಾಣುವಂತೆ ಮಾಡಿದ ಈ ಸರ್ವಧರ್ಮ ಸಮ್ಮೇಳನವೇ ಧಾರ್ಮಿಕ ಕ್ಷೇತ್ರದಲ್ಲಿ ಒಂದು ಚಾರಿತ್ರಿಕ ಘಟನೆ. ಇದಕ್ಕೆ ಪ್ರೇರಣೆ, ಇದರ ಉದ್ದೇಶ, ಸಂಯೋಜನೆ, ಸಂಘಟನೆ, ೧೨೫ ವರ್ಷಗಳ ಹಿಂದಿನ ಕಾರ್ಯನಿರ್ವಹಣಾ ರೀತಿಯೇ ನಮ್ಮನ್ನು ಚಕಿತರನ್ನಾಗಿಸುವುದು.

ಯೂರೋಪಿನಲ್ಲಿ ಆಗ ಕೈಗಾರಿಕಾ ಕ್ರಾಂತಿಯು ನಡೆದಿತ್ತು. ಯೂರೋಪ್, ಅಮೆರಿಕಾ, ಇಂಗ್ಲೆಂಡ್ ದೇಶಗಳಲ್ಲಿ ಅದ್ಭುತ ವೈಜ್ಞಾನಿಕ ಸಂಶೋಧನೆಗಳು ನಡೆದಿದ್ದವು. ಈ ಕ್ಷೇತ್ರಗಳಲ್ಲಿ ಮಾನವನು ಮಾಡಿದ ಸಾಧನೆಗಳು ಜನಜೀವನದ ಮೇಲೆ, ಆಲೋಚನಾ ರೀತಿಯಲ್ಲಿ ಹಾಗೂ ಧಾರ್ಮಿಕ ಭಾವನೆಗಳಲ್ಲಿ ಬದಲಾವಣೆಗಳನ್ನು ತಂದವು. ಮಾನವನು ಲೌಕಿಕ ಪ್ರಪಂಚದಲ್ಲಿ ಮಾಡಿದ ಎಲ್ಲಾ ಸಾಧನೆಗಳ ಫಲ, ಪಾಶ್ಚಾತ್ಯ ನಾಗರಿಕತೆಯ ಸಾಧನೆ – ಇವೆಲ್ಲವನ್ನೂ, ಒಂದನ್ನೂ ಬಿಡದಂತೆ, ಆಕರ್ಷಕ ರೀತಿಯಲ್ಲಿ ಮನಮುಟ್ಟುವಂತೆ ಪ್ರದರ್ಶಿಸಬೇಕು; ಜತೆಗೆ ಯಾವ ಜನಾಂಗದ ನಾಗರಿಕತೆ 'ಹಿಂದುಳಿದಿದೆ' ಎಂದು ಅಮೆರಿಕನ್ನರು ಭಾವಿಸಿದ್ದರೋ ಅದರ ಬಗ್ಗೆ ಇನ್ನೂ ದೊಡ್ಡದಾಗಿ ಪ್ರದರ್ಶಿಸಬೇಕು ಎಂಬ ಆಲೋಚನೆ ಅಮೆರಿಕಾದ ಮನಸ್ಸಿಗೆ ಬಂದಿತಂತೆ. ಆದರೆ, ಪ್ರಪಂಚದ ಆಲೋಚನೆ, ಚಿಂತನೆಗಳನ್ನು ಬಿಂಬಿಸದಿದ್ದರೆ ಪ್ರದರ್ಶನಕ್ಕೆ ಪೂರ್ಣತೆ ಬರುವುದಿಲ್ಲ ಎಂಬ ಅನಿಸಿಕೆಯೂ ಉಂಟಾಯಿತಂತೆ. ಈ ಆಲೋಚನೆಯನ್ನು ಮಾಡಿದವರು ಧರ್ಮಸಂಸ್ಥೆಗೆ ಸಂಬಂಧಪಟ್ಟವರಲ್ಲ, ಅವರೊಬ್ಬ ಪ್ರಸಿದ್ಧ ವಕೀಲರು. ಅವರ ಹೆಸರು ಚಾರ್ಲ್ಸ್ ಕೆರೋಲ್ ಬಾನಿ. ಇವರು ಅಮೆರಿಕಾದ ಸಂವಿಧಾನ ಮತ್ತು ಆರ್ಥಿಕ ಸುಧಾರಣೆಗೆ ಸಂಬಂಧಿಸಿದ ಅನೇಕ ಮುಖ್ಯ ಗ್ರಂಥಗಳನ್ನು ರಚಿಸಿದ್ದುದರಿಂದ ಇವರ ಮಾತಿಗೆ ಮನ್ನಣೆಯಿತ್ತು. ಪ್ರಪಂಚದ ಧಾರ್ಮಿಕ, ತಾತ್ತ್ವಿಕ ಆಲೋಚನೆಗಳನ್ನು ಸಮ್ಮೇಳನದಲ್ಲಿ ಸೇರಿಸಲು ಸಮ್ಮತಿಸಿ, ಅವರನ್ನು ೧೮೯೦ರಲ್ಲಿ ವಿಶ್ವ ಕೊಲಂಬಿಯನ್ ಎಕ್ಸ್‌ಪೊಸಿಷನ್–೧೮೯೩ರ ಅಧ್ಯಕ್ಷರನ್ನಾಗಿ ನಿಯಮಿಸಲಾಯಿತು. ಸರ್ವಧರ್ಮ ಸಮ್ಮೇಳನವೆಂಬುದು ಈ ಬೃಹತ್ ಸಮ್ಮೇಳನದ ಒಂದು ಭಾಗವಷ್ಟೆ. ಇದರ ಸಂಘಟನೆಯ ಸಿದ್ಧತೆ ೧೮೯೦ರಲ್ಲೇ ಪ್ರಾರಂಭವಾಯಿತು. ಚಿಕಾಗೋದ ಫಸ್ಟ್ ಪ್ರೆಸ್ಬಿಟೇರಿಯನ್ ಚರ್ಚಿನ ಪಾದ್ರಿಗಳಾದ ರೆವರೆಂಡ್ ಡಾ. ಜಾನ್ ಎಚ್. ಬರೋಸ್ ಎಂಬುವರು ಸರ್ವಧರ್ಮ ಸಮ್ಮೇಳನದ ಪ್ರಮುಖ ಸಂಘಟನಕಾರರಾಗಿ ನಿಯಮಿಸಲ್ಪಟ್ಟರು.

## ವಿಶ್ವ ಕೊಲಂಬಿಯನ್ ಎಕ್ಸ್‌ಪೊಸಿಷನ್

೧೮೯೦ರಿಂದ ಮೂರುವರೆ ವರ್ಷಗಳ ಕಾಲ ಸವಿಸ್ತಾರ, ಜಟಿಲ, ಸಮ್ಮಿಶ್ರ ಯೋಜನೆಗಳು ಸಿದ್ಧವಾದುವು. ಪ್ರಪಂಚದ ಮೂಲೆಮೂಲೆಗಳಿಗೆ ಅಸಂಖ್ಯ ಪತ್ರಗಳು ಹರಿದಾಡಿದುವು. ಹತ್ತು ಸಾವಿರಕ್ಕೂ ಹೆಚ್ಚು ಪತ್ರಗಳನ್ನು, ನಲುವತ್ತು ಸಾವಿರ ಸೂಚನಾ ಕರಪತ್ರಗಳನ್ನು ಕಳುಹಿಸಲಾಯಿತು. ಪ್ರಪಂಚದ ಎಲ್ಲಾ ಭಾಗಗಳಿಂದಲೂ ಮಣಗಟ್ಟಲೆ ಉತ್ತರಪತ್ರಗಳು ಬಂದು ಸೇರಿದುವು. ಮೂವತ್ತು ತಿಂಗಳ ಕಾಲ ಎಲ್ಲಾ ರೈಲು ಮಾರ್ಗಗಳೂ ಜಲಮಾರ್ಗಗಳೂ ತಮಗರಿವಿಲ್ಲದಂತೆ ಸರ್ವಧರ್ಮ ಸಮ್ಮೇಳನಕ್ಕೆ ದುಡಿದವು. ಕೊನೆಗೆ, ೧೮೯೩ರ ಮೇ ೧೫ರಿಂದ ಅಕ್ಟೋಬರ್ ೨೮ರವರೆಗೆ ನಡೆದ ಬೃಹತ್ ಸಮ್ಮೇಳನದಲ್ಲಿ , ಸರ್ವಧರ್ಮ ಸಮ್ಮೇಳನವೂ ಸೇರಿದಂತೆ ಇಪ್ಪತ್ತು ಸಮ್ಮೇಳನಗಳು ನಡೆದುವು. ಇವುಗಳ ಪ್ರಧಾನ ವಿಷಯಗಳು: ಸ್ತ್ರೀಯರ ಪುರೋಗಮನ, ಸಾರ್ವಜನಿಕ ಪತ್ರಿಕೋದ್ಯಮ, ಔಷಧಿ ಮತ್ತು ಶಸ್ತ್ರಚಿಕಿತ್ಸೆ, ಮಾತು ನಡವಳಿಕೆ ಮತ್ತು ಪಾನದಲ್ಲಿ ಸಂಯಮ, ವಾಣಿಜ್ಯ ಮತ್ತು ಹಣಕಾಸು, ಸಂಗೀತ, ಸರ್ಕಾರ ಮತ್ತು ಕಾನೂನು ಸಂಸ್ಕರಣೆ, ಅರ್ಥವಿಜ್ಞಾನ, ಭಾನುವಾರದ ವಿಶ್ರಾಂತಿ; ಕೊನೆಯದಾಗಿ ಧರ್ಮ. ಏಕೆಂದರೆ ''ದೈವಶಕ್ತಿಯಲ್ಲಿ ವಿಶ್ವಾಸ ಎಂಬುದು ಮಾನವನ ಬೌದ್ಧಿಕ ಮತ್ತು ನೈತಿಕ ಬೆಳವಣಿಗೆಗೆ ಬೆಳಕು ನೀಡುವ ಮತ್ತು ಫಲದಾಯಕ ಸೂರ್ಯನಂತೆ.'' ಎಷ್ಟೊಂದು ಸಮ್ಮೇಳನಗಳು, ಎಷ್ಟು ವಿಷಯಗಳು ಎಂದರೆ, ಅವುಗಳ ಕಾರ್ಯಕ್ರಮಗಳ ಪಟ್ಟಿಯೇ ೧೬೦ ಪುಟಗಳ ಹೊತ್ತಿಗೆಯಾಯಿತಂತೆ! ಅಧ್ಯಕ್ಷರಾದ ಬಾನಿಯವರ ಬಗ್ಗೆ ಸ್ವಾಮೀಜಿಯವರು, ''ಯಾರು ಆ ಬೃಹತ್ ಕಾರ್ಯವನ್ನು ನಿಯೋಜಿಸಿ ಯಶಸ್ವಿಯಾಗಿ ಮುಕ್ತಾಯಗೊಳಿಸಿದರೋ ಅವರ ಮನಸ್ಸನ್ನು ನೋಡಿ. ಅವರು ಯಾವ ಧರ್ಮ ಪ್ರಚಾರಕರೂ ಅಲ್ಲ. ಎಲ್ಲಾ ಚರ್ಚುಗಳ ಅಧಿಕಾರಿಗಳ ಅಧ್ಯಕ್ಷರಾದ ಮಧುರ, ವಿದ್ವಾಂಸ ಮತ್ತು ಸಹನಶೀಲ ಸ್ವಭಾವದವರು. ಮತ್ತು ಅವರ ಪ್ರಕಾಶಮಾನವಾದ ಕಣ್ಣುಗಳಿಂದಲೇ ಅವರ ಅಂತಶ್ಚಿತ್ತ ಮಾತನಾಡುತ್ತಿರುವಂತಿದ್ದಾರೆ ಮಿ. ಬಾನಿ'' ಎಂದು ಬರೆದರು.

## ಸರ್ವಧರ್ಮ ಸಮ್ಮೇಳನ – ಪೂರ್ವಸಿದ್ಧತೆ

ಸರ್ವಧರ್ಮ ಸಮ್ಮೇಳನಕ್ಕೆ ಪ್ರೇರಣೆ ಮಿ. ಬಾನಿಯವರದಾದರೂ ಅದರ ಪೂರ್ವಸಿದ್ಧತೆ ಹಾಗೂ ನಿರ್ವಹಣೆಯ ಜವಾಬ್ದಾರಿಯೆಲ್ಲಾ ರೆವರೆಂಡ್ ಬರೋಸ್ ಅವರದಾಗಿತ್ತು. ವಿಶ್ವದ ಎಲ್ಲಾ

ಧರ್ಮಗಳನ್ನೂ ಒಗ್ಗೂಡಿಸುವಲ್ಲಿ ಅಪಾರ ಪತ್ರವ್ಯವಹಾರವಷ್ಟೇ ಅಲ್ಲ, ಲೇಖನಗಳು, ಭಾಷಣಗಳು, ಪ್ರವಚನಗಳನ್ನು ಮಾಡುವು ದಲ್ಲದೆ ಸಂಪಾದಕೀಯಗಳೂ ಬರೆಯಲ್ಪಟ್ಟುವು. ಇವು ಸರ್ವ ಧರ್ಮ ಸಮ್ಮೇಳನವನ್ನು ಆಯೋಜಿಸುವುದರ ಬಗ್ಗೆ ಅಪಾರ ಪ್ರಶಂಸೆ ಅಥವಾ ಕಠೋರ ನಿಂದೆಯನ್ನು ವ್ಯಕ್ತಪಡಿಸಿದುವು. ಸಮ್ಮೇಳನ ಸಮಿತಿಗೆ ಪ್ರಪಂಚದಾದ್ಯಂತ ಸಲಹೆ ಮತ್ತು ಬುದ್ಧಿ ವಾದ ನೀಡುವವರ ಸಂಖ್ಯೆಯೇ ೩೦೦೦ ಆಗಿತ್ತು. ಇವರಲ್ಲಿ ಭಾರತದವರು, ಮದರಾಸಿನ 'ಹಿಂದೂ' ಪತ್ರಿಕೆಯ ಸಂಪಾದಕ ರಾಗಿದ್ದ ಜಿ.ಎಸ್. ಅಯ್ಯರ್, ಬೊಂಬಾಯಿಯ ಬಿ.ಬಿ. ನಗರ್ ಕರ್, ಮತ್ತು ಕಲ್ಕತ್ತೆಯ ಪಿ.ಸಿ. ಮಜುಂದಾರ್ ಅವರು. ಕೊನೆಯ ಇಬ್ಬರು ಬ್ರಹ್ಮಸಮಾಜದ ಪ್ರತಿನಿಧಿಗಳಾಗಿ ಸರ್ವಧರ್ಮ ಸಮ್ಮೇ ಳನದಲ್ಲಿ ಪಾಲ್ಗೊಂಡರು. ಯಾವ ಸಂಘಸಂಸ್ಥೆಗೂ ಸೇರಿರದ ಸ್ವಾಮೀಜಿಯವರು 'ಹಿಂದೂ' ಪತ್ರಿಕೆಯ ಮೂಲಕ ಅಮೆರಿಕಾದ ಸರ್ವಧರ್ಮ ಸಮ್ಮೇಳನದ ಬಗ್ಗೆ, ಅಲ್ಲಿ ನಡೆಯುತ್ತಿದ್ದ ಪ್ರಯತ್ನ ಗಳ ಬಗ್ಗೆ ತಿಳಿದುಕೊಂಡಿರಬಹುದೆಂದು ಊಹಿಸಲಾಗಿದೆ.

### ಸ್ವಾಮಿ ವಿವೇಕಾನಂದರು ಮತ್ತು ಭರತಖಂಡ – ಸರ್ವಧರ್ಮ ಸಮ್ಮೇಳನದ ಪೂರ್ವದಲ್ಲಿ

ಸರ್ವಧರ್ಮ ಸಮ್ಮೇಳನ ನಡೆದುದು ಶ್ರೀರಾಮಕೃಷ್ಣರು ದೇಹತ್ಯಾಗ ಮಾಡಿದ ಏಳು ವರ್ಷಗಳ ನಂತರ. ಈ ಕಾಲದಲ್ಲಿ ಸ್ವಾಮೀಜಿಯವರು ಆರು ವರ್ಷಗಳ ಕಾಲ ಪರಿವ್ರಾಜಕರಾಗಿ ಭಾರತ ದೇಶ ಮತ್ತು ಭಾರತೀಯರ ಜನಜೀವನವನ್ನು ಕಣ್ಣಾರೆ ಕಂಡರು. ಆಗ ಭಾರತ ಸಂಪೂರ್ಣವಾಗಿ ಬ್ರಿಟಿಷರ ಆಳ್ವಿಕೆಗೆ ಒಳ ಗಾಗಿತ್ತು. ಒಂದು ಸಾವಿರ ವರ್ಷಗಳ ಅನ್ಯಧರ್ಮೀಯರ, ಅನ್ಯದೇಶೀಯರ ಆಳ್ವಿಕೆಯಿಂದ ಬಳಲಿ, ತಮ್ಮ ಮನೆಯನ್ನು ಇತರರಿಗೆ ಬಿಟ್ಟುಕೊಟ್ಟು ತಮಗೆ ಸ್ವಲ್ಪ ಸ್ಥಳವನ್ನು ಬೇಡುವ ಮ್ಲಾನ, ದೀನ ಭಾರತೀಯರ ಶೋಚನೀಯ ಸ್ಥಿತಿಯನ್ನು ಸ್ವಾಮೀಜಿ ಯವರು ಕಂಡು, ಸಂಕಟಪಟ್ಟು ಭಾರತದ ಪುನರುತ್ಥಾನದ ಮಾರ್ಗ ವನ್ನು ಹಗಲಿರುಳೂ ಚಿಂತಿಸಿದರು. ಭಾರತದ ಶ್ರೇಷ್ಠತೆ ಮತ್ತು ಅಂದಿನ ಭಾರತದ ನ್ಯೂನತೆ, ಎರಡನ್ನೂ ಸಂಪೂರ್ಣವಾಗಿ ಬಲ್ಲವ ರಾಗಿದ್ದರು. ಭಾರತೀಯರ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳು ವುದು, ಅದಕ್ಕೆ ಪರಿಹಾರವನ್ನು ಕಂಡುಹಿಡಿಯುವುದು, ಮತ್ತು ಅದನ್ನು ಅನುಷ್ಠಾನಗೊಳಿಸುವುದು – ಇವು ಮೂರನ್ನೂ ಆಮೂ ಲಾಗ್ರವಾಗಿ ಯೋಚಿಸಿದರು. ತಾವು ಸಂನ್ಯಾಸಿಗಳಾದರೂ ತಮ್ಮ ನತದೃಷ್ಟ ದೇಶವಾಸಿಗಳ ಅಭ್ಯುದಯಕ್ಕಾಗಿ ಶ್ರೀಮಂತ ದೇಶಗ ಳಿಂದ ಬೇಡಲು ಸಿದ್ಧರಾದರು.

ತಾವಾಗಿ ಅಮೇರಿಕಾ ದೇಶಕ್ಕೆ ಹೋಗಲು ಇಚ್ಛಿಸಲಿಲ್ಲ. ''ನರೇನ್ ಪ್ರಪಂಚಕ್ಕೆ ಬೋಧಿಸುವನು'' ಎಂದು ಶ್ರೀರಾಮ ಕೃಷ್ಣರು ಎಂದೋ ಭವಿಷ್ಯ ನುಡಿದಿದ್ದರು. ಇದನ್ನು ಶ್ರೀಶಾರದಾ ದೇವಿಯವರಿಗೂ ಹೇಳಿದ್ದರು. ಶ್ರೀರಾಮಕೃಷ್ಣರ ಉಪದೇಶಾ ಮೃತ ಸಾಗರದಿಂದ ನರೇನ್ ಎಲ್ಲ ದಿಕ್ಕುಗಳಲ್ಲಿಯೂ ಅದನ್ನು ಪ್ರೋಕ್ಷಿಸುತ್ತಿದ್ದ ದರ್ಶನವನ್ನು ಶ್ರೀಶಾರದಾದೇವಿಯವರು ಬಹು ಹಿಂದೆಯೇ ಕಂಡಿದ್ದರು. ಪರಿವ್ರಾಜಕ ಕಾಲದಲ್ಲಿ ಕನ್ಯಾಕುಮಾರಿ ಯ ಬಂಡೆಯ ಮೇಲೆ ಸ್ವಾಮೀಜಿಯವರು ಧ್ಯಾನಸ್ಥರಾಗಿದ್ದಾಗ ಸಮುದ್ರದ ಮೇಲೆ ಶ್ರೀರಾಮಕೃಷ್ಣರು ಅವರನ್ನು ಹಿಂಬಾಲಿಸು ವಂತೆ ಇವರಿಗೆ ಸನ್ನೆ ಮಾಡಿದ ದರ್ಶನ ಸ್ವಾಮೀಜಿಯವರಿಗೆ ಆಗಿತ್ತು. ಇಷ್ಟಾದರೂ ಕೆಲವರು, ಚಿಕಾಗೋದ ಸರ್ವಧರ್ಮ ಸಮ್ಮೇಳನದಲ್ಲಿ ಭಾರತವನ್ನು ಪ್ರತಿನಿಧಿಸಲು ಸ್ವಾಮೀಜಿಯವರೇ ಅತ್ಯಂತ ಯೋಗ್ಯರು ಎಂದು ಅವರಿಗೆ ಧನಸಹಾಯ ಮಾಡಲು ಮುಂದಾದಾಗ ಅದನ್ನು ನಿರಾಕರಿಸಿದರು. ಸಮ್ಮೇಳನಕ್ಕೆ ಹೋಗುವ ಪ್ರಸ್ತಾವವನ್ನು ಶ್ರೀಶಾರದಾದೇವಿಯವರು ಅನುಮೋದಿಸಿ ಆಶೀ ರ್ವದಿಸಿದ ನಂತರವೇ ಅವರು ಚಿಕಾಗೋಗೆ ಹೋಗಲು ನಿರ್ಧರಿ ಸಿದ್ದು. ಸಮ್ಮೇಳನ ಯಾವಾಗ ನಡೆಯುತ್ತದೆ ಎಂಬುದು ಅವರಿಗೆ ತಿಳಿದಿರಲಿಲ್ಲ. ಆರು ವಾರಗಳ ಮೊದಲೇ ಚಿಕಾಗೋ ತಲುಪಿಬಿಟ್ಟಿ ದ್ದರು. ಅಲ್ಲಿಗೆ ಹೋಗುವಾಗ ಯಾವುದಾದರೂ ಸಂಘದ ಶಿಫಾ ರಸು ಪತ್ರವನ್ನು ತೆಗೆದುಕೊಂಡು ಹೋಗಬೇಕೆಂಬುದೂ ತಿಳಿದಿರ ಲಿಲ್ಲ. ಅಲ್ಲಿಯ ಋತುಮಾನಕ್ಕೆ ಸರಿಹೊಂದುವ ಉಡುಪನ್ನು ತೆಗೆದುಕೊಂಡು ಹೋಗಬೇಕೆಂಬುದೂ ಗೊತ್ತಿರಲಿಲ್ಲ. ಅಮೆರಿಕಾ ತಲುಪಿದ ನಂತರ ಅವರು ಪಟ್ಟ ಕಷ್ಟಗಳು, ಸರ್ವಧರ್ಮ ಸಮ್ಮೇ ಳನದಲ್ಲಿ ಅವರ ವಿಶ್ವವಿಖ್ಯಾತ ಭಾಷಣ ಮಾಡುವ ೨೪ ಗಂಟೆಗಳ ಹಿಂದಿನವರೆಗೂ ಅನಾಮಧೇಯರಾಗಿದ್ದುದು, ಪ್ರತಿಷ್ಠಿತ ಅಮೆರಿ ಕನ್ನರು ಕೊಟ್ಟ ಪರಿಚಯ ಪತ್ರ, ಟಿಕೇಟು, ವಿಳಾಸ, ರೈಲಿನಿಂದ ಇಳಿಯಬೇಕಾದ ನಿಲ್ದಾಣ ಎಲ್ಲವನ್ನೂ ಕಳೆದುಕೊಂಡು ನಿರ್ಗತಿ ಕರು ವಾಸಿಸುವ ಗೂಡ್ಸ್ ಡಬ್ಬಿಯಲ್ಲಿ ಒಂದು ರಾತ್ರಿ ಕಳೆದುದು, ಮಾಸಲು ವಸ್ತ್ರ, ವಿಚಿತ್ರ ಪೇಟದಲ್ಲಿ ರಸ್ತೆಯ ಬದಿಯಲ್ಲಿ ನಿಸ್ಸಹಾ



ಯಕರಾಗಿ ಕುಳಿತಿದ್ದುದು, ನಂತರ ಯಾರದೋ ಸಹಾಯದಿಂದ ಸರ್ವಧರ್ಮ ಸಮ್ಮೇಳನವನ್ನು ತಲುಪಿದ್ದು, ಯಾವ ಧಾರ್ಮಿಕ ಸಂಘವನ್ನೂ ಪ್ರತಿನಿಧಿಸದೆ, ಯಾವ ಪರಿಚಯ ಪತ್ರವೂ ಇಲ್ಲದೆ, ಸರ್ವಧರ್ಮ ಸಮ್ಮೇಳನದಲ್ಲಿ ಮಾತನಾಡಿದ ಏಕೈಕ 'ಧರ್ಮಪ್ರತಿನಿಧಿ'ಯಾಗಿ ವಿಶ್ವ ಹೃದಯಸ್ಪರ್ಶಿ ಭಾಷಣವನ್ನು ಮಾಡಿದುದು — ಎಲ್ಲವೂ ರೋಮಾಂಚಕ ಚಾರಿತ್ರಿಕ ಘಟನಾವಳಿಯೇ!

### ಸರ್ವಧರ್ಮ ಸಮ್ಮೇಳನದ ಮೊದಲ ದಿನ

ಸರ್ವಧರ್ಮ ಸಮ್ಮೇಳನವು ಸೆಪ್ಟೆಂಬರ್ ೧೧, ೧೮೯೩ರಂದು ಬೆಳಗ್ಗೆ ಚಿಕಾಗೋದ **ಆರ್ಟ್ ಇನ್‌ಸ್ಟಿಟ್ಯೂಟ್**ನಲ್ಲಿ ಪ್ರಾರಂಭವಾಯಿತು. ಅದರಲ್ಲಿ **ಹಾಲ್ ಆಫ್ ಕೊಲಂಬಸ್** ಮತ್ತು **ಹಾಲ್ ಆಫ್ ವಾಷಿಂಗ್ಟನ್** ಎಂಬ ಎರಡು ವಿಶಾಲವಾದ ಸಭಾಂಗಣಗಳಿದ್ದುವು. ಹಾಲ್ ಆಫ್ ಕೊಲಂಬಸ್‌ನಲ್ಲಿ ಸಮ್ಮೇಳನದ ಪ್ರತಿನಿಧಿಗಳು ನೆರೆದಿದ್ದರು. ಅದರಲ್ಲಿ ೩೦೦೦ ಪ್ರೇಕ್ಷಕರಿಗೆ ಆಸನ, ೧೦೦೦ಕ್ಕೂ ಹೆಚ್ಚು ಜನರಿಗೆ ನಿಂತು ನೋಡಲು ಸ್ಥಳವಿತ್ತು. ಬೆಳಗ್ಗೆ ೧೦ ಘಂಟೆಗೆ ಸಮ್ಮೇಳನ ಉದ್ಘಾಟನೆಯನ್ನು ಘೋಷಿಸುವಂತೆ 'ನ್ಯೂ ಲಿಬರ್ಟಿ ಬೆಲ್' **'ಢಣ್'** ಎಂದು ಹತ್ತು ಪ್ರಮುಖ ಧರ್ಮಗಳ ಸಂಕೇತವಾಗಿ ಗಂಭೀರವಾಗಿ ಹತ್ತು ಬಾರಿ ಮೊಳಗಿತು. ಆ ಘಂಟೆಯ ಮೇಲೆ, 'ನಾನೊಂದು ಹೊಸ ಆದೇಶವನ್ನು ನಿಮಗಿತ್ತಿರುವೆನು, ನೀವು ಒಬ್ಬರನ್ನೊಬ್ಬರು ಪ್ರೀತಿಸಿ' ಎಂದು ಕೆತ್ತಲಾಗಿತ್ತು. ಘಂಟಾನಾದ ಪ್ರತಿನಿಧಿಗಳಿಗೆ ಕೇಳಿಸಿರಲು ಸಾಧ್ಯವಿರಲಿಲ್ಲ, ಏಕೆಂದರೆ, ಆ ಘಂಟೆ ಸಮ್ಮೇಳನದ ಕುತೂಹಲಕಾರಿ ವಸ್ತುವಾಗಿದ್ದು, ಸಮ್ಮೇಳನದ ಸ್ಥಳದಿಂದ ಬಹು ದೂರದಲ್ಲಿತ್ತು. ಅದರ ಢಣತ್ಕಾರದಿಂದ ಪ್ರೇಕ್ಷಕರನ್ನು ಕರೆಯುವ ಕೆಲಸವನ್ನೂ ಅದು ಮಾಡಲಿಲ್ಲ. ಏಕೆಂದರೆ, ನಾಲ್ಕು ಸಾವಿರಕ್ಕೂ ಮಿಕ್ಕ ಜನಸ್ತೋಮ ಬಹಳ ಮುಂಚೆಯೇ ಕೊಲಂಬಸ್ ಸಭಾಂಗಣದಲ್ಲಿ ಕಿಕ್ಕಿರಿದು ಧರ್ಮಪ್ರತಿನಿಧಿಗಳ ಆಗಮನಕ್ಕೆ ಕಾಯುತ್ತಿತ್ತು. ನಿರೀಕ್ಷೆಯಿಂದ ಕೂಡಿದ ಜನಸ್ತೋಮ ಎಷ್ಟು ಸ್ತಬ್ಧವಾಗಿತ್ತೆಂದರೆ, ತೆರೆದ ಕಿಟಕಿಯಿಂದ ವೇದಿಕೆಯ ಮೇಲೆ ಹಾರಿದ ಒಂದು ಪುಟ್ಟ ಹಕ್ಕಿಯ ರೆಕ್ಕೆಗಳ ಬಡಿತ ಕೇಳಿಸಿತು!

### ವೇದಿಕೆಯ ಮೇಲೆ ಸ್ವಾಮಿ ವಿವೇಕಾನಂದರು

ವೇದಿಕೆ ಸುಮಾರು ೫೦ ಅಡಿಗಳಷ್ಟು ಉದ್ದವಾಗಿತ್ತು; ಸಭಾಂಗಣದ ಅಗಲಕ್ಕಿಂತ ಕಡಿಮೆಯಿದ್ದು ಹತ್ತು ಅಡಿ ಕೆಳಗಿತ್ತು. ಗೋಡೆಗೆ ಒರಗಿದಂತೆ ಜಪಾನಿ ಮತ್ತು ಹೀಬ್ರೂ ಬರಹದ ಸುರುಳಿಗಳು ನೇತುಹಾಕಲ್ಪಟ್ಟಿದ್ದುವು. ಸಿಸಿರೊ ಮತ್ತು ಡೆಮಾಸ್ತನೀಸರ ಬಾಗಿದಂತಿರುವ ಬೃಹದಾಕಾರದ ಅಮೃತಶಿಲೆಯ ವಿಗ್ರಹಗಳು ೨೫ ಅಡಿಗಳ ಅಂತರದಲ್ಲಿ ನಿಲ್ಲಿಸಲ್ಪಟ್ಟಿದ್ದುವು. ಡೆಮಾಸ್ತನೀಸ್ ವಿಗ್ರಹದ ಎಡಭಾಗದಲ್ಲಿ, ಮರಿಹಕ್ಕಿಗಳ ಗೂಡನ್ನು ಬಲಗೈಯಿಂದ ಎತ್ತಿಹಿಡಿದು ಹಕ್ಕಿಯೊಂದನ್ನು ಹಾರಿ ಬಿಡುತ್ತಿದ್ದ ನೀಳವಾದ ಕನ್ಯೆಯ ಸಣ್ಣ ಕಂಚಿನ ಪ್ರತಿಮೆಯಿತ್ತು. ಎರಡು ವಿಗ್ರಹಗಳ ಮಧ್ಯೆ, ಸಿಂಹಾಸನದಂತಿದ್ದ, ವಿಶೇಷವಾಗಿ ಕೆತ್ತನೆ ಮಾಡಿದ ಉನ್ನತಾಸನವೊಂದಿತ್ತು. ಅದು, ಅಮೆರಿಕಾದ ಕ್ಯಾಥೊಲಿಕ್ ಚರ್ಚಿನ ಉನ್ನತ ಪಾದ್ರಿಗಳಾದ ಕಾರ್ಡಿನಲ್ ಗಿಬ್ಬನ್ಸ್ ಅವರಿಗೆ ಮೀಸಲಾಗಿತ್ತು. 'ಸಿಂಹಾಸನ'ದ ಎರಡು ಕಡೆಗಳಲ್ಲಿಯೂ ಸುಮಾರು ೩೦ ಆಸನಗಳನ್ನು ಮೂರು ಸಾಲುಗಳಲ್ಲಿ ಧರ್ಮ ಪ್ರತಿನಿಧಿಗಳಿಗೆ, ಸಮ್ಮೇಳನದ ಅಧಿಕಾರಿಗಳಿಗೆ ಮತ್ತು ಆಹ್ವಾನಿತ ಅತಿಥಿಗಳಿಗೆ ಹಾಕಲಾಗಿತ್ತು. ಭಾಷಣಕಾರರು ನಿಂತು ಮಾತನಾಡಲು ಒಂದು ಎತ್ತರವಾದ ಮೇಜು (ರಾಸ್ಟ್ರಮ್) ಇಡಲಾಗಿತ್ತು. ನಿಗದಿತವಾಗಿದ್ದಂತೆ, ಹತ್ತು ಗಂಟೆಗೆ ಸರಿಯಾಗಿ ವಿವಿಧ ವರ್ಣಗಳ ಚಿತ್ರವಿಚಿತ್ರ ವೇಷಭೂಷಣಗಳಿಂದ ಕೋರೈಸುತ್ತ ಪ್ರತಿನಿಧಿಗಳ ಮೆರವಣಿಗೆ ನಿಧಾನವಾಗಿ ಗಾಂಭೀರ್ಯದಿಂದ ಸಭಾಂಗಣದ ಮಧ್ಯದಲ್ಲಿ ಸಾಗಿ ಬಂದಿತು. ವೇದಿಕೆಯನ್ನು ಹಿಂಭಾಗದಿಂದ ಹತ್ತಿ ವಿವಿಧ ದೇಶಗಳ ಧ್ವಜಗಳ ಕೆಳಗೆ ಎಲ್ಲ ಧರ್ಮಗಳ ಪ್ರತಿನಿಧಿಗಳೂ ಆಸೀನರಾದ ಘಟನೆ ಪ್ರಪಂಚದ ಇತಿಹಾಸದಲ್ಲಿ ಎಂದೂ ನಡೆದಿರಲಿಲ್ಲ. ಇಂತಹ ಮೋಹಕ ಸಮೂಹದಲ್ಲಿ ಕುಳಿತಿದ್ದ, ಕಿತ್ತಳೆ ಬಣ್ಣದ ನಿಲುವಂಗಿ, ಹಳದಿ ರುಮಾಲು ತೊಟ್ಟ ಸ್ವಾಮಿ ವಿವೇಕಾನಂದರ ಮುಖ ತಾಮ್ರದ ಬಣ್ಣದಿಂದ ಕೂಡಿತ್ತು. ಎದುರುಗಡೆ ವಿಶಾಲ ಸಾಗರದಂತೆ ಸಭಿಕರು – ಗಂಡಸರು, ಹೆಂಗಸರು – ಎಲ್ಲಿಯೂ ಸ್ಥಳ ಖಾಲಿ ಇಲ್ಲದಂತೆ ಕುಳಿತಿದ್ದರು. ಪುರುಷರಿಗಿಂತ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿದ್ದರು. ''ನನ್ನ ಹೃದಯ ಬಡಿದುಕೊಳ್ಳುತ್ತಿತ್ತು ಮತ್ತು ನಾಲಿಗೆ ಸಂಪೂರ್ಣವಾಗಿ ಒಣಗಿತ್ತು'' ಎಂದು ಸ್ವಾಮೀಜಿ ನಂತರ ಹೇಳಿದರು. ಅದೇನೂ ಆಶ್ಚರ್ಯವಲ್ಲ , ಏಕೆಂದರೆ ಅವರು ವಿಜೃಂಭಿಸುತ್ತಿದ್ದ, ಇಡೀ ಪ್ರಪಂಚದ ಧಾರ್ಮಿಕ ಪಂಥಗಳನ್ನು ಪ್ರತಿನಿಧಿಸುವ ಪ್ರತಿಷ್ಠಿತರ ಮಧ್ಯದಲ್ಲಿ ಕುಳಿತಿದ್ದರು. ಅಮೆರಿಕಾದಲ್ಲಿ ಅವರು ಅದುವರೆಗೆ ಸಣ್ಣ ಪುಟ್ಟ ಗುಂಪುಗಳಿಗೆ ಮಾತನಾಡಿದ್ದರೆ ಹೊರತು ಇಂತಹ ಭಾರಿ ಜನಸಮೂಹದ ಮುಂದೆ ಮಾತನಾಡುವುದಿರಲಿ, ಅಂಥದನ್ನು ನೋಡಿಯೂ ಇರಲಿಲ್ಲ.

### ಸಹೋದರಿಯರೇ ಮತ್ತು ಸಹೋದರರೇ!

ಸಮ್ಮೇಳನ ಆರ್ಗನ್ ನಾದದೊಂದಿಗೆ ಪ್ರಾರ್ಥನೆಯಿಂದ ಪ್ರಾರಂಭವಾಯಿತು. ಸಭಿಕರು ಎದ್ದು ನಿಂತು ದನಿಗೂಡಿಸಿದರು. ಹದಿನೇಳು ದಿನಗಳ ಕಾಲ ಬೆಳಿಗ್ಗೆ, ಮಧ್ಯಾಹ್ನ ಮತ್ತು ಸಂಜೆ ಭಾಷಣಗಳ ಸುರಿಮಳೆ. ಸ್ವಾಮೀಜಿ, ಮೊದಲ ದಿನ ಬೆಳಗ್ಗೆ ಮತ್ತು ಮಧ್ಯಾಹ್ನ ಮಾತನಾಡದೆ ಅವರ ಸರದಿಯನ್ನು ಇತರರಿಗೆ ಬಿಟ್ಟುಕೊಟ್ಟು ಸಂಜೆ ಮಾತನಾಡಿದರು. ಅವರನ್ನು ಮಾತನಾಡಲು ಆಹ್ವಾನಿಸಿದಾಗ, ಎದ್ದು ವೇದಿಕೆಯ ಮುಂದೆ ನಿಂತು ಮನಸ್ಸಿನಲ್ಲಿ ವಾಗಧೀಶ್ವರಿ ಸರಸ್ವತಿಗೆ ಪ್ರಾರ್ಥಿಸಿ, ಸಭೆಯನ್ನುದ್ದೇಶಿಸಿ, ''**ಅಮೆರಿಕಾದ ನನ್ನ ಸಹೋದರಿಯರೇ ಮತ್ತು ಸಹೋದರರೇ**'' ಎಂದು ಹೇಳಿದುದೇ ತಡ ಸಭಿಕರಿಂದ ಪ್ರಚಂಡ ಕರತಾಡನ ಪ್ರಾರಂಭವಾಗಿ ಎರಡು ನಿಮಿಷಗಳ ಕಾಲ ಮುಂದುವರಿಯಿತು. ಅಲ್ಲಿ ಕುಳಿತಿದ್ದ ನಾಲ್ಕು ಸಾವಿರ ಜನ ತಮಗೆ ತೋರಿಸಿದ ಗೌರವ ಅದೇನೆಂದು

ಅರಿಯದೆ ಎದ್ದು ನಿಂತರು. ಕರತಾಡನ ಮುಗಿದ ನಂತರ ಅನೇಕ ಹೆಂಗಸರು ಬೆಂಚುಗಳ ಮೇಲೆ ಕಾಲಿಡುತ್ತಾ ಸ್ವಾಮೀಜಿಯವರೆಡೆಗೆ ಮುನ್ನುಗ್ಗಿದರು. ಇದನ್ನು ಕಣ್ಣಾರೆ ಕಂಡ ಮಿಸಸ್ ಬ್ಲಾಜೆಟ್ ಎಂಬುವರು, ''ಹೇ ಮಗು, ಈ ದಾಳಿಯನ್ನು ತಡೆದುಕೊಳ್ಳಬಲ್ಲೆಯಾದರೆ, ನೀನು ದೇವನೇ ಸರಿ!'' ಎಂದು ಉದ್ಗರಿಸಿದರು. (ಸ್ವಾಮೀಜಿಯವರು ಎರಡನೆ ಬಾರಿ ಅಮೆರಿಕಾಕ್ಕೆ ಹೋದಾಗ ಲಾಸ್ ಏಂಜಲೀಸ್‌ನಲ್ಲಿ ಅವರಿಗೆ ಈ ಮಹಿಳೆ ಆತಿಥೇಯರಾಗಿದ್ದರು.) ಸ್ವಾಮೀಜಿಯವರ ಬಾಯಿಂದ ಬಂದ ಮೊದಲ ಐದು ಪದಗಳನ್ನು ಕೇಳಿದ ತಕ್ಷಣ ಹರ್ಷೋದ್ಗಾರದೊಂದಿಗೆ ತಾವೇ ತಾವಾಗಿ ದೀರ್ಘಕಾಲ ಎದ್ದುನಿಂತು ತಮ್ಮ ಆಂತರ್ಯದ ಸಂತೋಷವನ್ನು ವ್ಯಕ್ತಪಡಿಸಿದುದಕ್ಕೆ ಕಾರಣ ಸರ್ವಧರ್ಮ ಸಮ್ಮೇಳನದ ಶ್ರೋತೃಗಳಿಗೇ ತಿಳಿದಿರಲು ಸಾಧ್ಯವಿಲ್ಲ ಎಂದು ಮಿಸಸ್ ಬ್ಲಾಜೆಟ್ ಪ್ರತಿಕ್ರಿಯಿಸಿದರು. ಸಮ್ಮೇಳನದ ಮೂಲಕ ಸ್ವಾಮೀಜಿ ಇಡೀ ಅಮೆರಿಕಾದ ಜನತೆಯನ್ನು ಸಂಬೋಧಿಸಿದ್ದರು; ಸಂದರ್ಭ ವಶದಿಂದ ಅವರ ಹೃದಯ ತುಂಬಿಬಂದಿತ್ತು. ಅವರ ಅಂತಃಶಕ್ತಿ ಸಂಪೂರ್ಣವಾಗಿ ಮೇಲೆದ್ದಿತ್ತು. ಅವರ ಆಧ್ಯಾತ್ಮಿಕ ಚೈತನ್ಯ ಸಭಿಕರ ಚೈತನ್ಯದಲ್ಲಿ ಒಂದಾಗಿತ್ತು. 'ನಿಮ್ಮ ಸ್ವಾಗತದಿಂದ ನನ್ನ ಹೃದಯ ಅವರ್ಣನೀಯ ಆನಂದದಿಂದ ತುಂಬಿದೆ' ಎಂದು ಅವರು ಭಾಷಣವನ್ನು ಪ್ರಾರಂಭಿಸಿದರು.

**'ಸಹೋದರ-ಸಹೋದರಿಯರೇ'** ಎಂದು ಉದ್ದೇಶಿಸುವುದು ಸಾಮಾನ್ಯವಾದರೂ ಸ್ವಾಮೀಜಿಯವರು ಸಹೋದರಿಯರನ್ನು ಮೊದಲು ಉದ್ದೇಶಿಸಿದುದೂ ಕೂಡ ಸಮ್ಮೇಳನದಲ್ಲಿದ್ದ ಸ್ತ್ರೀಯರಲ್ಲಿ ಅವರ ಒಲುಮೆಯ ಅಭಿವ್ಯಕ್ತಿಯ ಶಕ್ತಿ ವಿಶೇಷವಾಗಿ ಆವಿರ್ಭಾವವಾಗಲು ಒಂದು ನಿಮಿತ್ತವೆಂದು ತಿಳಿಯಬಹುದು. ಸಭೆಯಲ್ಲಿದ್ದವರ ಆಧ್ಯಾತ್ಮಿಕತೆ ಸಾಮಾನ್ಯ ಮಟ್ಟದ್ದಾಗಿತ್ತು. ಅಮೆರಿಕನ್ ಮಹಿಳೆಯರಿಗೆ ಆ ಕಾಲದಲ್ಲಿ ತಮ್ಮ ಸ್ಥಾನದ ಮಹತ್ವ ಅರಿವಾಗತೊಡಗಿತ್ತು. ಮಹಿಳೆ ಎಂದರೆ ಸ್ವಾತಂತ್ರ್ಯ ಮತ್ತು ಘನತೆ; ಅವೆರಡೂ ತಮ್ಮ ಹಕ್ಕು ಎಂಬುದು ಅವರಿಗೆ ತಿಳಿದಿತ್ತು. ಆದುದರಿಂದ ಅವರು ಸ್ವಾಮೀಜಿಯವರನ್ನು ಗಂಭೀರವಾಗಿ ಸ್ವೀಕರಿಸಿದರು ಎನ್ನಲಾಗಿದೆ. ಸಮ್ಮೇಳನದ ಅವಧಿಯಲ್ಲೇ ಮತ್ತೊಂದು ದಿನ ಸ್ವಾಮೀಜಿಯವರು ಭಾರತೀಯ ಮಹಿಳೆಯರ ಸ್ಥಿತಿಯ ಬಗ್ಗೆ ಮಾತನಾಡುವಾಗ ಸ್ತ್ರೀತ್ವದ ಪರಿಪೂರ್ಣ ಆದರ್ಶವೆಂದರೆ ಪರಿಪೂರ್ಣ ಸ್ವಾತಂತ್ರ್ಯ ಎಂದು ಹೇಳಿದರು.

### ಐತಿಹಾಸಿಕ ಧನ್ಯವಾದ

ನಂತರ ಸ್ವಾಮೀಜಿ, ಸಮ್ಮೇಳನದ ಅಧಿಕಾರಿಗಳಿಗೆ ಮತ್ತು ಸಭಿಕರಿಗೆ ಮೂರು ಧನ್ಯವಾದಗಳನ್ನು ಅರ್ಪಿಸಿದರು; ಮೊದಲನೆಯದಾಗಿ, ಪ್ರಪಂಚದ ಅತ್ಯಂತ ಪ್ರಾಚೀನ ಸಂನ್ಯಾಸಿಗಳ ಸಂಘದ ಹೆಸರಿನಲ್ಲಿ. ಗೌತಮ ಬುದ್ಧನ ಕಾಲ ಕ್ರಿ.ಪೂ. ೬ನೆಯ ಶತಮಾನ. ಆಗ ಬೌದ್ಧ ಸಂನ್ಯಾಸಿಗಳ ಸಂಘವಿತ್ತು. ಸಂನ್ಯಾಸಾಶ್ರಮ ಹಿಂದೂಧರ್ಮದಷ್ಟೇ ಪ್ರಾಚೀನವಾದುದು. ಎರಡನೆಯದಾಗಿ, ಧರ್ಮಗಳ ಜನನಿಯಾದ ಹಿಂದೂಧರ್ಮದ ಪರವಾಗಿ ಧನ್ಯವಾದಗಳನ್ನು ಹೇಳಿದರು. ಇದೊಂದು ಐತಿಹಾಸಿಕ ಘಟನೆಯೇ ಸರಿ. ಹಿಂದೂಧರ್ಮವನ್ನು 'ಅನಾಗರಿಕ' ಧರ್ಮ ಎಂದು ಭಾವಿಸಿ, ಕ್ರೈಸ್ತಧರ್ಮದ ಔನ್ನತ್ಯವನ್ನು ತೋರಿಸಲೋಸುಗ ಅಮೆರಿಕಾದ ಕ್ರೈಸ್ತರು ಏರ್ಪಡಿಸಿದ್ದ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಸ್ವಾಮೀಜಿ ಅಧಿಕಾರಯುತವಾಗಿ ವಿಶ್ವವೇದಿಕೆಯಲ್ಲಿ ಇದನ್ನು ಹೇಳಿದರು. ಸ್ವಾಮೀಜಿಯವರು ಆಧ್ಯಾತ್ಮಿಕ ಸತ್ಯಗಳನ್ನು ಸಾಕ್ಷಾತ್ಕರಿಸಿಕೊಂಡಿದ್ದವರು ಮತ್ತು ದ್ರಷ್ಟಾರರು. ಇಂತಹವರನ್ನು ಅಮೆರಿಕಾ ದೇಶ ಕಂಡಿರಲಿಲ್ಲ. ಹಿಂದೂಧರ್ಮಕ್ಕೆ ಎರಡು ವೈಶಿಷ್ಟ್ಯಗಳಿವೆ. ಅದು ಸನಾತನ ಮತ್ತು ಅಪೌರುಷೇಯ. ಸನಾತನ ಎಂದರೆ, ಅದು ಅನಾದಿ ಮತ್ತು ಅನಂತ. ಕಾಲದಲ್ಲಿ ಎಷ್ಟು ಹಿಂದೆ ಹೋದರೂ, ಅದು ಇನ್ನೂ ಹಿಂದೆ ಹೋಗುವುದು ಮತ್ತು ಅದು ಎಂದೆಂದಿಗೂ ಇರುವುದು. ಅದಕ್ಕೆ ಕೊನೆಯಿಲ್ಲ. ಇದಕ್ಕೆ ಧರ್ಮಗಳ ಇತಿಹಾಸವೇ ಸಾಕ್ಷಿ. ಇತರ ಧರ್ಮಗಳಿಗೆ ಆದಿ ಇದೆ. ಅವು ಒಂದು ಕಾಲದಲ್ಲಿ ಪ್ರಾರಂಭವಾಗಿವೆ. ಇರಾನ್ ಮುಂತಾದ ದೇಶಗಳಲ್ಲಿ ಮೊದಲು ಇದ್ದ ಧರ್ಮ ಹೋಗಿ ಬೇರೆಯದು ಬಂದಿದೆ. ಅಪೌರುಷೇಯ ಎಂದರೆ, ವ್ಯಕ್ತಿಗಳ ಮೇಲೆ ನಿಂತಿಲ್ಲ. ಹಿಂದೂಧರ್ಮ, ತತ್ತ್ವಗಳ ಸೌಧದ ಮೇಲೆ ನಿಂತಿದೆ. ಇತರ ಧರ್ಮಗಳು ಕೆಲವು ವ್ಯಕ್ತಿಗಳ ಮೇಲೆ ನಿಂತಿವೆ. ಆ ವ್ಯಕ್ತಿಗಳನ್ನು ತೆಗೆದು ಹಾಕಿದರೆ ಆ ಧರ್ಮಗಳು ಇರುವುದಿಲ್ಲ. ಶ್ರೀರಾಮಕೃಷ್ಣರು, 'ಹಿಂದೂಧರ್ಮವೊಂದೇ ಸನಾತನ. ಮಿಕ್ಕೆಲ್ಲವೂ ಸ್ವಲ್ಪ ಕಾಲ ಇರುತ್ತವೆ, ಹೋಗುತ್ತವೆ' ಎಂದು ಅವರ ಮಾತುಕತೆಗಳಲ್ಲಿ ಹೇಳಿರುವರು. *(ಶ್ರೀರಾಮಕೃಷ್ಣ ವಚನವೇದ, ಭಾಗ ೨, ಪು. ೧೨೮).* ಕೊನೆಯದಾಗಿ, ಎಲ್ಲಾ ಜಾತಿ ಮತಗಳ ಹಿಂದೂಗಳ ಪರವಾಗಿ ಧನ್ಯವಾದಗಳನ್ನು ಹೇಳಿದರು. ಸಮ್ಮೇಳನದ ಮೊದಲ ದಿನವೇ ಇದ್ದಕ್ಕಿದ್ದಂತೆ ಅಪಾರ ಕೀರ್ತಿ ಅವರ ಪಾಲಿಗೆ ಬಂದಿತ್ತು. ಆದರೂ ಅವರ ಹೃದಯದಲ್ಲಿ ಅವರ ದೇಶವಾಸಿಗಳಿಗೆ ಶಾಶ್ವತ ಸ್ಥಾನವಿತ್ತು. ಮಾತೃಭೂಮಿಯನ್ನು ಅವರಷ್ಟು ಪ್ರೀತಿಸಿದ, ದೇಶವಾಸಿಗಳಿಗಾಗಿ ತಮ್ಮೆಲ್ಲವನ್ನೂ ಅರ್ಪಿಸಿದ ಸಂನ್ಯಾಸಿಗಳನ್ನು ಭಾರತದ ಇತಿಹಾಸ ಕಾಣದು. ಸಮ್ಮೇಳನದ ಮೊದಲ ದಿನದ ಕಾರ್ಯಕ್ರಮ ಮುಗಿದ ನಂತರ ರಾತ್ರಿ ಸ್ವಾಮೀಜಿ ಭವ್ಯ ಶ್ರೀಮಂತರ ಮನೆಯ ಅತಿಥಿಯಾಗಿದ್ದಾಗ, ಬಡತನ ಕಷ್ಟಗಳಿಂದ ಕೂಡಿದ ಭಾರತೀಯರನ್ನು ನೆನೆದು ಹೃದಯದಲ್ಲಿ ದುಃಖ ಉಕ್ಕಿ ಬಂದು ಬಿಕ್ಕಿ ಬಿಕ್ಕಿ ಅತ್ತರಂತೆ.

### ಅನಿರಾಕರಣಮಸ್ತು

ನಂತರ, ಹಿಂದೂಧರ್ಮ ಪ್ರಪಂಚಕ್ಕೆ ಇತ್ತಿರುವ ಮುಖ್ಯ ಸಂದೇಶವನ್ನು ಸಮ್ಮೇಳನಕ್ಕೆ ತಿಳಿಸಿದರು. ಅವೇ (ಪರಮತ) ಸಹಿಷ್ಣುತೆ ಮತ್ತು ಸ್ವೀಕೃತಿ. ಹಿಂದೂಗಳು ಎಲ್ಲಾ ಧರ್ಮದವರಿಗೂ ಮತಗಳಿಗೂ ಸ್ಥಳ ಕೊಟ್ಟಿದ್ದಾರೆ. ಎಲ್ಲಾ ಮತಗಳನ್ನೂ ಸತ್ಯವೆಂದು ಪರಿಗಣಿಸಿದ್ದಾರೆ. ಒಂದು ಧರ್ಮ ಸತ್ಯವಾದರೆ ಮತ್ತೊಂದು ಮತವೂ ಸತ್ಯ, ಅಷ್ಟೇ ಸತ್ಯ. ಹಿಂದೂಧರ್ಮ ಎಲ್ಲವನ್ನೂ ಸ್ವೀಕರಿ

ಸಿದೆ. ಯಾವುದನ್ನೂ ಯಾರನ್ನೂ ನಿರಾಕರಿಸಿಲ್ಲ. ನಿರಾಕರಣೆ ಎಂಬುದೇ ಹಿಂದೂ ಧರ್ಮದ ಭಾಷೆಯಾದ ಸಂಸ್ಕೃತದಲ್ಲಿ ಇಲ್ಲ. ಜಗತ್ತಿಗೆ ವಿಭುವಾದ ದೇವರು ಇಲ್ಲವೆಂದು ವಾದಿಸುವವರಿಗೂ ಹಿಂದೂ ಧರ್ಮದಲ್ಲಿ ಸ್ಥಾನವಿದೆ (ಚಾರ್ವಾಕ ದರ್ಶನ). ಹಾಗೆ ಮಾಡದಿದ್ದರೆ, ಸಮ್ಮೇಳನದ ಉದ್ದೇಶವಾದ ಸಾರ್ವತ್ರಿಕ ಭ್ರಾತೃತ್ವಕ್ಕೆ ವಿರೋಧವುಂಟಾಗುತ್ತದೆ ಎಂದು ದಿಟ್ಟವಾಗಿ ಸಮ್ಮೇಳನಕ್ಕೆ, ಸದಸ್ಯರಿಗೆ ತಿಳಿವಳಿಕೆ ನೀಡಿದರು.

### ಧರ್ಮಾಂಧತೆ

ಇತರ ರಾಷ್ಟ್ರಗಳು ಅನ್ಯಧರ್ಮೀಯರನ್ನು ಹಿಂಸಿಸಿ, ಅವರ ಧರ್ಮಕ್ಕೆ ಅಗೌರವವನ್ನು ತೋರಿಸಿ, ಅವರನ್ನು ಅವರ ದೇಶದಿಂದ ಓಡಿಸಿರುವುದು ಇತಿಹಾಸದ ಭಾಗವಾಗಿದೆ. ಹಾಗೆ ಹಾನಿಗೊಳಗಾದ ಇಸ್ರೇಲ್ ಮತ್ತು ಝುರತುಷ್ಟ ಜನಾಂಗಗಳಿಗೆ ಹಿಂದೂಗಳು ಭಾರತದಲ್ಲಿ ರಕ್ಷಣೆ ನೀಡಿರುವುದನ್ನು ವಿಶ್ವ ಸಮ್ಮೇಳನಕ್ಕೆ ನೆನಪು ಮಾಡಿ ಅವರ ಕಣ್ಣು ತೆರೆಸಿದರು. ಇದು ಕೇವಲ ಸೌಜನ್ಯದ ನಡವಳಿಕೆಯಲ್ಲ. ಧಾರ್ಮಿಕತೆಯ ಅಂಶ ಹಿಂದೂಗಳ ನರನಾಡಿಯಲ್ಲಿ ಯಾವಾಗಲೂ ಹರಿಯುತ್ತ, ಪರಮತಸಹಿಷ್ಣುತೆ ಅವರ ನಿತ್ಯಜೀವನದ ಭಾಗವಾಗಿದೆ ಎಂದು ತಿಳಿಸುತ್ತಾ, ಲಕ್ಷೋಪಲಕ್ಷ ಹಿಂದೂಗಳು ಪ್ರತಿನಿತ್ಯವೂ ಮಾಡುವ ಪ್ರಾರ್ಥನೆಯೊಂದು ಹೀಗಿದೆ ಎಂದು ಅವರ ಮುಂದೆ ಉಚ್ಚರಿಸಿದರು:

**ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ**
**ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿ ಚ ।**
**ರುಚೀನಾಂ ವೈಚಿತ್ರ್ಯಾದೃಜುಕುಟಿಲನಾನಾಪಥಜುಷಾಂ**
**ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥**

'ವಿವಿಧ ನದಿಗಳು ಎಲ್ಲೆಲ್ಲಿಯೋ ಹುಟ್ಟಿ ಅವುಗಳ ನೀರು ಸಮುದ್ರದಲ್ಲಿ ಮಿಳಿತವಾಗುವಂತೆ, ಓ ಜಗದೀಶ, ವಿಭಿನ್ನ ಸಂಸ್ಕಾರಗಳಿಂದ ಕೂಡಿದ ಮಾನವರು ಅನುಸರಿಸುವ ವಿವಿಧ ಮಾರ್ಗಗಳು ಬಗಬಗೆಯಾಗಿ ಕಂಡರೂ, ಋಜು ಅಥವಾ ಕುಟಿಲವಾಗಿದ್ದರೂ, ಅವು ನಿನ್ನಡೆಗೇ ಕರೆದೊಯ್ಯುತ್ತವೆ.'

### ಮುಕ್ತಾಯ

ಕೊನೆಯಲ್ಲಿ ಸ್ವಾಮೀಜಿಯವರು, ಅಭೂತಪೂರ್ವವೂ ಅತ್ಯಂತ ವಿಶಿಷ್ಟವೂ ಆದ ಈ ಸಮ್ಮೇಳನವೇ ಭಗವದ್ಗೀತೆ ಬೋಧಿಸಿರುವ ಈ ಅದ್ಭುತ ತತ್ತ್ವಕ್ಕೆ ಒಂದು ಸಂಕೇತವಾಗಿದೆ ಎಂದು ಹೇಳುತ್ತಾರೆ:

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

'ನನ್ನ ಬಳಿಗೆ ಯಾರೇ ಬರಲಿ, ಯಾವ ರೀತಿಯಲ್ಲಾದರೂ ಬರಲಿ, ನಾನು ಅವರೆಡೆಗೆ ಬರುತ್ತೇನೆ; ಎಲ್ಲರೂ ಕೊನೆಗೆ ನನ್ನೆಡೆಗೆ ಬರುವ ಮಾರ್ಗದಲ್ಲಿ ಹೋರಾಡುತ್ತಿರುವರು' ಎಂಬ ಶ್ಲೋಕವನ್ನು ಅವರ ಇಂಪಾದ ಕಂಚಿನ ಕಂಠದಿಂದ ಉಚ್ಚರಿಸಿದರು.

''ಸಂಕುಚಿತ ಪಂಥಗಳ ಸೃಷ್ಟಿ, ಮತಾಂಧತೆ ಮತ್ತು ಅವುಗಳ ಸಂತಾನವಾದ ಧಾರ್ಮಿಕ ಹಿಂಸಾಚಾರ — ಇವು ಸುಂದರವಾದ ವಿಶ್ವವನ್ನು ಕಾಡುತ್ತಿವೆ. ಇದರಿಂದ ಪ್ರಪಂಚದಲ್ಲಿ ಎಲ್ಲೆಡೆ ಹಿಂಸೆ, ರಕ್ತಪಾತ ಮತ್ತು ನಾಗರಿಕತೆಯ ನಾಶ ಆಗುತ್ತಿದೆ. ಇಂದು ಈ ಸಭೆಯಲ್ಲಿ ನೆರೆದಿರುವ ಪ್ರಪಂಚದ ವಿವಿಧ ಧರ್ಮಪ್ರತಿನಿಧಿಗಳ ಗೌರವಾರ್ಥ ಧ್ವನಿಗೈದ ಘಂಟಾರವ, ಖಡ್ಗ ಅಥವಾ ಲೇಖನಿಯಿಂದಾಗುವ ಎಲ್ಲಾ ಧಾರ್ಮಿಕ ಹಿಂಸಾಚಾರಗಳ, ಮತ್ತು ಒಂದೇ ಗುರಿಯೆಡೆಗೆ, ಆದರೆ ವಿವಿಧ ಪಥಗಳಲ್ಲಿ ಸಾಗುತ್ತಿರುವ ಸೋದರರ ನಡುವಣ ಅಸಹಿಷ್ಣುತಾಭಾವನೆಗಳ ಮೃತ್ಯುಘಂಟೆ ಎಂದು ನಾನು ದೃಢವಾಗಿ ನಂಬುತ್ತೇನೆ'' ಎಂದು ತಮ್ಮ ಚರಿತ್ರಾರ್ಹ ಭಾಷಣವನ್ನು ಮುಕ್ತಾಯಗೊಳಿಸಿದರು. ಸ್ವಾಮೀಜಿಯವರ ಭಾಷಣದ ಮಧ್ಯೆ ಆಗಾಗ ಕರತಾಡನವಾಗುತ್ತಿದ್ದು, ಕೊನೆಯಲ್ಲಿ ಭಾರಿ ಕರತಾಡನವಾಯಿತು.

ಸ್ವಾಮೀಜಿ ವಿಶ್ವಧರ್ಮ ಸಮ್ಮೇಳನದಲ್ಲಿ ಮಾತನಾಡಲು ಪ್ರಾರಂಭಿಸಿದಾಗ ಅದು 'ಹಿಂದೂಗಳ ಧಾರ್ಮಿಕ ಆಲೋಚನೆ' ಆಗಿತ್ತು, ಆದರೆ ಅವರು ಮುಕ್ತಾಯಗೊಳಿಸಿದಾಗ, ಹಿಂದೂ ಧರ್ಮ ಸೃಷ್ಟಿಯಾಗಿತ್ತು. ಎಂದು ಸೋದರಿ ನಿವೇದಿತಾ ಹೇಳಿದ್ದಾರೆ. ಸ್ವಾಮಿ ವಿವೇಕಾನಂದರು, ಸಪ್ತಸಾಗರಗಳನ್ನು ದಾಟಿ ಪಾಶ್ಚಿಮಾತ್ಯರಿಗೆ ಇಂಗ್ಲಿಷ್ ಭಾಷೆಯಲ್ಲಿ ಹಿಂದೂಧರ್ಮವನ್ನು ವಿವರಿಸಿದ ಮೊದಲ ಭಾರತೀಯ ಸಂನ್ಯಾಸಿಗಳು. ವಿಶ್ವದ ಧಾರ್ಮಿಕ ಇತಿಹಾಸದಲ್ಲಿ ಮೊದಲ ಬಾರಿಗೆ ಸಮ್ಮೇಳನವೊಂದರಲ್ಲಿ ಹಿಂದೂಧರ್ಮವೇ ವಸ್ತುವಾಗಿತ್ತು, ಅವರ ಮೊದಲ ಭಾಷಣ ಹಿಂದೂಧರ್ಮದ ಮೂಲ ಸಂದೇಶದಂತಿದೆ. ಇದು ಪಾಶ್ಚಿಮಾತ್ಯರಿಗಷ್ಟೇ ಅಲ್ಲದೆ ಹಿಂದೂಗಳಿಗೂ ದೊರೆತಂತಾಯಿತು. ವಿಶ್ವಧರ್ಮ ಸಮ್ಮೇಳನವನ್ನು ಆಯೋಜಿಸಿದ ಒಳಉದ್ದೇಶ, ಕ್ರೈಸ್ತಧರ್ಮದ ಹಿರಿಮೆಯನ್ನು ಎತ್ತಿ ತೋರಿಸಿ, ಇತರ ಧರ್ಮಗಳು ಅಪೂರ್ಣ, ಹಿಂದೂಧರ್ಮ ಅನಾಗರಿಕ ಎಂದು ಬಿಂಬಿಸಿ, ಕ್ರೈಸ್ತ ಧರ್ಮವೇ ವಿಶ್ವಧರ್ಮ ಎಂದು ನಿರ್ಣಯಿಸುವುದಾಗಿತ್ತು. ಆದರೆ, ಸ್ವಾಮೀಜಿಯವರ ಮೊದಲ ಭಾಷಣದಿಂದ ಹಿಂದೂಧರ್ಮ ಉಳಿದವುಗಳಿಗಿಂತ ವಿಶಾಲವಾಗಿ ಉನ್ನತವಾಗಿದೆ ಎಂದು ಸಭಿಕರಿಗೆ 'ಅನಾಗರಿಕ'ರಿಂದ ಸ್ಪಷ್ಟವಾಗಿ ತಿಳಿಯಿತು. ಪೌರ್ವಾತ್ಯರು ಮತ್ತು ಪಾಶ್ಚಿಮಾತ್ಯರು ಹಸ್ತಲಾಘವ ಕೊಟ್ಟರು. ಹಿಂದೂಧರ್ಮ ವಿಶ್ವಧರ್ಮವಾಯಿತು. ಹಿಂದೂಧರ್ಮ ಎಷ್ಟು ವಿಶಾಲವಾಗಿ ಎಲ್ಲವನ್ನೂ ಎಲ್ಲರನ್ನೂ ಒಳಗೊಂಡಿದೆ ಎಂದರೆ ಯಾವ ಧರ್ಮದವರು ಬೇಕಾದರೂ, ತಮ್ಮ ಧರ್ಮವನ್ನು ತ್ಯಜಿಸುವ ಭಯವಿಲ್ಲದೆ, ಹಿಂದೂಧರ್ಮವನ್ನು ತಿಳಿದುಕೊಳ್ಳುವುದರ ಮೂಲಕ ಅವರ ಧರ್ಮದಲ್ಲಿ ಉತ್ತಮ ಧಾರ್ಮಿಕರಾಗಬಹುದೆಂದು ತಿಳಿಯಲು ಸಾಧ್ಯವಾಯಿತು.

ಸ್ವಾಮಿ ವಿವೇಕಾನಂದರು ಒಂದು ಸಂದಿಗ್ಧ ಕಾಲದಲ್ಲಿ ಅವತರಿಸಿದರು. ನಿವೇದಿತಾ ಅವರ ಮಾತಿನಂತೆ, ವಿಭಾಗವಾಗಿದ್ದ

ಆಧುನಿಕ ಕಾಲದಲ್ಲಿ ಹಿಂದೂಧರ್ಮಕ್ಕೆ ಒಂದು ಆಸರೆ, ತನ್ನನ್ನು ಗುರುತಿಸಿಕೊಳ್ಳುವಂತಹ ಅಧಿಕಾರವಾಣಿ ಬೇಕಾಗಿತ್ತು. ಪ್ರಪಂಚಕ್ಕೆ ತನ್ನ ಆಲೋಚನೆಗಳನ್ನು ಕ್ರಮಬದ್ಧಗೊಳಿಸಿ ಒಟ್ಟುಗೂಡಿಸುವ ಮತ್ತು ಸತ್ಯದ ಭಯವಿಲ್ಲದ ನಂಬಿಕೆಯ ಆವಶ್ಯಕತೆ ಇತ್ತು. ಇವನ್ನು ಸ್ವಾಮಿಜಿಯವರ ವಾಣಿ ಒದಗಿಸಿತು. ರಾಣಿ ರಾಸಮಣಿ ದಕ್ಷಿಣೇಶ್ವರದಲ್ಲಿ ನಿರ್ಮಿಸಿದ ಕಾಳೀದೇವಾಲಯ ಶ್ರೀರಾಮಕೃಷ್ಣರ ಲೀಲೆಗೆ ಕೇಂದ್ರವಾದಂತೆ, ಮಿ. ಬಾನಿ ಮತ್ತು ರೆವರೆಂಡ್ ಬ್ಯಾರೋಸ್ ಅವರು ಚಿಕಾಗೋದಲ್ಲಿ ಆಯೋಜಿಸಿದ ಸರ್ವಧರ್ಮ ಸಮ್ಮೇಳನ ಸ್ವಾಮಿ ವಿವೇಕಾನಂದರಿಗೆ ಹಿಂದೂಧರ್ಮದ ತೂರ್ಯವಾಣಿಯನ್ನು ಮೊಳಗಿಸಲು ಒಂದು ವಿಶ್ವವೇದಿಕೆಯಾಯಿತು. ಸ್ವಾಮೀಜಿಯವರು ಅಮೆರಿಕಾಕ್ಕೆ ಹೊರಡುವ ಮುನ್ನ, ತಮ್ಮ ಗುರುಭಾಯಿಗಳಾದ ಸ್ವಾಮಿ ತುರೀಯಾನಂದರಿಗೆ, ''ಸರ್ವಧರ್ಮ ಸಮ್ಮೇಳನ 'ಇದಕ್ಕಾಗಿ' ಆಯೋಜಿಸಲ್ಪಟ್ಟಿದೆ'' ಎಂದು ತಮ್ಮ ಕಡೆ ತೋರಿಸಿ, ''ನನ್ನ ಮನಸ್ಸು ಹಾಗೆ ಹೇಳುತ್ತಿದೆ. ಅದು ಸತ್ಯವಾಗುವುದನ್ನು ಇಷ್ಟರಲ್ಲೇ ನೋಡುವೆ'' ಎಂದು ಭವಿಷ್ಯವಾಣಿ ನುಡಿದುದು ಇದನ್ನು ಸಮರ್ಥಿಸುತ್ತದೆ. ಹೀಗೆ, ಶ್ರೀರಾಮಕೃಷ್ಣರ ಸರ್ವಧರ್ಮ ಸಮನ್ವಯ ಸಂದೇಶ ಸ್ವಾಮಿ ವಿವೇಕಾನಂದರ ಪ್ರಥಮ ಭಾಷಣದ ಮೂಲಕ ಚಿಕಾಗೋದಿಂದ ಐತಿಹಾಸಿಕವಾಗಿ ಬಿತ್ತರವಾಯಿತು.

## ನಮ್ಮ ಸ್ವಾತಂತ್ರ್ಯದ ಹಕ್ಕು

ಅಮೆರಿಕಾಗೆ ಸ್ವಾಮಿ ವಿವೇಕಾನಂದರು ನೀಡಿದ ಭೇಟಿ, ಅವರನ್ನು ಅನುಸರಿಸಿ ಮುಂದಿನವರು ಮಾಡಿದ ಕಾರ್ಯಗಳು ಭಾರತಕ್ಕೆ ನೂರಾರು ಲಂಡನ್ ಕಾಂಗ್ರೆಸ್‌ಗಳಿಗಿಂತ ಹೆಚ್ಚಿನ ಪ್ರಯೋಜನವನ್ನುಂಟುಮಾಡಿವೆ. ಇದು ನಿಜವಾಗಿಯೂ ಅನುಕಂಪೆಯನ್ನು ಜಾಗೃತಿಗೊಳಿಸುವ ವಿಧಾನ — ಇತರ ದೇಶಗಳ ಮುಂದೆ ನಮ್ಮ ದೇಶವನ್ನು ಭವ್ಯ ಇತಿಹಾಸವಿರುವ ದೇಶವೆಂಬಂತೆ ತೋರಿಸಿಕೊಡುವುದು; ನಮ್ಮ ಪೂರ್ವಿಕರ ಚಾರಿತ್ರ್ಯ ಹಾಗೂ ಬುದ್ಧಿಶಕ್ತಿಯನ್ನು ಇನ್ನೂ ಉಳಿಸಿಕೊಂಡಿರುವ ಪ್ರಾಚೀನ ಸಂಸ್ಕೃತಿ ನಮ್ಮದೆಂದು ತೋರಿಸಿಕೊಡುವುದು; ನಮ್ಮಲ್ಲಿ ಇನ್ನೂ ಪ್ರಪಂಚಕ್ಕೆ ಕೊಡಬೇಕಾಗಿರುವುದು ಉಳಿದಿದೆ; ಆದ್ದರಿಂದಲೇ ಸ್ವಾತಂತ್ರ್ಯ ನಮ್ಮ ಹಕ್ಕಾಗಿದೆ — ಎಂಬುದಾಗಿ. ಅದು ನಮ್ಮ ಪೌರುಷ ಹಾಗೂ ಸಾಮರ್ಥ್ಯದ ಕುರುಹು; ನಮ್ಮ ದಾರಿದ್ರ್ಯದ್ದಲ್ಲ.

— ಶ್ರೀ ಅರವಿಂದರು

*(World Thinkers on Ramakrishna- Vivekananda, P. 36)*

# ‘ನಮ್ಮಲ್ಲಿ ಏಕೆ ಒಮ್ಮತವಿಲ್ಲ?’ ಭಾಷಣದ ಮಹತ್ವ

ಸ್ವರ್ಣಗೌರಿ

ಒಂದು ಸುಂದರವಾದ ದೃಷ್ಟಾಂತದ ಮೂಲಕ ಧರ್ಮಾಂಧತೆ, ಪೂರ್ವಾಗ್ರಹ ಭಾವ ಇವು ಹೇಗೆ ಪ್ರಪಂಚದ ಜನ ಜೀವನವನ್ನು ಕಲುಷಿತಗೊಳಿಸುವುದು ಎಂಬುದನ್ನು ಚಿಕಾಗೋ ಉಪನ್ಯಾಸವೊಂದರಲ್ಲಿ ವಿವರಿಸುತ್ತಾರೆ ಸ್ವಾಮೀಜಿ. ಈ ಕುರಿತು ಬರೆದಿರುವ ಲೇಖಕಿ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು. ಅನೇಕ ಲೇಖನಗಳನ್ನು ಬರೆದಿರುವ ಅವರು ಕೆಲವು ಗ್ರಂಥಗಳನ್ನೂ ರಚಿಸಿದ್ದಾರೆ.



ಅಮೆರಿಕದ ಸುಪ್ರಸಿದ್ಧ ಚಿಕಾಗೋ ನಗರದಲ್ಲಿ ಕ್ರಿ.ಶ. ೧೮೯೩ರ ಸೆಪ್ಟೆಂಬರ್ ೧೧ನೇ ತಾರೀಖಿನಿಂದ ೨೭ನೇ ತಾರೀಖಿನವರೆಗೆ, ಹದಿನೇಳು ದಿನಗಳ ಕಾಲ ನಡೆದ ‘ಸರ್ವಧರ್ಮ ಸಮ್ಮೇಳನ’ ಇತಿಹಾಸವಾಯಿತು. ಯಾವ ಸರ್ವಧರ್ಮ ಸಮ್ಮೇಳನ ಸ್ವಾಮಿ ವಿವೇಕಾನಂದರನ್ನು ವಿಶ್ವವಿಖ್ಯಾತರನ್ನಾಗಿ ಮಾಡಿತೊ, ಯಾವ ಸರ್ವಧರ್ಮ ಸಮ್ಮೇಳನದಿಂದ ಹಿಂದೂಧರ್ಮಕ್ಕೆ ವಿಶ್ವ ಮಾನ್ಯತೆ ದೊರಕಿತೊ ಅಂತಹ ಸರ್ವಧರ್ಮ ಸಮ್ಮೇಳನ ಸಮಾವೇಶಗೊಂಡಿದ್ದು ಏಕೆ ಎಂಬುದರ ಸಂಕ್ಷಿಪ್ತ ಪರಿಚಯ ಪಡೆಯುವುದು ಅಗತ್ಯ. ಲೌಕಿಕ ಜಗತ್ತಿನಲ್ಲಿ ಮಾನವ ಸಾಧಿಸಿರುವ ಅದ್ಭುತ ಪ್ರಗತಿಯನ್ನು ಒಂದು ಕಡೆ ಪ್ರದರ್ಶಿಸುವ ಉದ್ದೇಶದಿಂದ ೧೮೯೩ನೆಯ ಇಸವಿಯಲ್ಲಿ ‘‘ವರ್ಲ್ಡ್ ಕೊಲಂಬಿಯನ್ ಎಕ್ಸ್‌ಪೊಸಿಷನ್’’ ಎಂಬುದನ್ನು ನಡೆಸಬೇಕು ಎಂದು ಚಿಕಾಗೋದ ಕೆಲವು ಪ್ರಮುಖ ನಾಗರಿಕರು ೧೮೮೯ರಲ್ಲಿ ತೀರ್ಮಾನಿಸಿದರು. ಲೌಕಿಕ ಪ್ರಗತಿಯ ಜೊತೆಗೆ ಚಿಂತನೆಯ ವಲಯದಲ್ಲಿಯೂ ಮಾನವ ನಡೆಸಿದ ಮಹತ್ವದ ಪ್ರಯೋಗಗಳು ನಿರೂಪಿಸಿರುವ ವೇದಿಕೆಯ ಅಗತ್ಯವನ್ನು ವ್ಯವಸ್ಥಾಪಕರು ಕಂಡುಕೊಂಡರು. ಆ ಸಮ್ಮೇಳನಕ್ಕೆ ನಡೆದ ಮೂರು ವರ್ಷಗಳ ಸಿದ್ಧತೆಯ ವಿವರಗಳ ದಾಖಲೆಯನ್ನು ಪರಿಶೀಲಿಸಿದರೆ ಕ್ರೈಸ್ತಧರ್ಮದ ಮಹಿಮೆಯನ್ನು ಜಗತ್ತಿಗೆ ಸಾರುವುದೇ ಸಮ್ಮೇಳನದ ಮುಖ್ಯ ಉದ್ದೇಶವಾಗಿತ್ತು ಎಂದು ಸ್ವಾಮಿ ವಿವೇಕಾನಂದರೇ ಹೇಳಿದ್ದಾರೆ. ಎಲ್ಲ ಧರ್ಮಗಳೂ ಪರಸ್ಪರ ಪೂರಕ, ಎಲ್ಲ ಧರ್ಮಗಳೂ ಒಂದೇ ಗುರಿಯ ಕಡೆಗೆ ಕರೆದೊಯ್ಯುತ್ತವೆ ಎಂಬುದನ್ನು ಸ್ಥಾಪಿಸುವುದು ಸಮ್ಮೇಳನದ ಉದ್ದೇಶವಾಗಿರಬೇಕಿತ್ತು. ಆದರೆ ವಾಸ್ತವವಾಗಿ ಆದದ್ದೇ ಬೇರೆ. ಇಂಥದೊಂದು ಬೃಹತ್ ಪ್ರಮಾಣದ ಯೋಜನೆಯನ್ನು ರೂಪಿಸಿ ಅದನ್ನು ಅತ್ಯಂತ ಯಶಸ್ವಿಯಾಗಿ ಕಾರ್ಯಗೊತಗೊಳಿಸಿದ ಮುಖ್ಯ ವ್ಯವಸ್ಥಾಪಕರಾದ ಚಾರ್ಲ್ಸ್ ಕ್ಯಾರಲ್ ಬಾನಿ ಎಂಬುವರು ಧರ್ಮ ಪ್ರಚಾರಕರಲ್ಲ, ವಕೀಲರು ಎಂದರೆ ಆಶ್ಚರ್ಯವಾಗುವುದು. ಇವರು ಅತ್ಯಂತ ಉದಾರದೃಷ್ಟಿಯುಳ್ಳವರೂ, ಅನೇಕಾನೇಕ ಚರ್ಚುಗಳ ಗಣ್ಯರ ಸಭೆಗೆ ಅಧ್ಯಕ್ಷರು, ಮಹಾವಿದ್ವಾಂಸರೂ ಆಗಿದ್ದರು. ‘‘ಹಿರಿಯ ಧರ್ಮಗಳನ್ನು ಸಮೀಪಕ್ಕೆ ತಂದು ಅವುಗಳ ನಾಯಕರಲ್ಲಿ ಸ್ನೇಹಸಂಪರ್ಕವನ್ನು ಹೆಚ್ಚಿಸಿದರೆ, ಮಾನವಕೋಟಿಯ ಐಕ್ಯತೆಯೂ, ಸಹಮಾನವರ ಸೇವೆಯೂ ಸಾಧ್ಯವಾಗುತ್ತದೆ ಎಂಬ ಉದ್ದೇಶವನ್ನು ಈ ಸಮ್ಮೇಳನದಿಂದ ಸಾಧಿಸಬಹುದು ಎಂದು ಆಶಿಸಿದೆ’’ ಎನ್ನುತ್ತಾರೆ ಬಾನಿಯವರು.

ಸಮ್ಮೇಳನದ ಉದ್ದೇಶ ಏನೇ ಆಗಿದ್ದಿರಬಹುದು, ಆದರೆ ಅದರ ಪರಿಣಾಮ ಮಾತ್ರ ಯಾರೂ ನಿರೀಕ್ಷಿಸದಿದ್ದ ರೀತಿಯದಾಯಿತು. ಸಮ್ಮೇಳನದ ವಿಜ್ಞಾನ ವಿಭಾಗದ ಅಧ್ಯಕ್ಷರಾದ ಮರ್ವಿನ್ ಮೇರಿ ಸ್ನೈಲ್‌ರವರ ಮಾತಿನಲ್ಲೇ ಕೇಳೋಣ: ‘‘ಕ್ರೈಸ್ತ ಜಗತ್ತಿಗೆ, ಮುಖ್ಯವಾಗಿ ಅಮೆರಿಕನ್ನರಿಗೆ ಇದು ಕಲಿಸಿದ ಮಹತ್ವದ ಪಾಠವೆಂದರೆ ಕ್ರೈಸ್ತಧರ್ಮಕ್ಕಿಂತ ಹೆಚ್ಚು ಪೂಜ್ಯವಾದ ಅನೇಕ ಧರ್ಮಗಳು ಜಗತ್ತಿನಲ್ಲಿವೆ ಎಂಬುದು. ತಾತ್ತ್ವಿಕ ಚಿಂತನೆಯಲ್ಲಿ,

ಆಧ್ಯಾತ್ಮಿಕ ಅನುಭವದ ಸಾಂದ್ರತೆಯಲ್ಲಿ, ಸ್ವತಂತ್ರವಾದ ಆಲೋಚನಾಶಕ್ತಿಯಲ್ಲಿ, ಮಾನವ ಅನುಕಂಪೆಯ ವಿಷಯದಲ್ಲಿ, ವೈಶಾಲ್ಯ ಮತ್ತು ಪ್ರಾಮಾಣಿಕತೆಗಳಲ್ಲಿ, ನೈತಿಕ ಸೌಂದರ್ಯ ಮತ್ತು ದಕ್ಷತೆಗಳಲ್ಲಿ ಕೂದಲೆಳೆಯಷ್ಟೂ ಯಾರಿಗೂ ಬಿಟ್ಟುಕೊಡದ ಆ ಧರ್ಮಗಳು ಕ್ರೈಸ್ತಧರ್ಮವನ್ನು ಹಿಂದೆ ಬಿಟ್ಟು ಎಷ್ಟೋ ಪಾಲು ಮುಂದುವರಿದಿವೆ. ಎಂಟು ಕ್ರೈಸ್ತೇತರ ಮಹಾಧರ್ಮಗಳು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದವು. ಅವು ಹಿಂದೂ, ಜೈನ, ಬೌದ್ಧ, ಯಹೂದ್ಯ, ಕನ್‌ಫ್ಯೂಷಿಯಸ್, ಷಿಂಟೊ, ಇಸ್ಲಾಮ್, ಝುರತುಷ್ಟ ಧರ್ಮಗಳು.''

**ಹಾಲ್ ಆಫ್ ಕೊಲಂಬಸ್ :** ೧೮೯೩ರ ಸೆಪ್ಟೆಂಬರ್ ೧೧ನೇ ತಾರೀಖು 'ಹಾಲ್ ಆಫ್ ಕೊಲಂಬಸ್' ಎಂಬ ದೊಡ್ಡ ಸಭಾಂಗಣ, ಸಭೆ ಪ್ರಾರಂಭವಾಗಿತ್ತು. ಪ್ರತಿನಿಧಿಗಳೆಲ್ಲರನ್ನೂ ಮೆರವಣಿಗೆಯಲ್ಲಿ ತಂದು ನಿಗದಿತ ಆಸನಗಳಲ್ಲಿ ಕೂರಿಸಲಾಗಿತ್ತು. ಕಿತ್ತಳೆ ಬಣ್ಣದ ನಿಲುವಂಗಿಯಲ್ಲಿ ಇದ್ದ ಸ್ವಾಮಿ ವಿವೇಕಾನಂದರು ಎಲ್ಲರ ಮಧ್ಯೆ ಎದ್ದುಕಾಣುತ್ತಿದ್ದರು.

ಸಮ್ಮೇಳನದಲ್ಲಿ ಒಬ್ಬೊಬ್ಬರನ್ನೇ ಕರೆದು, ಅವರನ್ನು ಪರಿಚಯಿಸಿ, ಭಾಷಣ ಮಾಡುವಂತೆ ಕೇಳಿಕೊಳ್ಳಲಾಗುತ್ತಿತ್ತು. ಎಲ್ಲರೂ ಭಾಷಣಗಳನ್ನು ಸಿದ್ಧಪಡಿಸಿಕೊಂಡು ಬಂದಿದ್ದರು. ಸ್ವಾಮೀಜಿಯ ಸರದಿ ಬಂದಾಗಲೆಲ್ಲ 'ನಂತರ' ಎನ್ನುತ್ತಾ ಮುಂದೂಡುತ್ತಾ ಬಂದರು. ಸಾರ್ವಜನಿಕ ಸಭೆಗಳನ್ನು ಉದ್ದೇಶಿಸಿ ಜೀವನದಲ್ಲಿ ಒಮ್ಮೆಯೂ ಮಾತನಾಡದ ಸ್ವಾಮೀಜಿ ಭಾಷಣವನ್ನು ಸಿದ್ಧಪಡಿಸಿಕೊಂಡು ಬಂದಿರಲಿಲ್ಲ. ಹೀಗೆ ತಮ್ಮ ಸರದಿಯನ್ನು ಮುಂದೂಡುತ್ತಾ ಕುಳಿತಿದ್ದ ಅವರನ್ನು ನೋಡಿ ಅಧ್ಯಕ್ಷರಿಗೆ ಇವರು ಮಾತನಾಡುವರೋ ಇಲ್ಲವೋ ಎಂಬ ಅನುಮಾನ ಮೂಡಿತು. ಇನ್ನು ಮುಂದೂಡಲಾಗದ ಘಳಿಗೆ ಬಂದಾಗ ಸ್ವಾಮೀಜಿ ವಿದ್ಯಾಧಿದೇವತೆ ಸರಸ್ವತಿಯನ್ನು ಸ್ಮರಿಸುತ್ತಾ, 'ಮೂಕಂ ಕರೋತಿ ವಾಚಾಲಂ' ಎಂಬ ಗೀತೆಯ ಧ್ಯಾನಶ್ಲೋಕವನ್ನು ಪಠಿಸುತ್ತಾ, 'ಅಮೆರಿಕದ ಸಹೋದರಿ ಸಹೋದರರೆ!' ಎಂದು ಕಂಚಿನ ಕಂಠದಿಂದ ಪ್ರಾರಂಭಿಸಿದರು. ಈ ಮಾತು ಮುಗಿಯುತ್ತಿದ್ದಂತೆ ಚಪ್ಪಾಳೆಯ ಸುರಿಮಳೆ. ಅಲ್ಲಿ ನೆರೆದಿದ್ದ ಬೃಹತ್ ಜನಸ್ತೋಮಕ್ಕೆ ವಿದ್ಯುತ್ ಸಂಚಾರವಾದಂತಾಗಿ ಎಲ್ಲರೂ ಎರಡು ನಿಮಿಷಗಳ ಕಾಲ ಕಿವಿಗಡಚಿಕ್ಕುವಂತೆ ಪ್ರಚಂಡ ಕರತಾಡನ ಮಾಡಿದರು.

ವಿವೇಕಾನಂದರು ಮಾತನಾಡಿದುದು ಕೇವಲ ಕೆಲವೇ ನಿಮಿಷಗಳು. ಆದರೆ ಅದು ವಿಶ್ವಾತ್ಮಭಾವನೆಯ ಮೆರಗನ್ನು ಪಡೆದಿತ್ತು. ಸಮ್ಮೇಳನದ ನೈಜ ಉದ್ದೇಶಕ್ಕೆ ಪೂರಕವಾಗಿತ್ತು. ಎಲ್ಲ ಧರ್ಮಗಳೂ ಕುಟಿಲ ಪಥದ್ದಾಗಿರಲಿ ಅಥವಾ ಋಜುಮಾರ್ಗದ್ದಾಗಿರಲಿ, ಅಂತಿಮವಾಗಿ ಏಕಮೇವ ಪರಮಾತ್ಮನೆಡೆಗೆ ಒಯ್ಯುವುದೆಂಬ ಆಧ್ಯಾತ್ಮಿಕ ಸತ್ಯವನ್ನು ಒತ್ತಿಹೇಳುವುದಾಗಿತ್ತು. ಒಂದೇ ಕ್ಷಣದಲ್ಲಿ ಭಿಕ್ಷಾಪಾತ್ರೆ ಹಿಡಿಯುವ ಸಂನ್ಯಾಸಿಯು ವಿಶ್ವಕೇಂದ್ರ ವ್ಯಕ್ತಿಯಾಗಿ, ಅಸಂಖ್ಯಾತ ಜನರ ಹೃದಯದ ಅನಭಿಷಕ್ತ ರಾಜನಾದರು.

ಮಹಾಸಮ್ಮೇಳನದ ಮಂಗಳಾರಂಭ ಮಹೋತ್ಸವದಲ್ಲಿ ಮಾತನಾಡಿದ ನಂತರ ಇನ್ನೂ ಐದು ದಿನಗಳು, ಕ್ರಮವಾಗಿ ೧೮, ೧೯, ೨೦, ೨೬ ಹಾಗೂ ೨೭ನೇ ತಾರೀಖುಗಳು ಸ್ವಾಮೀಜಿ ತಮ್ಮ ವಿಶ್ವವಿಶಾಲವಾದ ಧಾರ್ಮಿಕ ದೃಷ್ಟಿಯನ್ನು ಪ್ರತಿಬಿಂಬಿಸುವ ಉಪನ್ಯಾಸಗಳನ್ನು ಕಂಚಿನ ಕಂಠದಿಂದ, ಮಿಂಚಿನ ಶಬ್ದಗಳಿಂದ ನೀಡಿ ಸರ್ವಧರ್ಮ ಸಮ್ಮೇಳನದ ಕೇಂದ್ರ ಆಕರ್ಷಣೆಯಾದರು. ಸ್ವಾಮೀಜಿಯವರ ಹೆಸರು ಎಲ್ಲೆಲ್ಲೂ ಹರಿದಾಡಿತು. ಚಿಕಾಗೋ ನಗರದ ಬೀದಿಬೀದಿಗಳಲ್ಲಿ ಅವರ ಆಳೆತ್ತರದ ಚಿತ್ರಗಳು ರಾರಾಜಿಸಿದವು. ಅಮೆರಿಕೆಯ 'ನ್ಯೂಯಾರ್ಕ ಹೆರಾಲ್ಡ್'ನಂತಹ ಹೆಸರಾಂತ ಪತ್ರಿಕೆಗಳಿಗೆ ಸ್ವಾಮೀಜಿಯವರನ್ನು ಎಷ್ಟು ಕೊಂಡಾಡಿದರೂ ತೃಪ್ತಿಯಿರಲಿಲ್ಲ. ಸಮ್ಮೇಳನದ ವಿಶಾಲ ಕಟ್ಟಡದಲ್ಲಿ ಸ್ವಾಮೀಜಿಯವರು ಒಂದೆಡೆಯಿಂದ ಇನ್ನೊಂದೆಡೆ ಹೊರಟರೆ ಸಾಕು, ಜನರ ಗುಂಪು ಅವರನ್ನೇ ಹಿಂಬಾಲಿಸುತ್ತಿತ್ತು. ಜನರು ಅವರನ್ನೊಮ್ಮೆ ಹತ್ತಿರದಿಂದ ನೋಡಬೇಕು, ಅವರ ಕೈ ಕುಲಕಬೇಕು ಎಂಬ ತವಕದಲ್ಲಿರುತ್ತಿದ್ದರು. ಮಹಿಳೆಯರಂತೂ ಅವರ ಹತ್ತಿರಕ್ಕೆ ಹೋಗಲು ಮುಗಿಬೀಳುತ್ತಿದ್ದರು. ಒಮ್ಮೊಮ್ಮೆ ನೀರಸ ಭಾಷಣಗಳನ್ನು ಕೇಳುತ್ತಾ ತಾಳ್ಮೆಗೆಡುತ್ತಿದ್ದ ಸಭಿಕರು ಎದ್ದುಹೋಗಲು ಪ್ರಾರಂಭಿಸುತ್ತಿದ್ದಂತೆ, ಅಧ್ಯಕ್ಷರು ಕೊನೆಯಲ್ಲಿ ಸ್ವಾಮೀಜಿಯವರು ಮಾತನಾಡುತ್ತಾರೆ ಎಂದು ಘೋಷಿಸುತ್ತಿದ್ದರು. ಸ್ವಾಮೀಜಿ ಕೇವಲ ಹತ್ತು ಹದಿನೈದು ನಿಮಿಷ ಮಾತನಾಡಿದರೂ ಸಾಕು, ಕೇಳೋಣ ಎಂದು ಗಂಟೆಗಟ್ಟಲೆ ನೀರಸ ಉಪನ್ಯಾಸಗಳನ್ನು ಕೇಳುತ್ತಾ ಕಾಯುತ್ತಿದ್ದರು ಸಭಿಕರು.

**ನಮ್ಮಲ್ಲಿ ಒಮ್ಮತವಿಲ್ಲ:** ಸೆಪ್ಟೆಂಬರ್ ೧೧ನೇ ತಾರೀಖಿನ ಪ್ರವಚನದ ನಂತರ ಮತ್ತೆ ಸ್ವಾಮೀಜಿ ೧೮ನೆ ತೇದಿಯಂದು ಸನಾತನ ಉಪನಿಷದ್ ಪರಂಪರೆಯಲ್ಲಿನಂತೆ ಪುಟ್ಟ ಕಥೆಯೊಂದನ್ನು ಹೇಳುತ್ತ ವಿಷಯ ಪ್ರವೇಶಿಸಿದರು. ಅದು ಬಾವಿಯಲ್ಲಿನ ಕಪ್ಪೆ ಸಮುದ್ರದ ಕಪ್ಪೆಗೆ, 'ನಿನ್ನ ಸಮುದ್ರ ನನ್ನ ಬಾವಿಯಷ್ಟು ದೊಡ್ಡದಿದೆಯೆ?' ಎಂದು ಸಂಕುಚಿತತೆಯಿಂದ, ಅಹಂಕಾರದಿಂದ ಕೇಳುವ ಕಥೆ. ಈ ಸಮ್ಮೇಳನದ ಮುಖಾಂತರ ತಮ್ಮ ಧರ್ಮವೇ ಶ್ರೇಷ್ಠವೆಂದು ಭಾವಿಸುವವರಿಗಾಗಿ ಈ ಪುಟ್ಟ ಪ್ರಪಂಚದ ಗೋಡೆಗಳನ್ನು ಒಡೆದೊಗೆಯಲು ಪ್ರಯತ್ನಿಸುತ್ತಿರುವುದಕ್ಕೆ ಕೃತಜ್ಞತೆಗಳನ್ನು ಸಲ್ಲಿಸಿದರು. ಈ ಸಂಕುಚಿತತೆಯನ್ನು ಮೀರಿ ನಿಂತಿರುವುದೇ ಈಗ ತಪ್ಪಾಗಿ ಕರೆಯಲ್ಪಡುತ್ತಿರುವ 'ಹಿಂದೂಧರ್ಮ'ವಾಗಿದೆ ಎಂಬುದನ್ನು ಜಗತ್ತಿಗೆ ತೋರಿಸಿಕೊಟ್ಟರು:

''ನಾನೊಂದು ಪುಟ್ಟ ಕಥೆಯನ್ನು ನಿಮಗೆ ಹೇಳುತ್ತೇನೆ. ಈಗ ತಾನೆ ತಮ್ಮ ಭಾಷಣವನ್ನು ಮುಗಿಸಿದ ವಾಗ್ಮಿಯೊಬ್ಬರು 'ಪರಸ್ಪರ ದೂರುವುದನ್ನು ನಿಲ್ಲಿಸೋಣ' ಎಂದು ಹೇಳಿದ್ದನ್ನು ನೀವು ಕೇಳಿದ್ದೀರಿ. ಇಷ್ಟೊಂದು ಭಿನ್ನಾಭಿಪ್ರಾಯಗಳಿರುವುದು ಈ ಉಪನ್ಯಾಸಕರಿಗೆ ವ್ಯಥೆಯನ್ನು ತಂದಿದೆ.

''ಈ ಭಿನ್ನಾಭಿಪ್ರಾಯಗಳಿಗೆ ಕಾರಣವೇನು ಎಂಬುದನ್ನು ಸುಂದರವಾಗಿ ನಿರೂಪಿಸುವ ಒಂದು ಕಥೆಯನ್ನು ನಿಮಗೆ ಹೇಳು

ತ್ತೇನೆ: ಒಂದು ಬಾವಿ, ಅದರಲ್ಲೊಂದು ಕಪ್ಪೆ. ಅದು ಬಹು ಕಾಲದಿಂದ ಅಲ್ಲಿ ವಾಸಿಸುತ್ತಿತ್ತು. ಆದರೂ ಅದು ಸಣ್ಣ ಕಪ್ಪೆಯಾಗೇ ಇತ್ತು. ಆ ಕಪ್ಪೆಗೆ ಕಣ್ಣು ಕಾಣುತ್ತಿತ್ತೋ ಇಲ್ಲವೋ ಎಂದು ಹೇಳುವುದಕ್ಕೆ ಇಂದಿನ ವಿಕಾಸವಾದಿಗಳು ಅಲ್ಲಿ ಇರಲಿಲ್ಲ. ನಮ್ಮ ಕಥೆಯ ಮಟ್ಟಿಗೆ ಅದಕ್ಕೆ ಕಣ್ಣು ಕಾಣಿಸುತ್ತಿತ್ತು ಎಂದು ಇಟ್ಟುಕೊಳ್ಳೋಣ. ಪ್ರತಿದಿನವೂ ಅದು ಬಾವಿಯ ನೀರಿನಲ್ಲಿರುವ ಕ್ರಿಮಿಕೀಟಗಳನ್ನು ಎಷ್ಟು ಶಕ್ತಿಉತ್ಸಾಹಗಳಿಂದ ನಾಶಗೊಳಿಸಿ ನೀರನ್ನು ಶುದ್ಧಗೊಳಿಸುತ್ತಿತ್ತು ಎಂದರೆ ಅಷ್ಟು ಶಕ್ತಿ ಉತ್ಸಾಹಗಳು ನಮ್ಮ ಆಧುನಿಕ ಬ್ಯಾಕ್ಟೀರಿಯ ತಜ್ಞರಿಗೆ ಇದ್ದಿದ್ದರೆ ಅವರು ಹೆಮ್ಮೆ ಪಡಬಹುದಾಗಿತ್ತು.

ಹೀಗೆಯೇ ಅದು ಬೆಳೆಯುತ್ತಾ ಸ್ವಲ್ಪ ದಪ್ಪವಾಯಿತು. ಹೀಗಿರುವಾಗ ಒಂದು ದಿನ ಸಮುದ್ರದಲ್ಲಿದ್ದ ಮತ್ತೊಂದು ಕಪ್ಪೆ ಬಾವಿಗೆ ಬಂದು ಬಿತ್ತು.

ಬಾವಿ ಕಪ್ಪೆ: ನೀನು ಎಲ್ಲಿಂದ ಬಂದೆ ?

ಸಮುದ್ರ ಕಪ್ಪೆ: ನಾನು ಸಮುದ್ರದಿಂದ ಬಂದೆ.

ಬಾವಿ ಕಪ್ಪೆ: ಸಮುದ್ರ ! ಅದು ಎಷ್ಟ ದೊಡ್ಡದು? ಅದು ನನ್ನ ಬಾವಿಯಷ್ಟು ದೊಡ್ಡದೆ? ಎಂದು ಕೇಳಿ ಬಾವಿಯ ಒಂದು ಕಡೆಯಿಂದ ಮತ್ತೊಂದು ಕಡೆಗೆ ನೆಗೆಯಿತು.

ಸಮುದ್ರ ಕಪ್ಪೆ: ಅಯ್ಯಾ ಮಿತ್ರ, ಸಮುದ್ರವನ್ನು ಬಾವಿಯೊಂದಿಗೆ ಹೀಗೆ ಹೋಲಿಸುವೆಯಲ್ಲ!

ಬಾವಿ ಕಪ್ಪೆ: ನನ್ನ ಬಾವಿಗಿಂತ ದೊಡ್ಡದು ಯಾವುದೂ ಇರುವುದು ಸಾಧ್ಯವಿಲ್ಲ. ಇದಕ್ಕಿಂತ ದೊಡ್ಡದು ಯಾವುದೂ ಇರಲಾರದು. ಇವನೊಬ್ಬ ಸುಳ್ಳುಗಾರ, ಇವನನ್ನು ಹೊರಗೆ ನೂಕಿ.

ಯಾವಾಗಲೂ ನಮ್ಮ ಮುಂದಿರುವ ಕಷ್ಟ ಇದೇ. ನಾನೊಬ್ಬ ಹಿಂದು. ನಾನು ನನ್ನ ಸಣ್ಣ ಬಾವಿಯಲ್ಲಿ ಕುಳಿತುಕೊಂಡು ಜಗತ್ತೆಲ್ಲ ಈ ನನ್ನ ಬಾವಿ ಎಂದು ಯೋಚಿಸುತ್ತಿರುವೆ. ಕ್ರೈಸ್ತರು ತಮ್ಮ ಪುಟ್ಟ ಬಾವಿಯಲ್ಲಿ ಕುಳಿತುಕೊಂಡು ಪ್ರಪಂಚವೆಲ್ಲ ಇಷ್ಟೆ ಎಂದು ತಿಳಿಯುವರು. ಮಹಮ್ಮದೀಯರು ತಮ್ಮ ಪುಟ್ಟಬಾವಿಯಲ್ಲಿ ಕುಳಿತು ಪ್ರಪಂಚವೆಲ್ಲ ಇಷ್ಟೆ ಎಂದು ತಿಳಿಯುವರು. ನಮ್ಮ ನಮ್ಮ ಪುಟ್ಟ ಪ್ರಪಂಚಗಳ ಗೋಡೆಗಳನ್ನು ಒಡೆದು ಹಾಕಲು ಮಹತ್ತಾದ ಪ್ರಯತ್ನಗಳನ್ನು ನಡೆಸುತ್ತಿರುವ ಅಮೆರಿಕನ್ನರೆ, ನಿಮಗೆ ನನ್ನ ಕೃತಜ್ಞತೆಗಳು. ಈ ನಿಮ್ಮ ಗುರಿಯನ್ನು ಸಾಧಿಸಲು ಭಗವಂತ ಸಹಾಯ ಮಾಡುವನೆಂದು ಆಶಿಸುತ್ತೇನೆ.''

ಮಾನವನ ಮನಸ್ಸನ್ನು ಪ್ರಚೋದಿಸುವ ಅತಿಶ್ರೇಷ್ಠ ಚಾಲಕ ಶಕ್ತಿ ಧರ್ಮ. ಆದರೆ ಅದ್ಭುತಶಕ್ತಿಯುಳ್ಳ ಧರ್ಮಗಳು ಪ್ರಪಂಚಕ್ಕೆ ಒಳ್ಳೆಯದನ್ನು ಮಾಡುವುದಕ್ಕಿಂತ ಹೆಚ್ಚಾಗಿ ಕೆಟ್ಟದ್ದನ್ನು ಮಾಡಿವೆ. ಇದಕ್ಕೆ ಕಾರಣ ಆ ಧರ್ಮಗಳ ಸಂಕುಚಿತ ಭಾವನೆ. ಸಮಾನವಾದ ಭಾವನೆಗಳುಳ್ಳ ಸಮಾಜದ ಹಲವು ಪಂಥಗಳು ತಮ್ಮೊಳಗೇ ಕಾದಾಡುತ್ತಿವೆ. ಸಾಮಾನ್ಯವಾಗಿ ಜನರು ತಮ್ಮ ಸುತ್ತಲೂ ಒಂದು ಅಭೇದ್ಯವಾದ ಗೋಡೆ ಹಾಕಿಕೊಂಡು, ಅದರಾಚೆ ಇರುವವರನ್ನು ಶತ್ರುಗಳಂತೆ ಕಾಣುವರು. ಧಾರ್ಮಿಕ ಪ್ರಪಂಚದಲ್ಲೂ ಹೀಗೆ ಶೈವರು, ವೈಷ್ಣವರು, ಶಾಕ್ತರು, ಕ್ರೈಸ್ತರು, ಜೈನರು, ಮಹಮ್ಮದೀಯರು ಎಲ್ಲ ಧರ್ಮದವರು ತಾವೇ ನಿರ್ಮಿಸಿಕೊಂಡು ಒಂದು ಧಾರ್ಮಿಕ ಚೌಕಟ್ಟಿನಲ್ಲಿರುವರು. ಆ ಚೌಕಟ್ಟಿನಿಂದ ಹೊರಗೆ ಇರುವವರೆಲ್ಲಾ ಶತ್ರುಗಳೇ. ಈ ಸಂಕುಚಿತ ಮನೋಭಾವನೆಯೇ ದ್ವೇಷ, ಅಸೂಯೆ, ಕಲಹ, ರಕ್ತಪಾತ, ಕಾದಾಟಗಳಿಗೆ ನಾಂದಿಯಾಗಿದೆ. ಮತೀಯತೆ, ಮತಾಂಧತೆಗಳು ಮಾನವನ ಪ್ರಗತಿಗೆ ದೊಡ್ಡ ಹಾನಿ, ವ್ಯಕ್ತಿಗತವಾಗಿ ಬೆಳವಣಿಗೆಯೂ ಕುಂಠಿತವಾಗುತ್ತದೆ. ಬೆಳವಣಿಗೆ, ವಿಕಾಸ ಪದಗಳೆಲ್ಲಾ ಅರ್ಥಹೀನವಾಗುತ್ತಿವೆ. 'ಮೂಢನಂಬಿಕೆ ಮಾನವನ ದೊಡ್ಡ ಶತ್ರು. ಆದರೆ ಸ್ವಮತಭ್ರಾಂತಿ ಅದಕ್ಕಿಂತಲೂ ಹೆಚ್ಚು' ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. ಭಕ್ತಿಯೋಗದ ತಮ್ಮ ಉಪನ್ಯಾಸದಲ್ಲಿ ಸ್ವಾಮೀಜಿಯವರು ಇದನ್ನು 'ನಾಯಿ ಪ್ರವೃತ್ತಿ' ಎಂದು ಕರೆಯುತ್ತಾರೆ. ನಾಯಿ ತನ್ನದೇ ಆದ ಒಂದು ವೃತ್ತವನ್ನು ಸೃಷ್ಟಿಸಿಕೊಳ್ಳುತ್ತದೆ. ಇತರೆ ನಾಯಿಗಳನ್ನು ಅದರೊಳಗೆ ಬರಲು ಬಿಡದೆ ಓಡಿಸಿಬಿಡುತ್ತದೆ. ಆದರೆ ನಿಜಕ್ಕೂ ನಾಯಿ ಮನುಜರಿಗಿಂತ ಎಷ್ಟೋ ಉತ್ತಮ. ತನ್ನ ಯಜಮಾನನು ಯಾವುದೇ ವೇಷದಲ್ಲಿದ್ದರೂ ಕಂಡುಹಿಡಿದು, ಅದೇ ಗೌರವ, ಪ್ರೀತಿ, ವಿಧೇಯತೆಗಳನ್ನು ತೋರುತ್ತದೆ. ಆದರೆ ಮನುಜನು? ಹೇಳಿ ಸುಖವಿಲ್ಲ! ಶ್ರೀರಾಮಕೃಷ್ಣರು ಹಸುಗಳ ದೃಷ್ಟಾಂತವನ್ನು ನೀಡುತ್ತಿದ್ದರು. ಹಸುಗಳು ತಮ್ಮದೇ ಆದ ಒಂದು ಗುಂಪನ್ನು ಮಾಡಿಕೊಂಡು, ಬೇರೆ ಹಸುಗಳು ಬಂದರೆ ತಮ್ಮ ಗುಂಪಿಗೆ ಸೇರಿಸದೆ ತಿವಿದು ಓಡಿಸಿಬಿಡುತ್ತವೆ.

'ಒಬ್ಬರನ್ನು ಪ್ರೀತಿಸುವುದು ಎಂದರೆ ಇನ್ನೊಬ್ಬರನ್ನು ದ್ವೇಷಿಸುವುದು' ಎಂದಾಗಿದೆ ಎನ್ನುತ್ತಾರೆ ಭಕ್ತಿಯೋಗದ ಉಪನ್ಯಾಸದಲ್ಲಿ ಸ್ವಾಮೀಜಿ. ನಿಜವಾದ ಭಕ್ತಿ ಲಭಿಸಿದರೆ ಅವನು ಎಲ್ಲರನ್ನೂ ಪ್ರೀತಿಸುವನು; ಯಾರನ್ನೂ ದ್ವೇಷಿಸುವುದಿಲ್ಲ. ಅವನು ಎಂದೆಂದಿಗೂ ತೃಪ್ತನಾಗಿರುವನು. ಭಕ್ತಿ ಎಂದರೆ ಪರಮಪ್ರೇಮ. ಪ್ರೀತಿಯಲ್ಲಿ ಪ್ರಾರಂಭವಾಗಿ, ಪ್ರೀತಿಯಲ್ಲಿ ಸಾಗಿ, ಪ್ರೀತಿಯಲ್ಲಿ ಪರ್ಯವಸಾನವಾಗುವುದು. ಸಾಧನೆಯ ಪ್ರಾರಂಭದಲ್ಲಿ ಇಷ್ಟದೇವರ ಮೇಲೆ ಏಕನಿಷ್ಠೆ ಅತಿಮುಖ್ಯ. ಇಷ್ಟದೇವತೆಯ ಮೇಲೆ ಏಕಾಗ್ರನಿಷ್ಠೆ. ಇಲ್ಲದೇ ಇದ್ದರೆ ಭಕ್ತಿ ಸ್ವಾಭಾವಿಕವಾಗಿ ವೃದ್ಧಿಯಾಗಲಾರದು. ಇಷ್ಟನಿಷ್ಠೆಗೂ, ಮತಾಂಧತೆಗೂ ಅಜಗಜಾಂತರ ವ್ಯತ್ಯಾಸವಿದೆ.

ಆದರೆ ಭಕ್ತಿಯೋಗದ ದೊಡ್ಡ ನ್ಯೂನತೆಯೇ ಪ್ರಾರಂಭದ ದೆಸೆಯಲ್ಲಿ ಕೆಲವು ವೇಳೆ ಅದು ಭಯಂಕರ ಮತಭ್ರಾಂತಿಯ ರೂಪವನ್ನು ತಾಳುವ ಅಪಾಯವಿದೆ. 'ಈ ಕೀಳುಭಕ್ತಿಯ ಗುಂಪಿನಿಂದಲೇ ಹಿಂದೂ, ಮಹಮ್ಮದೀಯ, ಮತ್ತು ಕ್ರೈಸ್ತ ಮತಾಂಧರು ಬಂದಿರುವುದು' ಎನ್ನುತ್ತಾರೆ ಸ್ವಾಮೀಜಿ. ಸಾಧಕನು ಹನುಮಂತನಂತೆ, 'ಶ್ರೀನಾಥ ಮತ್ತು ಜಾನಕೀನಾಥ ಅಭೇದ ಎಂದು ಗೊತ್ತಿದ್ದರೂ ಕಮಲಲೋಚನನಾದ ರಾಮನೇ ನನ್ನ ಸರ್ವಸ್ವ' ಅಥವಾ

ತುಳಸೀದಾಸರು ಹೇಳುವಂತೆ, ''ಎಲ್ಲದರ ಸಾರವನ್ನು ಹೀರಿ, ಎಲ್ಲರೊಂದಿಗೆ ಬೆರೆಯಿರಿ, ಎಲ್ಲರ ಹೆಸರನ್ನು ಹೇಳಿ. ಎಲ್ಲರೂ ಹೇಳುವುದಕ್ಕೂ 'ಹೌದು, ಹೌದು' ಎನ್ನಿ. ಆದರೆ ಎಂದಿಗೂ ನಿಮ್ಮ ಇಷ್ಟವನ್ನು ಮರೆಯಬೇಡಿ'' ಎಂದು ಹೇಳುವಂತಿರಬೇಕು.

ಆದರೆ ಕೆಲವು ವೇಳೆ ತಮ್ಮ ಪಂಥಕ್ಕೆ ಸೇರದೆ ಇರುವ ಇತರರನ್ನು ದೂರುವುದಕ್ಕೂ ಇದೇ ಕಾರಣ. ಪ್ರತಿಯೊಂದು ಧರ್ಮ ಮತ್ತು ದೇಶದಲ್ಲಿರುವ ದುರ್ಬಲರು ಮತ್ತು ಇನ್ನೂ ಸಾಕಷ್ಟು ಮುಂದುವರಿಯದೆ ಇರುವವರು ತಮ್ಮ ಇಷ್ಟವನ್ನು ಪ್ರೀತಿಸುವುದು ಒಂದೇ ರೀತಿ; ಅದೇ, ತಮ್ಮದಲ್ಲದೇ ಇರುವುದನ್ನು ದ್ವೇಷಿಸುವುದು. ತನ್ನ ಇಷ್ಟದೇವರು, ತನ್ನ ಧರ್ಮ ಮುಂತಾದವನ್ನು ಅಷ್ಟೊಂದು ಪ್ರೀತಿಯಿಂದ ನೋಡುವವನು ಇತರರ ಆದರ್ಶಗಳನ್ನು ಕಂಡಾಗ ಅಥವಾ ಕೇಳಿದಾಗ ಬಾಯಿಗೆ ಬಂದಂತೆ ಕೂಗಾಡುವ ಮತಭ್ರಾಂತರಾಗಲು ಇದೇ ಕಾರಣ.

**ಮತಾಂಧತೆಯ ಚಿಕಿತ್ಸೆ:** ಮತಾಂಧತೆಗೆ ಸೂಕ್ತ ಚಿಕಿತ್ಸೆಯೇ ಸರಿಯಾದ ಜ್ಞಾನ. ನಿಜವಾದ ಜ್ಞಾನ ಮನಸ್ಸಿಗೆ ಹೊಳೆದ ಮೇಲೆ, ಎಲ್ಲಾ ಮತೀಯ ವ್ಯಾಜ್ಯಗಳೂ ಕೊನೆಗಾಣುತ್ತವೆ. ಶ್ರೀರಾಮಕೃಷ್ಣರ ಈ ದೃಷ್ಟಾಂತವು ಈ ಸತ್ಯವನ್ನು ವಿವರಿಸುತ್ತದೆ:

''ಇಬ್ಬರು ಊಸರವಳ್ಳಿಯ ಬಣ್ಣದ ವಿಚಾರವಾಗಿ ಚರ್ಚೆ ಮಾಡುತ್ತಿದ್ದರು. ಒಬ್ಬನು, 'ಓಲೆಗಿಡದ ಮೇಲೆ ಇರುವ ಸುಂದರವಾದ ಊಸರವಳ್ಳಿ ಕೆಂಪು ಬಣ್ಣದ್ದು' ಎಂದನು. ಮತ್ತೊಬ್ಬ 'ನೀಲಿ' ಎಂದು ವಾದಿಸಿದ; ಯಾವ ತೀರ್ಮಾನಕ್ಕೂ ಬರಲಾಗದೆ ಆ ಮರದ ಕೆಳಗೆ ಸದಾ ವಾಸಿಸುತ್ತಿದ್ದವನ ಬಳಿ ಹೋಗಿ ಕೇಳಿದರು. ಊಸರವಳ್ಳಿಯು ಯಾವಾಗಲೂ ಬಣ್ಣವನ್ನು ಬದಲಾಯಿಸುತ್ತದೆ ಎನ್ನುವದು ಅವನಿಗೆ ಗೊತ್ತಿತ್ತು. ಅದಕ್ಕೆ ಅವನು ಇಬ್ಬರ ಪರಸ್ಪರ ವಿರೋಧಾಭಿಪ್ರಾಯಗಳು ಸರಿ ಎಂದನು.''ಎಲ್ಲ ಧರ್ಮಗಳಲ್ಲಿನ ಒಳ್ಳೆಯ ಭಾವನೆಗಳನ್ನು ನಾವು ಸ್ವೀಕರಿಸಬೇಕು. ಧರ್ಮದ ಚೌಕಟ್ಟಿನಿಂದ ಹೊರಬರಬೇಕು. ಧರ್ಮವು ವಿಶಾಲವಾಗಬೇಕು, ಅನಂತವಾಗಬೇಕು. ಆಗಲೇ ಧರ್ಮದ ಪೂರ್ಣ ಪ್ರಭಾವ ಕಾಣಲು ಸಾಧ್ಯ. ''ಇಂದು ನಮಗೆ ಬೇಕಾಗಿರುವುದು ಭಿನ್ನ ಭಿನ್ನ ಧರ್ಮಗಳಲ್ಲಿ ಒಂದು ಸೌಹಾರ್ದ ಭಾವನೆ. ಎಲ್ಲ ಧರ್ಮಗಳೂ ಒಟ್ಟಿಗೆ ಉಳಿಯುವುವು, ಇಲ್ಲವೆ ಅಳಿಯುವುವು ಎಂಬ ಅನ್ಯೋನ್ಯ ಗೌರವಜನಿತ ಸೌಹಾರ್ದ ಭಾವನೆ ನಮಗಿಂದು ಬೇಕಾಗಿದೆ'' ಎನ್ನುತ್ತಾರೆ ಸ್ವಾಮಿ ವಿವೇಕಾನಂದರು.

ಶ್ರೀರಾಮಕೃಷ್ಣರು ಕೆಲವು ದೃಷ್ಟಾಂತಗಳ ಮೂಲಕ ಇದನ್ನು ವಿವರಿಸಿದ್ದಾರೆ:

''ಒಂದೇ ನೀರನ್ನು ಬೇರೆ ಬೇರೆ ಜನರು ಬೇರೆ ಬೇರೆ ಮಾತಿನಲ್ಲಿ, ಕೆಲವರು 'ವಾಟರ್' ಎಂತಲೂ, ಕೆಲವರು 'ವಾರಿ' ಎಂದೂ, ಕೆಲವರು 'ಪಾನಿ', ಕೆಲವರು 'ಅಕ್ವ' ಎಂತಲೂ ಕರೆಯುತ್ತಾರೆ. ಒಂದೇ ಸಚ್ಚಿದಾನಂದವನ್ನು ಕೆಲವರು 'ಅಲ್ಲಾ' ಎಂದೂ, ಕೆಲವರು 'ಹರಿ' ಎಂದೂ ಮತ್ತೆ ಕೆಲವರು 'ಬ್ರಹ್ಮ'ನೆಂದೂ ಕರೆಯುವರು.''

''ಕುಂಬಾರನ ಅಂಗಡಿಯಲ್ಲಿ ಮಡಕೆ, ತಟ್ಟೆ ಮೊದಲಾದ ಹಲವು ಆಕಾರದ ಹಲವು ಗಾತ್ರದ ಪಾತ್ರೆಗಳನ್ನು ಒಂದೇ ಜೇಡಿ ಮಣ್ಣಿನಿಂದ ಮಾಡಿರುವರು.''

''ಎಷ್ಟೋ ಒಡವೆಗಳು ಚಿನ್ನದಿಂದ ಆಗಿವೆ. ಎಲ್ಲದರಲ್ಲಿಯೂ ವಸ್ತುವೊಂದೇ ಆಗಿದ್ದರೂ, ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.''

''ಒಂದು ಸಲ ಬರ್ದವಾನ್ ಮಹಾರಾಜರ ಆಸ್ಥಾನದಲ್ಲಿ ಶಿವ ಮತ್ತು ವಿಷ್ಣುವಿನ ವಿಚಾರವಾಗಿ ಯಾರು ದೊಡ್ಡವರೆಂಬ ವಿವಾದವೆದ್ದಿತು. ಕೆಲವು ಆಸ್ಥಾನಿಕರು ಶಿವ ದೊಡ್ಡವನೆಂದೂ, ಕೆಲವರು ವಿಷ್ಣು ಎಂದು ವಾದಿಸಿದರು. ವಾದ ಬಿರುಸಾದ ಮೇಲೆ ಬುದ್ಧಿವಂತ ಪಂಡಿತನೊಬ್ಬ 'ಸ್ವಾಮಿ! ನಾನು ಶಿವನನ್ನೂ ಕಾಣೆ, ವಿಷ್ಣುವನ್ನೂ ಕಾಣೆ, ಯಾರು ದೊಡ್ಡವರೆಂದು ಹೇಗೆ ಹೇಳಲಿ?' ಎಂದನು.''

ಇದರಂತೆ ಒಂದು ದೇವರನ್ನು ಮತ್ತೊಂದು ದೇವರೊಂದಿಗೆ ಹೋಲಿಸಲು ಹೋಗಬಾರದು. ಅಗೋಚರವಾದ ಪರಮಾತ್ಮನ ಬಳಿಗೆ ಹೋಗಬೇಕಾದರೆ ಬೇಕಾಗಿರುವುದು ಆತ್ಮಶುದ್ಧಿ ಮತ್ತು ಸರಳವಾದ ಹೃದಯ.

ಪರಿಶುದ್ಧ ಹೃದಯ ಪರಮಾತ್ಮನ ಸಾನ್ನಿಧ್ಯಕ್ಕಾಗಿ ಪರಿತಪಿಸುತ್ತದೆ. ಈ ಸತ್ಯವನ್ನು ಈ ಒಂದು ಮನೋಜ್ಞವಾದ ಕಥೆಯು ತಿಳಿಸುತ್ತದೆ:

ಒಂದು ದಿನ ಮೋಸಸ್‌ನು ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುತ್ತಾ ಏಕಾಂತವನ್ನರಸಿ ಕಾಡಿನಲ್ಲಿ ಒಬ್ಬನೇ ನಡೆಯುತ್ತಿದ್ದಾಗ ಇಂಪಾದ ಕೊಳಲ ಧ್ವನಿ ಕೇಳಿ ಆಶ್ಚರ್ಯಚಕಿತನಾಗಿ, ಧ್ವನಿ ಬಂದ ದಿಕ್ಕಿನತ್ತ ನಡೆಯತೊಡಗಿದ. ಕುರುಬ ಹುಡುಗನೊಬ್ಬ ತನ್ನ ಕುರಿ ಮಂದೆಯಲ್ಲಿ ಆನಂದದಿಂದ ನೆಗೆಯುತ್ತಾ, ಕುಣಿಯುತ್ತಾ ಕೊಳಲನೂದುತ್ತಿದ್ದ. ಅವನ ಗುಂಗುರು ಕೂದಲು, ಮಂಡಿ ತನಕ ಜೋತು ಬಿದ್ದ ನಿಲುವಂಗಿ, ಪುಟ್ಟ, ದೊಡ್ಡ ಬಿಳಿ, ಕಂದು ಬಣ್ಣದ ಕುರಿಗಳು, ಸುತ್ತಲೂ ಹಸಿರು ಗಿಡಮರಗಳು ಆ ದೃಶ್ಯದ ಸೌಂದರ್ಯವನ್ನು ಹೆಚ್ಚಿಸಿದ್ದವು. ಮನಸ್ಸಿಗೆ ಆಹ್ಲಾದವನ್ನೀಯುತ್ತಿದ್ದ ಆ ದೃಶ್ಯದ ಸೌಂದರ್ಯವನ್ನು ನೋಡುತ್ತಾ ಮೈಮರೆತು ನಿಂತನು ಮೋಸೆಸ್! ಸ್ವಲ್ಪ ಹೊತ್ತಿನ ನಂತರ ಹುಡುಗನು ಕೊಳಲನ್ನು ಕೆಳಗಿಟ್ಟು, ನಿಧಾನವಾಗಿ ಮಂಡಿಗಳ ಮೇಲೆ ಕುಳಿತು, ಕರ ಜೋಡಿಸಿ ಆಕಾಶದತ್ತ ಮೊಗ ಮಾಡಿ, ಭಕ್ತಿಭಾವ ತುಂಬಿ ಪ್ರಾರ್ಥಿಸತೊಡಗಿದ: ''ಹೇ ಭಗವಂತ, ನೀನೆಲ್ಲಿದ್ದೀಯೆ? ದಯಮಾಡಿ ಹೇಳು. ನಿನ್ನ ಸೇವಕನಾಗಿರುವುದರ ಹೊರತು ಮತ್ತೇನೂ ಬಯಸೆನು ನಾನು. ನೀನು ಪ್ರಾತಃಕಾಲ ಏಳುತ್ತಿದ್ದಂತೆ ನೊರೆಯಿಂದ ಕೂಡಿದ ಮೇಕೆ ಹಾಲನ್ನು ಕುಡಿಸುವೆನು. ನಂತರ ನಿನ್ನ ಕೂದಲನ್ನು

ತೊಳೆದು ಸ್ನಾನ ಮಾಡಿಸುವೆ. ಬಿಸಿಲಲ್ಲಿ ಕೂದಲನ್ನು ಒಣಗಿಸುವೆ, ನಿನ್ನ ಕೈಕಾಲುಗಳನ್ನು ಒತ್ತುವೆ. ಕಾಡಿನಲ್ಲಿ ಬೆಳೆದ ಹಸಿರು ಸೊಪ್ಪು, ಜೋಳ ಇತ್ಯಾದಿಗಳಿಂದ ರುಚಿಕರ ಅಡಿಗೆ ಮಾಡಿ ತಿನ್ನಿಸುವೆ. ನಿನ್ನ ಪಾದರಕ್ಷೆಗಳು ಕಿತ್ತುಹೋದರೆ ಹೊಲಿದು ಕೊಡುವೆ, ಹರಿದ ಕಾಲುಚೀಲಗಳನ್ನು ಹೊಲಿಯುವೆ, ಕೊಠಡಿಯನ್ನು ಸ್ವಚ್ಛಗೊಳಿಸುವೆ. ಆತ್ಮೀಯ ಸ್ನೇಹಿತನೆ, ನನ್ನ ಹೃದಯದ ಅರಸನೆ, ಬೆಳಗ್ಗಿನಿಂದ ರಾತ್ರಿಯವರೆಗೆ ನಿನ್ನೊಡನೆ ಮಾತನಾಡುವೆ. ನನ್ನೆಲ್ಲ ನೋವುನಲಿವುಗಳನ್ನು, ಸುಖದುಃಖಗಳನ್ನು ನಿನ್ನೊಡನೆ ಹಂಚಿಕೊಳ್ಳುವೆ. ನಾನು ಮತ್ತು ನನ್ನ ಕುರಿಮಂದೆಯೆಲ್ಲಾ ನಿನ್ನ ಸೇವೆಗಾಗಿ ಅರ್ಪಿತ, ಎಲ್ಲಿರುವೆ ಹೇಳು?''

ಇದನ್ನೆಲ್ಲಾ ಕೇಳುತ್ತಾ ನಿಂತಿದ್ದ ಮೋಸೆಸ್‌ನಿಗೆ ಕೋಪ ತಡೆಯಲಾಗದೆ ಮುಂದೆ ಬಂದು ತನ್ನ ಕೈಯಲ್ಲಿದ್ದ ದೊಣ್ಣೆಯಿಂದ ಅವನನ್ನು ಹೊಡೆಯುತ್ತಾ, ''ಏಯ್! ಯಾರೊಡನೆ ಮಾತನಾಡುತ್ತಿರುವೆ?'' ಎಂದು ಗದರಿಸಿದನು. ಇದ್ದಕ್ಕಿದ್ದಂತೆ ಬಿದ್ದ ಏಟಿನಿಂದ ಬೆಚ್ಚಿಬಿದ್ದ ಕುರುಬನನ್ನು ಕುರಿತು, ''ಏನಿದು ಮೂರ್ಖನಂತೆ ಬಡಬಡಿಸುತ್ತಿರುವೆ? ಭಗವಂತ ನೀನು ಕೊಟ್ಟ ಹಾಲನ್ನು ಕುಡಿಯುವನೆ? ಕಾಲುಗಳು? ಪಾದರಕ್ಷೆಗಳು?? ಭಗವಂತನೇನು ನಿನ್ನ ಸೇವೆಗೆ ಕಾಯುತ್ತಿರುವ ಬಡ, ಮುದಿ ಚಿಕ್ಕಪ್ಪನೇನು? ಹುಟ್ಟು, ಸಾವು ಇರುವವರಿಗೆ ಮಾತ್ರ ಆಹಾರ. ಏಳು, ಎದ್ದು ನಿನ್ನ ಯೋಚನಾಲಹರಿಯನ್ನು ಬದಲಾಯಿಸು'' ಎಂದು ಬಾಯಿಗೆ ಬಂದಂತೆ ಕೂಗಾಡಿದನು.

ಈ ಬೈಗುಳ ಕಿವಿಗೆ ಬೀಳುತ್ತಲೇ ಹುಡುಗನ ಕಣ್ಣಿನಲ್ಲಿದ್ದ ಆಶೆಯ ಬೆಳಕು ನಂದಿಹೋಯಿತು. ದುಃಖ, ನಿರಾಸೆಗಳ ಭಾರದಿಂದ ಕುಸಿದನು. ತನ್ನ ಮುಂದಿದ್ದ ಹಸಿರು ಹುಲ್ಲುಗಾವಲು ಬತ್ತಿ ಬರಡಾದಂತಾಯಿತು. ತನ್ನಿದಿರೇ ಪ್ರಪಂಚ ಲಯವಾಗುತ್ತಿರುವಂತೆ ಭಾಸವಾಯಿತು. ಆ ನಿರಕ್ಷರಸ್ಥ ಕುರುಬನನ್ನು ಗದರಿಸಿ ಹತ್ತು ಹೆಜ್ಜೆ ಮುಂದೆ ನಡೆದ ಮೋಸೆಸ್‌ನ ಕಿವಿಗೆ ಭಗವಂತನ ಅಶರೀರವಾಣಿಯು ಗುಡುಗಿತು: ''ಮೋಸೆಸ್! ನೀನೇನು ಹೃದಯಗಳನ್ನು ಬೆಸೆಯಲು ಬಂದ ಪಾದ್ರಿಯೊ? ಛಿದ್ರಗೊಳಿಸಲೊ?''

''ನಾನೆಲ್ಲಿ ಹಾಗೆ ಮಾಡಿದೆ, ದೇವ? ಜನ ತಮ್ಮ ತಮ್ಮ ಕಲ್ಪನೆಗಳಿಗೆ ಅನುಸಾರ ಇತಿಮಿತಿಗಳನ್ನು ಒಡ್ಡುತ್ತಿದ್ದಾರೆ... ''

''ನಾನು ಪ್ರತಿಯೊಬ್ಬರಿಗೂ ಅವರವರ ಭಾವಕ್ಕೆ, ಸ್ವಭಾವಕ್ಕೆ ತಕ್ಕಂತೆ ಅರ್ಚಿಸುವ ಮಾರ್ಗ ತೋರಿರುವೆ. ಪೂಜೆಯಿಂದ ನನಗೆ ಆಗಬೇಕಾದದ್ದು ಏನು? ನನ್ನೊಡನೆ ಪ್ರೀತಿಯ ಬೆಸುಗೆಯಾಗಲೆಂದು ಜೀವಿಗಳಿಗೆ ಪೂಜೆ, ಪ್ರಾರ್ಥನೆಗಳನ್ನು ಅನುಗ್ರಹಿಸಿರುವೆ. ಹಿಂದು, ಕ್ರೈಸ್ತ, ಮಹಮ್ಮದೀಯ ಎಲ್ಲರೂ ಅವರವರ ಭಾವಕ್ಕೆ ತಕ್ಕಂತೆ ಅರ್ಚಿಸಲಿ. ನನಗೆ ಬೇಕಾಗಿರುವುದು ಕೇವಲ ವ್ಯಾಕುಲತೆ, ತುಡಿತ... ''

ಭಗವಂತನ ವಾಣಿಯಿಂದ ಮೋಸೆಸ್‌ನ ಅಜ್ಞಾನ ಕಳೆದು ದೊಡ್ಡ ಪಾಠ ಕಲಿತನು. ತನ್ನ ತಪ್ಪಿನ ಅರಿವಾಗಿ ಕುರುಬನಿಗೆ ವಿಷಯ ಅರುಹಲು ಅವನನ್ನು ಅರಸುತ್ತಾ ಓಡಿದನು. ಆದರೆ ಕುರುಬ ಹುಡುಗನಾಗಲಿ, ಕುರಿಮಂದೆಯಾಗಲಿ ಕಣ್ಮರೆಯಾಗಿ ಬಿಟ್ಟಿದ್ದವು. ಅಡ್ಡಾದಿಡ್ಡಿಯಾಗಿ ಕಾಣುತ್ತಿದ್ದ ಹೆಜ್ಜೆಯ ಗುರುತುಗಳನ್ನು ಅನುಸರಿಸುತ್ತಾ ನಡೆಯತೊಡಗಿದ ಮೋಸೆಸ್. ಬಹಳ ದೂರ ನಡೆದ ನಂತರ ಎತ್ತರದ ಬೆಟ್ಟವೊಂದರ ಕಣಿವೆಯ ಬಳಿ ಕಲ್ಲಿಗೊರಗಿ ನಿಂತವನನ್ನು ಹಿಂಬದಿಯಿಂದ ಕಂಡು ನಿಟ್ಟುಸಿರು ಬಿಟ್ಟನು. ಅವನ ಬಳಿಸಾರಿ ಭಗವಂತನ ವಾಣಿಯನ್ನು ಅರುಹಿ ಕ್ಷಮಾಪಣೆ ಕೇಳಿದನು. ಕುರುಬನು ತೀವ್ರ ಅಭೀಪ್ಸೆಯಿಂದ ಭಗವದನುಗ್ರಹಕ್ಕೆ ಪಾತ್ರನಾಗಿ ಆಧ್ಯಾತ್ಮಿಕ ಪಥದಲ್ಲಿ ಪ್ರಾರ್ಥನೆ, ಪದಗಳ ಅಗತ್ಯವನ್ನು ಮೀರಿದ ಉನ್ನತ ಹಂತವನ್ನು ತಲುಪಿದ್ದ! ದೇಹಾತ್ಮಭಾವನೆಯನ್ನು ಮೀರಿದ ನಿರಾಕಾರ ಸ್ಥಿತಿಯಲ್ಲಿದ್ದ. ಮೋಸೆಸ್‌ನನ್ನು ಕಂಡು ಆ ಕುರುಬರ ಹುಡುಗನು, ''ನಿನಗೆ, ನಿನ್ನ ಆ ಕೈಗಳಿಗೆ ಹಾಗೂ ನಿನ್ನ ದಂಡಕ್ಕೆ ನಮಸ್ಕಾರ. ನೀನು ತಿವಿದಿದ್ದರಿಂದ ನನ್ನ ಅಜ್ಞಾನ ಕಳೆಯಿತು. ನನ್ನ ಕೃತಜ್ಞತೆಗಳನ್ನು ಸ್ವೀಕರಿಸು'' ಎನ್ನುತ್ತಾ ಹೊಸ ಭರವಸೆ, ಆತ್ಮಶ್ರದ್ಧೆಗಳಿಂದ ಕೂಡಿ, ಮಂದಗತಿಯಲ್ಲಿ ನಡೆಯುತ್ತಾ ಕಣಿವೆಗಳಲ್ಲಿ ಕಣ್ಮರೆಯಾದ. *(Pilgrim to Paradise, p.42)*

ಶಾಶ್ವತವಾದ ಭಕ್ತಿ ಬೇಕಾದರೆ ದ್ವೇಷಭಾವನೆಯನ್ನು ತ್ಯಜಿಸಬೇಕು. ದ್ವೇಷಭಾವನೆ ಭಕ್ತಿಗೆ ದೊಡ್ಡ ಆತಂಕ. ಯಾರನ್ನೂ ದ್ವೇಷಿಸದವನು ದೇವರನ್ನು ಸೇರುವನು.

**ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ**
**ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।**
**ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ**
**ಸೋಽಯಂ ವೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ ॥** *(ಬೇಲೂರಿನ ಶಾಸನ)*

'ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮವೆಂದೂ, ಬೌದ್ಧರು ಬುದ್ಧನೆಂದು, ವಿಚಾರಪಟುಗಳಾದ ನೈಯಾಯಿಕರು ಕರ್ತೃವೆಂದೂ, ಜೈನಶಾಸನವನ್ನು ಅನುಸರಿಸುವವರು ಅರ್ಹತ್ ಎಂದೂ, ಮೀಮಾಂಸಕರು ಕರ್ಮವೆಂದೂ ಯಾರನ್ನು ಉಪಾಸಿಸುವರೋ, ಅಂತಹ ತ್ರೈಲೋಕ್ಯನಾಥನಾದ ಹರಿಯು ನಿಮಗೆ ಇಷ್ಟಫಲಗಳನ್ನು ಕೊಡಲಿ.'

''ನೀನು ಭಾರತವನ್ನು ಅರಿಯಬೇಕೆಂದಿದ್ದರೆ, ಸ್ವಾಮಿ ವಿವೇಕಾನಂದರನ್ನು ಅಧ್ಯಯನ ಮಾಡು. ಅವರಲ್ಲಿ ಎಲ್ಲವೂ ಸಕಾರಾತ್ಮಕವಾದದ್ದು. ಯಾವುದೂ ನಕಾರಾತ್ಮಕವಾದದ್ದು ಇಲ್ಲ.''

— ರವೀಂದ್ರನಾಥ ಠಾಕೂರ್

# 'ಹಿಂದೂ ಧರ್ಮ' ಉಪನ್ಯಾಸದಲ್ಲಿ ತಾತ್ತ್ವಿಕ, ಧಾರ್ಮಿಕ ಅಂಶಗಳು

ಡಾ. ಕೆ.ಎಲ್. ಪ್ರಸನ್ನಾಕ್ಷಿ

ಚಿಕಾಗೋ ಉಪನ್ಯಾಸಗಳಲ್ಲಿ ಅತ್ಯಂತ ಪ್ರಮುಖ ಭಾಷಣವಾದ 'ಹಿಂದೂಧರ್ಮ' ಹಲವು ದೃಷ್ಟಿಗಳಿಂದ ಮಹತ್ವದ್ದಾಗಿದೆ. ಈ ಭಾಷಣದ ತಾತ್ತ್ವಿಕ, ಧಾರ್ಮಿಕ ಅಂಶಗಳನ್ನು ಕುರಿತು ಬರೆದಿರುವ ಲೇಖಕಿ, ಮೈಸೂರು ಮಹಾರಾಣಿ ಕಾಲೇಜಿನ ನಿವೃತ್ತ ಪ್ರಾಂಶುಪಾಲರು. ಸಂಸ್ಕೃತ ವ್ಯಾಸಂಗ, ಶಾಸ್ತ್ರ ಹಾಗೂ ಆಧ್ಯಾತ್ಮಿಕ ಕೃತಿಗಳನ್ನು ವಿಶೇಷವಾಗಿ ಅಧ್ಯಯನ ಮಾಡಿರುವ ಅವರು ಮೈಸೂರು ಆಶ್ರಮದ ಭಕ್ತರು. ದೀರ್ಘಕಾಲದಿಂದ ಅವರು 'ವಿವೇಕಪ್ರಭ' ಪತ್ರಿಕೆಯಲ್ಲಿ ಹಲವು ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ.

## ಪೀಠಿಕೆ

**'ಜ್ಞಾನಮಸ್ತಿ ಸಮಸ್ತಸ್ಯ ಜಂತೋರ್ವಿಷಯ-ಗೋಚರೇ'** ಎಂದು ಸುಮೇಧ ಋಷಿ ಮಾರ್ಕಂಡೇಯ ಪುರಾಣದಲ್ಲಿ ಹೇಳುತ್ತಾರೆ. ಸೃಷ್ಟಿಯಾದ ಸಕಲ (ಚರಾಚರ) ಜೀವಿಗಳಿಗೂ-ಶರೀರ 'ನಾನು', ಶರೀರಕ್ಕೆ ಸಂಬಂಧಿಸಿದುದು 'ನನ್ನದು', ಈ ಶರೀರ ರಕ್ಷಣೆ ಪೋಷಣೆಗಾಗಿ ಆಹಾರ ನಿದ್ರಾದಿಗಳನ್ನು ಅನುಭವಿಸುವವನು ನಾನು, ಇತ್ಯಾದಿ — ತಿಳಿವಳಿಕೆ ಇದ್ದೇ ಇರುತ್ತದೆ. ಆದರೆ ಮಾನವ ಎಂಬ ಜೀವಿ 'ವಿವೇಕ' ಎಂಬ ಒಂದು ವಿಶೇಷವನ್ನು ಪಡೆದಿದ್ದಾನೆ. ಅದರ ಸಹಾಯದಿಂದ ಸರಿ-ತಪ್ಪು, ಒಳಿತು-ಕೆಡುಕು, ಪಾಪ-ಪುಣ್ಯ, ಧರ್ಮ-ಅಧರ್ಮ ಇತ್ಯಾದಿಗಳನ್ನು ಭಜಿಸಿ ತಿಳಿದುಕೊಳ್ಳಬಲ್ಲ. ಅದರ ಸಹಾಯದಿಂದಲೇ ಅವನು ಈ ಶರೀರವು 'ನಾನು' ಅಲ್ಲ, 'ನನ್ನದು' ಅಲ್ಲ, ಎಂದೂ ತಿಳಿದುಕೊಳ್ಳಬಲ್ಲ. '**ಕಸ್ತ್ವಂ ಕೋಽಹಂ ಕುತ ಆಯಾತಃ, ಕಾ ಮೇ ಜನನೀ ಕೋ ಮೇ ತಾತಃ, ಕಾ ತೇ ಕಾಂತಾ ಧನಗತ ಚಿಂತಾ**' ಎಂದು- 'ನೀನು' ಎನ್ನುವುದು ಯಾರು? 'ನಾನು' ಎನ್ನುವುದು ಯಾರು? ಎಲ್ಲಿಂದ ಬಂದಿದ್ದೇವೆ? 'ತಂದೆ ಯಾರು?' 'ತಾಯಿ ಯಾರು?' ಎಂದು ವಿಶ್ಲೇಷಣೆ ಮಾಡಿಕೊಳ್ಳುತ್ತಾ ಆತ ಅಂತರ್ಮುಖಿಯಾಗಬಲ್ಲ. ಹಾಗಾಗಿ ಹೊರಮುಖವಾಗಿದ್ದು ಹೊರವಸ್ತು (ಶಬ್ದ, ಸ್ಪರ್ಶ, ರೂಪ) ಗಳೆಡೆಗೆ ಆಕರ್ಷಿತವಾಗಿ ಓಡುತ್ತಿದ್ದ ಇಂದ್ರಿಯಗಳನ್ನು ಒಳಸೆಳೆದು ತನ್ನ ಅಂತರಂಗದಲ್ಲಿ 'ನಿಜ'ದ ಮರ್ಮವನ್ನರಿತ. ಆ ಅರಿವೇ 'ವೇದ'. ಅದೇ ಹಿಂದೂಧರ್ಮದ ಉಸಿರು.

## ವೇದ ಮೂಲ ಸನಾತನ ಧರ್ಮ:

ಈ 'ವೇದ' ಎಂಬುದು ಎಂದೋ ಇತ್ತು, ಇಂದು ಇಲ್ಲ, ನಾಳೆ ಮತ್ತೊಬ್ಬ ಸಾಧನೆ ಮಾಡಿ ತಂದು ಕೊಡುತ್ತಾನೆ ಎಂಬುವಂತಹುದಲ್ಲ. ಎಣಿಕೆಗೆ ಸಿಗದಷ್ಟು ಆಕಾಶಕಾಯಗಳು, ಹಲವಾರು ಗ್ರಹಗಳು ಸುತ್ತುವ ಅನೇಕ ಸೌರಮಂಡಲ ಮೊದಲಾದ ತೇಜಃಕಾಯಗಳಿಂದ ಕೂಡಿದ ಬ್ರಹ್ಮಾಂಡ, ನೂರಾರು ದ್ವೀಪ ಹಲವಾರು ಖಂಡಗಳಿಂದೊಡಗೂಡಿದ ವಿಶ್ವಾಂಡ ಅವುಗಳಲ್ಲೆಲ್ಲಾ ಜೀವಿಸುತ್ತಿರುವ ಅನಂತಕೋಟಿ ಸಂಖ್ಯೆಯ ಚರಾಚರ ಜೀವಿಗಳು, ಎಲ್ಲವೂ ಆಯಾಯ ರೂಪಗಳಲ್ಲಿ ವಿಕಾಸ ಹೊಂದುವ ಮುನ್ನ, ಯಾವ ಒಂದು ಅನಂತ ಚೈತನ್ಯಶಕ್ತಿಯಲ್ಲಿ (ಅವ್ಯಕ್ತವಾಗಿ) ಇದ್ದವೋ, ಯಾವ ಅನಂತಶಕ್ತಿಯಿಂದ ಈ ಎಲ್ಲವೂ ವ್ಯಕ್ತರೂಪಗಳನ್ನು ತಳೆದವೋ, ಕೊನೆಗೆ ಯಾವ ಚೈತನ್ಯಶಕ್ತಿಯಲ್ಲಿಯೇ ಈ ಎಲ್ಲವೂ ಲೀನವಾಗುವುದೋ ಆ (ನಿನ್ನೆ-ಇಂದು-ಮುಂದು) ಸದಾ ಅಸ್ತಿತ್ವದಲ್ಲಿರುವ ವಸ್ತುವೇ 'ಪರಬ್ರಹ್ಮ'. ಇದನ್ನೇ ಭಗವಂತ, ದೇವರು, ಪರತತ್ತ್ವ ಎಂದೆಲ್ಲಾ ಕರೆಯುವರು. ಅದರ ಉಸಿರೇ 'ವೇದ'. ಈ ವೇದಗಳು ಶಬ್ದ ತರಂಗಗಳ ರೂಪದಲ್ಲಿ ನಿತ್ಯ ನಿರಂತರ ಆಕಾಶದಲ್ಲಿ ಚಲಿಸುತ್ತಲೇ ಇರುತ್ತವೆ. ತಮ್ಮ ಇಂದ್ರಿಯ ಪ್ರಾಣ ಅಪಾನಾದಿಗಳನ್ನೂ ಒಳಸೆಳೆದು ಏಕಾಗ್ರಗೊಳಿಸಿ ಸಾಧನೆ ಮಾಡುವವನು ಹಾಗೆ ಸಂಚರಿಸುತ್ತಿರುವ ಶಬ್ದಗಳನ್ನು ತನ್ನ ಅಂತರಂಗದಲ್ಲಿ ಸಾಕ್ಷಾತ್ಕರಿಸಿಕೊಳ್ಳಬಲ್ಲ. ಹೀಗೆ ಸಾಕ್ಷಾತ್ಕರಿಸಿಕೊಂಡ ಶಬ್ದಗಳೇ ಮಂತ್ರಗಳು. ಈ ಮಂತ್ರಗಳನ್ನು ಕಂಡವನು ಋಷಿ ('ಮಂತ್ರದ್ರಷ್ಟ'). ಇಂತಹ ಎಂದೆಂದೂ ಅಳಿಯದೇ ಉಳಿಯುವ ನಿತ್ಯನಿರಂತರವಾದ ಶಬ್ದ ತರಂಗರೂಪ 'ವೇದ'ಗಳನ್ನು ಆಧಾರವಾಗಿ ಹೊಂದಿರುವುದರಿಂದ ಹಿಂದೂಧರ್ಮ 'ಸನಾತನ-ಧರ್ಮ.' ಇದನ್ನು ಯಾರು ಬೇಕಾದರೂ ಎಂದಿಗಾದರೂ ಸಾಧನೆಯ ಮೂಲಕ ಅನುಷ್ಠಾನ ಮಾಡುತ್ತಾ ತಮ್ಮ ತಮ್ಮ ಅನುಭವದಲ್ಲೂ ಪಡೆಯಬಹುದು. '**ವೇದಾಹಮೇತಂ ಪುರುಷಂ ಮಹಾಂತಂ**' — 'ಈ ಮಹೋನ್ನತವಾದ ತತ್ತ್ವವನ್ನು ನಾನು ತಿಳಿದೆ (ಕಂಡೆ, ಅನುಭವಿಸಿದೆ)' ಎಂದು ವೈದಿಕ ಋಷಿ ಇಲ್ಲಿ ಘಂಟಾಘೋಷವಾಗಿ ಘೋಷಿಸುತ್ತಾನೆ.

ನೀರು (ಜಲ) ಎಂಬ ತತ್ತ್ವವನ್ನು ಪ್ರಯೋಗಶಾಲೆಯಲ್ಲಿ ಪರೀಕ್ಷಿಸಿ ಅನೇಕ ವಿಧ ಪ್ರಯೋಗಗಳನ್ನು ಮಾಡಿ, ಕೊನೆಗೆ ಎರಡು ಜಲಜನಕ, ಒಂದು ಆಮ್ಲಜನಕದ ಸಂಯೋಗವೇ ಇದಾಗಿದೆ ಎಂದು ಒಮ್ಮೆ ಒಬ್ಬ ವಿಜ್ಞಾನಿ ಕಂಡು ಹಿಡಿದ. ನಂತರ ಕಾಲದಲ್ಲಿ ಎಷ್ಟೆಷ್ಟು ವಿಜ್ಞಾನಿಗಳು ಯಾವ ಯಾವ ವಿಧದಲ್ಲಿ ವಿಶ್ಲೇಷಣೆ ಪ್ರಯೋಗ ಮಾಡಿದರೂ ಜಲತತ್ತ್ವದ ಈ ಅವಯವ ವಿಭಾಗ

ವನ್ನೇ ಕಾಣುವವನಲ್ಲದೆ ಅದು ಬೇರೆಯಾಗಲು ಸಾಧ್ಯವೆ? ಅದು ಎಂದೆಂದಿಗೂ ಬದಲಾಗುವುದಿಲ್ಲ ತಾನೆ! ಅಂತೆಯೇ ಪ್ರಾಯೋಗಿಕ ನೆಲೆಯಲ್ಲಿ 'ನಾನು ಕಂಡೆ; ನೀನೂ ಕಾಣಬಹುದು. ಬಾ, ಈ ದಾರಿಯಲ್ಲಿ', ಎಂದು ಅನುಭವಿ ತೋರಿಕೊಟ್ಟ 'ಸತ್ಯದರ್ಶನ' ಇದಾದುದರಿಂದ ಇದು ಎಂದಿಗೂ ಬದಲಾಗದು. ಆದುದರಿಂದ ಇದು ಸನಾತನ ಧರ್ಮ.

ಇದನ್ನೇ ಸ್ವಾಮೀಜಿ ತಮ್ಮ 'ಹಿಂದೂಧರ್ಮ' ಉಪನ್ಯಾಸದಲ್ಲಿ: — ನ್ಯೂಟನ್ನನು ಕಂಡುಹಿಡಿಯುವ ಮೊದಲೂ ಗುರುತ್ವಾಕರ್ಷಣ ಶಕ್ತಿ ಇತ್ತು, ಆ ನಂತರವೂ ಅದು ಇರುವುದು; ಆಧ್ಯಾತ್ಮಿಕ ಜಗತ್ತನ್ನು ಆಳುತ್ತಿರುವ ನಿಯಮಗಳು — ಜೀವ-ಜೀವಗಳ, ಜೀವ ಮತ್ತು ಎಲ್ಲಾ ಜೀವಿಗಳ ತಂದೆಯಾದ ದೇವರ ನಡುವೆ ಇರುವ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ಸಂಬಂಧಗಳು ಅವುಗಳನ್ನು ಹೃದಯಾಂತರಾಳದಲ್ಲಿ ಕಂಡು ಅನುಭವಿಸುವ ಮೊದಲೂ ಇದ್ದವು. ಅವುಗಳನ್ನು ನಾವು ಮರೆತರೂ ಭಾವಿಸದೇ ಇದ್ದರೂ ಅವು ಇದ್ದೇ ಇರುವುವು. ಇವು ಇಂದು ಇದ್ದು ನಾಳೆ ಬದಲಾಗಿ ಅಳಿಸಿಹೋಗುವ ನಿಯಮಗಳಲ್ಲ. ಆದುದರಿಂದಲೇ ವೇದಗಳು ಇದನ್ನು ಅನಾದಿ ಅನಂತ ಎಂದಿವೆ. ವಿಜ್ಞಾನವೂ ಕೂಡ ವಿಶ್ವಶಕ್ತಿಯ ಒಟ್ಟು ಮೊತ್ತವು ಸೃಷ್ಟಿ ಸ್ಥಿತಿ ಲಯ - ಈ ಎಲ್ಲಾ ಕಾಲಗಳಲ್ಲಿ ಒಂದೇ ಆಗಿರುತ್ತದೆ — ಎಂದು ಹೇಳಿದ್ದಾರೆ.

ಸೃಷ್ಟಿಗೆ ಮುನ್ನ ಪಿಂಡಾಂಡ ವಿಶ್ವಾಂಡ ಬ್ರಹ್ಮಾಂಡ ಎಲ್ಲವೂ ಪರತತ್ತ್ವದಲ್ಲಿ ಅವ್ಯಕ್ತರೂಪದಲ್ಲಿರುತ್ತದೆ. ಸೃಷ್ಟಿಕಾಲದಲ್ಲಿ ಅವು ವ್ಯಕ್ತರೂಪವನ್ನು ಪಡೆಯುತ್ತವೆ. ವಿವಿಧ ನಾಮ-ರೂಪಗಳಿಂದ ವಿರಾಜಿಸುತ್ತವೆ, ಆಗಲೂ ಅದು ಪರತತ್ತ್ವವೇ ಆಗಿರುತ್ತದೆ. ಕೊನೆಗೆ ಎಲ್ಲವೂ ಅದರಲ್ಲಿಯೇ ಒಂದಾಗುತ್ತದೆ. ಆಗಲೂ ಆ ಶಕ್ತಿ ಒಂದೇ ಭಾವ ಹೊಂದಿರುತ್ತದೆ — ಎಂದು ವಿವರಿಸಿದ್ದಾರೆ.

### ತಾತ್ತ್ವಿಕ ಅಂಶಗಳು

**ಅ) ಪರತತ್ತ್ವ:** ಪ್ರಯೋಗಶಾಲೆಯಲ್ಲಿ ಆಸಿಡ್ ಆಲ್ಕಲೀಗಳ ಮಿಶ್ರಣದ ಪ್ರಮಾಣದಲ್ಲಿ ವ್ಯತ್ಯಾಸಗಳನ್ನು ಮಾಡುತ್ತಾ ಪರೀಕ್ಷಿಸುತ್ತಾ ವಿಜ್ಞಾನಿ ಭೌತವಸ್ತುಗಳ ಸ್ವರೂಪ ಪ್ರಕ್ರಿಯೆ ಪ್ರಯೋಜನಗಳನ್ನು ಅರಿಯುತ್ತಾನೆ. ಅಂತೆಯೇ ಆಂತರಂಗಿಕ ಪ್ರಯೋಗಶಾಲೆಯಲ್ಲಿ ನಿದ್ರಾಹಾರಾದಿಗಳನ್ನು ಮರೆತು ಸಾಧನೆ ಮಾಡುವುದರ ಮೂಲಕ ಪರತತ್ತ್ವದ ಸ್ವರೂಪ ಸ್ವಭಾವಾದಿಗಳನ್ನು ಅರಿಯಬೇಕು ಎನ್ನುತ್ತಾರೆ ಸ್ವಾಮೀಜಿ. ಇದು ಒಳಗೆ ಸದಾಕಾಲದಲ್ಲಿ ಇದೆ ಎಂಬುದೇ ಹಿಂದೂ ಸಿದ್ಧಾಂತ. ಈ ಪರತತ್ತ್ವವನ್ನು ಕೇಂದ್ರವಾಗಿ ಹೊಂದಿಯೇ ಜೀವಿಯ ಎಲ್ಲ ವಿಧ ಚಟುವಟಿಕೆಗಳೂ ವಿಶ್ವದ ಚಟುವಟಿಕೆಗಳೂ ಇರುತ್ತವೆ. 'ಭೀಷಾ ಅಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ...' *(ತೈತ್ತಿರೀಯೋಪನಿಷತ್ತು, ೨.೮.೧)* ಎನ್ನುವಂತೆ ಈ ಪರತತ್ತ್ವದ ನಿಯಮಕ್ಕೆ ಬದ್ಧವಾಗಿಯೇ ಗಾಳಿ ಬೀಸುತ್ತದೆ, ಸೂರ್ಯ ಉದಯಿಸುತ್ತಾನೆ, ಅಗ್ನಿ ಪ್ರಜ್ವಲಿಸುತ್ತದೆ ಇತ್ಯಾದಿ.

ಪ್ರಪಂಚದಲ್ಲಿ ಜೀವಿಗಳು ಸುಖಿಸುವ ಭಾವಿಸುವ ಪತಿ, ಪತ್ನಿ, ಪುತ್ರ, ಆಸ್ತಿ, ಸಂಪತ್ತು, ವಿದ್ಯೆ ಮೊದಲಾದ ಎಲ್ಲವೂ ಈ ಪರತತ್ತ್ವ ಕೇಂದ್ರಿತವಾಗಿದ್ದಾಗ ಮಾತ್ರ ಆನಂದದಾಯಕವೂ ಪ್ರಿಯವೂ ಆಗಿರುತ್ತವೆ. (**ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ ಆತ್ಮನಸ್ತು ಕಾಮಾಯ...**) *(ಬೃಹದಾರಣ್ಯಕೋಪನಿಷತ್ತು, ೨.೪.೫/೪.೫.೬)* ಈ ಪರತತ್ತ್ವ ಎಲ್ಲೆಲ್ಲೂ ವ್ಯಾಪಿಸಿದೆ, ಎಲ್ಲದರ ಒಳ ಹೊರಗೂ ತುಂಬಿ ಅದನ್ನು ಮೀರಿಯೂ ಇದೆ ('**ಅತ್ಯತಿಷ್ಠತ್ ದಶಾಂಗುಲಂ**').

ಹಾಗೆ ಎಲ್ಲವೂ ಪರತತ್ತ್ವವೇ ಎಂದಾದರೆ ಪ್ರಪಂಚದಲ್ಲಿ ಕಾಣುವ ಈ ಭೇದಗಳೇಕೆ? ಎಂಬ ಪ್ರಶ್ನೆ ಹುಟ್ಟುವುದು ಸಹಜ. ಅತ್ಯಂತ ಹೀನವಾದ ವಿಕಾರವಾದ ಆಕಾರಗಳು, ಮಲ ಮೂತ್ರಾದಿಗಳಲ್ಲಿ ಜನ್ಮ ತಳೆಯುವ ಜೀವಿಗಳು, ಅವೆಲ್ಲ ಇರಲಿ, ಮಾನವರಲ್ಲೇ ಕೈ ಇಲ್ಲದವರು, ಕಾಲಿಲ್ಲದವರು, ಬುದ್ಧಿಮಾಂದ್ಯರು, ಕುರುಡರು, ಹುಚ್ಚರೂ ಇತ್ಯಾದಿ ಸೃಷ್ಟಿ ಆ ಪರತತ್ತ್ವದ ತಾರತಮ್ಯ ಭೇದದಿಂದ ಆದುದಲ್ಲವೆ? ಎಂದು ಸಂಶಯ ಬರುವುದು.

**ಆ) ಕರ್ಮಸಿದ್ಧಾಂತ:** ದೇಹ ಜಡವಸ್ತುಗಳ ಸಂಯೋಗದಿಂದ ನಿರ್ಮಿತವಾಗುತ್ತದೆ, ಆದರೆ ದೇಹದೊಳಗೆ ಇರುವ 'ನಾನು' ಎಂಬುದು ಈ ಜಡವಸ್ತುಗಳ ಸಂಯೋಗವಲ್ಲ. ದೇಹದ ಈ ವೈವಿಧ್ಯಕ್ಕೆ ಜೀವಿಯ ಪೂರ್ವಶರೀರದಲ್ಲಿ ಆದ ಘಟನೆಗಳ ಪ್ರಭಾವವೇ ಕಾರಣವಾಗಿರುತ್ತದೆ, ಅದಕ್ಕೂ ಪರತತ್ತ್ವಕ್ಕೂ ಯಾವುದೇ ಸಂಬಂಧವಿಲ್ಲ. ಅದನ್ನು ಜೀವಿಗಳ ಕರ್ಮ ಎನ್ನುತ್ತಾರೆ — ಒಂದು ನಿರ್ದಿಷ್ಟವಾದ ಜೀವ ಸಂಬಂಧ ನಿಯಮಗಳಿಗೆ ಅನುಗುಣವಾಗಿ ಆ ಪ್ರವೃತ್ತಿಯನ್ನು ವ್ಯಕ್ತಗೊಳಿಸಲು ಉಚಿತವಾದ ದೇಹವನ್ನು ಅದು ಹೊಂದುತ್ತದೆ. ಉದಾಹರಣೆಗೆ ಒಂದು ಜೀವ ಈ ಜನ್ಮದಲ್ಲಿ ತನ್ನ ಬಳಿ ಇದ್ದುದನ್ನು ಉದಾರವಾಗಿ ತೆಗೆದು, ಅಗತ್ಯವಿದ್ದವರಿಗೆ, ಬೇಡಿದವರಿಗೆ, ಕೊಡದೆ ಕೊಡದೆ ಅಭ್ಯಾಸ ಮಾಡಿಕೊಂಡು ಬಿಟ್ಟಿದ್ದರೆ, ಆ ಪೂರ್ವಾಭ್ಯಾಸದ ಫಲವಾಗಿ ಮುಂದೆ ಜಿಪುಣನಾಗಿ ಜನ್ಮ ತಳೆಯುತ್ತದೆ. ಇದು ಅಸಹಜವಲ್ಲ. ಅದನ್ನೇ ಭಗವದ್ಗೀತೆಯಲ್ಲಿ ಅರ್ಜುನನ ಪ್ರಶ್ನೆಗೆ ಉತ್ತರ ರೂಪವಾಗಿ ಕೃಷ್ಣನೂ ತಿಳಿಸುತ್ತಾನೆ: ಚಂಚಲವಾದ ಮನಸ್ಸಿಗೆ ವಶವಾಗಿ ಅದರ ಸಂಕಲ್ಪಗಳಂತೆ ನಡೆದುಕೊಳ್ಳುವಂತಹ ವ್ಯಕ್ತಿ ಮುಂದೆ ಆ ಬುದ್ಧಿ ಸ್ವಭಾವಕ್ಕೆ ಸೂಕ್ತವಾಗುವಂತಹ ಶರೀರವನ್ನೇ (ಯೋಗ ಶರೀರವೋ ಭೋಗ ಶರೀರವೋ ಲೋಭಶರೀರವೋ...) ಹೊಂದುತ್ತಾನೆ — **ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಂ** *(ಭಗವದ್ಗೀತೆ, ೬.೪೩)* ಎಂದು.

**ಇ) ಆತ್ಮತತ್ತ್ವ:** ಆದುದರಿಂದ ಹಿಂದೂವಿನ ಪ್ರಕಾರ ಶರೀರ ಮಾತ್ರ ನಾಶವಾಗುತ್ತದೆ. ಈ ಶರೀರದಲ್ಲಿ ಮಾಡಿದ ಕರ್ಮಗಳಿಗೆ ಅನುಗುಣವಾದ ಬೇರೆ ಬೇರೆ ಶರೀರವನ್ನು ಜೀವಿ ಪಡೆಯುತ್ತಿರುತ್ತಾನೆ. ಆದರೆ 'ನಾನು' ಎಂಬುದು ದೇಹ ಪದವಾಚಿ ಅಲ್ಲ. ಅದು ಜಡವಸ್ತುಗಳ ಸಂಯೋಗವಲ್ಲ. ಅದನ್ನು ಬೆಂಕಿಯು

ಸುಡದು, ಗಾಳಿ ಒಣಗಿಸದು, ನೀರು ಒದ್ದೆ ಮಾಡದು, ಆಯು ಧಗಳು ತುಂಡು ಮಾಡಲಾರವು. ಇದು ನಿತ್ಯ ಅಚಲ ಸನಾತನ ವಾದುದು. ಇದು ಎಂದೆಂದೂ ಯಾವುದೇ ವಿಧ ಬದಲಾವಣೆಗೂ ಒಳಗಾಗುವಂತಹುದಲ್ಲ. ಇದನ್ನು ಬುದ್ಧಿಯೂ ಗ್ರಹಿಸಲಾರದು — ಎಂದು ವೇದಗಳು ಸಾರುತ್ತವೆ. ಭೌತವಸ್ತುಗಳಿಗೆ ಅನ್ವಯ ವಾಗುವ ನಿಯಮಗಳು ಆತ್ಮಕ್ಕೆ ಅನ್ವಯಿಸುವುದಿಲ್ಲ. ಅದು ಸಂಪೂರ್ಣ ಸ್ವತಂತ್ರವಾದುದು; ಅದು ಎಂದೂ ಯಾವ ಭೌತ ವಸ್ತುವಿನ ಬಂಧನಕ್ಕೂ ಒಳಗಾಗದು. ಅದು ಪವಿತ್ರವೂ ಪರಿ ಶುದ್ಧವೂ ಪರಿಪೂರ್ಣವೂ (ಲೋಪದೋಷ ಕುಂದು ಕೊರತೆಗ ಳಾವುದೂ ಇಲ್ಲದ) ಅಂತ್ಯರಹಿತವೂ ಅಮರವೂ ಆದ ತತ್ತ್ವ.

**ಈ) (ಪ್ರಕೃತಿ) ಬಂಧನ:** ಈ ಪರಿಪೂರ್ಣ ತತ್ತ್ವ ಅಪರಿ ಪೂರ್ಣವಾದ ಸದಾ ಬದಲಾವಣೆಯಾಗುತ್ತಿರುವ ಪ್ರಕೃತಿಯೊಡನೆ ಸಂಪರ್ಕ ಹೊಂದಿ ತಾನು ಅಪರಿಪೂರ್ಣ ಎಂದುಕೊಳ್ಳುತ್ತದೆ. ನದಿಯಲ್ಲಿ ದೋಣಿಯೊಂದು ಸಾಗುತ್ತಿರುತ್ತದೆ, ಇದ್ದಕ್ಕಿದ್ದಂತೆ ಬಿರುಗಾಳಿ ಏಳುತ್ತದೆ. ನದಿಯಲ್ಲಿ ಎತ್ತರೆತ್ತರದ ಪರ್ವತಾಕಾರದ ಅಲೆಗಳು ಏಳುತ್ತವೆ. ಆ ಅಲೆಯ ಸಂಪರ್ಕ ಹೊಂದಿದ್ದ ದೋಣಿ ಎತ್ತರಕ್ಕೆ ಏರುತ್ತದೆ. 'ಓಹೋ ತಾನೆಷ್ಟು ಉನ್ನತ, ಉದಾತ್ತ, ಉತ್ತಮ!' ಎಂದು ಭಾವಿಸುತ್ತದೆ. ಸ್ವಲ್ಪ ಕಾಲದಲ್ಲೇ ಅದೇ ಅಲೆ ಇಳಿದಾಗ ಅದರೊಡನೆ ತಾನೂ ಇಳಿದು ಕೆಳಕ್ಕೆ ಬಿದ್ದು ಅಲೆಯ ಹೊಡೆತಕ್ಕೆ ಸಿಕ್ಕಿ ನುಚ್ಚುನೂರಾಗುತ್ತದೆ. ಅಲೆಯ ಗರ್ಜನೆಯೊಡನೆ ತಾನೂ ಸೇರಿ ಗರ್ಜಿಸುತ್ತದೆ. ಹಾಗೆ ಕಾರ್ಯ-ಕಾರಣ (ತಾನು ಮಾಡಿದ ಕೆಲಸ - ಅದರ ಫಲರೂಪ ಶರೀರ) ಎಂಬ ಪ್ರಚಂಡ ಅಲೆಗಳ ಹೊಡೆತಕ್ಕೆ ಸಿಕ್ಕಿ ನಲುಗುವ, ನೋಯುವ ಅದು ತಾನು ದುರ್ಬಲ ಎಂದು ಭಾವಿಸುತ್ತದೆ. ರಕ್ಷಕರಿಲ್ಲದ ಕ್ಷುದ್ರಕೀಟ ಎಂದು ಚಿಂತಿಸಿ, ತಲ್ಲಣಿಸಿ, ಕಂಗೆಡುತ್ತದೆ.

**ಉ) (ಅಜ್ಞಾನದ) ಬಿಡುಗಡೆ:** ಆಗ ಪರತತ್ತ್ವದ ಉಸಿರಾದ ವೇದ ಸಹಾಯಕ್ಕೆ ಬರುತ್ತದೆ. 'ಅಯ್ಯೋ ಮೂಢ! ಕ್ಷಣ ಕ್ಷಣದಲ್ಲಿ ನಾಶದೆಡೆಗೆ ಸಾಗುತ್ತಿರುವ ಶರೀರ ನೀನಲ್ಲ ನೀನು ಅಮೃತದ ಪುತ್ರ', '**ಶ್ರುಣ್ವಂತು ಸರ್ವೇ ಅಮೃತಸ್ಯ ಪುತ್ರಾಃ....**' *(ಶ್ವೇತಾಶ್ವತ ರೋಪನಿಷತ್ತು, ೨.೫,೩.೮)* ; ಭ್ರಮೆಯಿಂದ ಆಚೆ ತಪ್ಪುತಿಳುವಳಿಕೆ ಯಿಂದ ಆಚೆ ಇರುವ ಸನಾತನ ಪುರುಷನನ್ನು ನಾನು ನೋಡಿದ್ದೇನೆ. ಅದರಿಂದ ಆನಂದಸಾಗರದಲ್ಲಿ ಮುಳುಗಿದ್ದೇನೆ, ಭಯ ಕಳವಳ ರಹಿತನಾಗಿದ್ದೇನೆ. ಅಭಯವೇ ಬ್ರಹ್ಮ '**ಅಭಯಂ ವೈ ಬ್ರಹ್ಮ**' ಅದನ್ನು (ನೆಲೆಯನ್ನು) ನಾನು ಪಡೆದಿದ್ದೇನೆ. ಅಮರನಾಗಿದ್ದೇನೆ. ಒಂದು ಶರೀರದ ನಂತರ ಮತ್ತೊಂದು ಶರೀರವನ್ನು ಹೊಂದುವ ಬಂಧನವನ್ನು ಬಿಡಿಸಿಕೊಂಡಿದ್ದೇನೆ. ಅಮೃತಪುತ್ರನೆ, ನೀನೂ ಅದನ್ನು ತಿಳಿ, ನೀನು ಬದ್ಧಾತ್ಮನಲ್ಲ, ಮುಕ್ತಾತ್ಮ. ನೀನು ದುಃಖಮಯ ಶರೀರವಲ್ಲ. ನೀನು ಆನಂದಮಯ. ಜಡಭೌತ ವಸ್ತುಗಳ ಸಂಯೋಗ ವಾದ, ಆ ಕಾರಣದಿಂದಲೇ ನಾಶಗೊಳ್ಳುವ ಪ್ರಕೃತಿ ನೀನಲ್ಲ. ನೀನು ನಿತ್ಯಾತ್ಮ ಎಂದು ಆನಂದದ ಸುದ್ದಿಯನ್ನು ಸಾರುತ್ತದೆ.

## ಧಾರ್ಮಿಕ ಅಂಶಗಳು

**ಅ) ಪ್ರಾರ್ಥನೆ:** ಈ '**ಅಭಯಂ ಪ್ರಾಪ್ತೋಽಸಿ ಜನಕ ಅಭಯಂ ವೈ ಬ್ರಹ್ಮ**' *(ಬೃ.ಉ.೪.೨.೪)* ಎಂಬ ಅಭಯ ಸ್ಥಿತಿ ಹೊಂದಲು ಅಗತ್ಯವಾದ ಸರ್ವವ್ಯಾಪಕವಾದ ಭಗವತ್ತತ್ತ್ವದ ಜ್ಞಾನ ಪಡೆಯಲು ಇರುವ ಪರಮ ಏಕೈಕ ಸಾಧನ ಆ ದೇವರ ದಯೆಯೊಂದೇ. ವ್ಯಕ್ತಿ ಆ ದಯೆಗೆ ಅರ್ಹನಾಗಬೇಕಾದರೆ ಅವನು ಪರಿಶುದ್ಧನಾಗಬೇಕು. ಪರಿಶುದ್ಧನಾಗಲು ಇರುವ ಸಾಧನ ಪ್ರಾರ್ಥನೆ. 'ದೇವರೇ ನೀನೇ ನಮ್ಮ ತಂದೆ ತಾಯಿ ಬಂಧು ಮಿತ್ರ ಎಲ್ಲಾ, ವಿಶ್ವದಲ್ಲಿ ಎಷ್ಟು ವಿಧಶಕ್ತಿಗಳಿವೆಯೋ ಆ ಎಲ್ಲ ವಿಧ ಶಕ್ತಿಯೂ ನೀನೆ. ಈ ಪ್ರಪಂಚದ ಸಂರಕ್ಷಣೆಯ ಹೊಣೆ ಹೊತ್ತಿ ರುವ ನಿನಗೆ ಈ ಜೀವ ಒಂದರ ರಕ್ಷಣೆ ಭಾರವಾಗುವುದೆ! ಈ ಮೋಹಜಾಲದಿಂದ, ಮಾಯಾಜಾಲದಿಂದ ಹೊರಬರಲು ಈ ಜೀವಕ್ಕೆ ಸಹಾಯ ಮಾಡು. ನಿನ್ನ ಕೈಗಳ ಆಸರೆಯು ನೀನು? ಎಂದು ವೇದಗಳು ಪ್ರಾರ್ಥಿಸುವ ಕ್ರಮದಲ್ಲಿ ಪ್ರಾರ್ಥಿಸಬೇಕು. 'ಹೇ ಜಗದೀಶ್ವರ ! ನನಗೆ ದ್ರವ್ಯ ಬೇಡ ಜ್ಞಾನ ಪಾಂಡಿತ್ಯ ಬೇಡ ಪ್ರತಿಫಲದ ಅಪೇಕ್ಷೆ ಇಲ್ಲದೆ ನಿಃಸ್ವಾರ್ಥಭಾವದಿಂದ ನಿನ್ನನ್ನು ಪ್ರೀತಿಸುವಂತೆ ಅನುಗ್ರಹಿಸು.

ಭಗವಂತ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುವನೆಂದು ಪ್ರೀತಿಸುವುದು, ನಾವು ಬೇಡಿದುದನ್ನು ಕೊಡದಿದ್ದಾಗ ಕೋಪ ಮಾಡಿಕೊಳ್ಳುವುದು ಮಾಡದೆ, ಅವನನ್ನು ಅವನಿಗಾಗಿಯೇ ಪ್ರೀತಿಸಬೇಕು — ಎನ್ನುತ್ತಾರೆ ಸ್ವಾಮೀಜಿ.

ಈ ರೀತಿಯ ಪ್ರಾರ್ಥನೆಯನ್ನು ನಿರಂತರ ಮಾಡುತ್ತಾ ಮಾಡುತ್ತಾ ಹೃದಯವು, ರಾಗ ದ್ವೇಷ ರಹಿತವಾದ ಪ್ರೇಮ, ಪ್ರೇಮ, ಪ್ರೇಮ, ನಿಷ್ಕಾಮ ಪ್ರೇಮವೊಂದರಿಂದ ತುಂಬಿ ಹೋಗುತ್ತದೆ. ಆಗ ಬಂಧನಗಳೆಲ್ಲಾ ಜಾರಿ ಹೋಗುತ್ತವೆ. ಪವಿತ್ರ ಜೀವಾತ್ಮ ತನ್ನ ಪವಿತ್ರವಾದ ನೆಲೆಯಲ್ಲಿ ಉಳಿಯುತ್ತದೆ. ಸುಖ-ದುಃಖ ಪಾಪ-ಪುಣ್ಯ ಕೀರ್ತಿ-ಅಪಕೀರ್ತಿ ಮೊದಲಾದ ದ್ವಂದ್ವ ಗಳು ಅದರ ಮೇಲೆ ತಮ್ಮ ಪ್ರಭಾವ ಬೀರಲಾರವು. ಆಗ ಪ್ರಕೃ ತಿಯ ನಿಯಮಗಳ ಆಳ್ವಿಕೆಗೆ ಜೀವಾತ್ಮ ಒಳಪಡುವುದಿಲ್ಲ. ಪ್ರಕೃತಿ ಯಿಲ್ಲದ, ಸರ್ವಾಂತರ್ಯಾಮಿಯಾದ ಪರತತ್ತ್ವದ ದರ್ಶನವನ್ನು ಜೀವಿ ಪಡೆಯುತ್ತಾನೆ. ಆಗ '**ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ**' *(ಮುಂಡಕ, ೨.೨.೮)* ಎಂಬಂತೆ ಹೃದಯ ವನ್ನು ಬಿಗಿಸುತ್ತಿದ್ದ ನಾನು ನನ್ನದು ಎಂಬ ಮಮಕಾರದ ಗಂಟು ಕತ್ತರಿಸಿ ಬಿದ್ದು ಹೋಗುತ್ತದೆ, ಇನ್ನು ರಾಗ-ದ್ವೇಷಗಳಿಗೆ ಎಲ್ಲಿ ಜಾಗ! ಏಕೆಂದರೆ ಈ ನಾನು ನನ್ನದೇ ಅವುಗಳಿಗೆ ಪ್ರೇರಕ ಪೋಷಕ ಶಕ್ತಿಗಳು. ಶರೀರ ನಾನೋ ಚೈತನ್ಯ ನಾನೋ ಮೊದಲಾದ ಎಲ್ಲಾ ಸಂಶಯಗಳೂ ದೂರವಾಗಿ ಹೋಗುತ್ತವೆ. ಏಕೆಂದರೆ ಎಲ್ಲದರಲ್ಲಿ ಅಣು ಅಣುವಾಗಿ ಇರುವ ಆ ಪರತತ್ತ್ವದ ಭಾನ ಎಲ್ಲೆಲ್ಲೂ ಆಗು ತ್ತಿರುತ್ತದೆ, ಹಾಗಾಗಿ ಭ್ರಮೆಗಳೆಲ್ಲಾ ಕೊಚ್ಚಿಹೋಗುತ್ತವೆ. ''ಭೌತಿಕ ವ್ಯಕ್ತಿತ್ವ ಎನ್ನುವುದು ಒಂದು ಭ್ರಾಂತಿ, ಅಖಂಡವಾದ ಭೌತ

ವಸ್ತುಗಳ ಅನಂತ ಸಾಗರದಲ್ಲಿ ಬದಲಾಗುತ್ತಿರುವ ಒಂದು ಭಾಗ ಮಾತ್ರ ಈ ದೇಹ ಎಂದು ವಿಜ್ಞಾನವೂ ಸಿದ್ಧಾಂತಗೊಳಿಸಿದೆ'' ಎನ್ನುತ್ತಾರೆ ಸ್ವಾಮೀಜಿ.

**ಆ) ವಿಗ್ರಹಾರಾಧನೆ:** ಸರ್ವವೂ ಆಗಿರುವ ಎಲ್ಲವನ್ನೂ ತುಂಬಿಕೊಂಡು ನಿಂತಿರುವ, ಎಲ್ಲವನ್ನು ಮೀರಿಯೂ ಇರುವ ಅದಲ್ಲದ್ದು ಅದರಿಂದ ಅಲ್ಲದ್ದು ಏನೂ ಇಲ್ಲ ಎಂದಿರುವ ಆ ಪರತತ್ತ್ವವನ್ನು ಕಲ್ಪಿಸಿಕೊಳ್ಳುವುದೇ ಕಷ್ಟ. ಹಾಗಿರುವಾಗ ಅದನ್ನು ಕುರಿತು ಧ್ಯಾನಿಸುವುದಾಗಲೀ ತಪಸ್ಸು ಮಾಡುವುದಾಗಲೀ ಊಹಿಸಿಕೊಳ್ಳಲಾಗದ್ದು. ಹೇಗೆ ಮಾನವ ಉಸಿರಾಡದೆ ಜೀವಿಸಲಾರನೋ ಹಾಗೆ ಪರತತ್ತ್ವಕ್ಕೆ ಒಂದು ರೂಪು ಕೊಡದೆ ಇರಲಾರ. ಬಾಹ್ಯ ವಿಗ್ರಹ(ರೂಪ) ಮಾನಸಿಕ ವಿಗ್ರಹವನ್ನು ನೆನಪಿಗೆ ತರುತ್ತದೆ. ಮಾನಸಿಕ ವಿಗ್ರಹ ಬಾಹ್ಯ ವಿಗ್ರಹವನ್ನು ನೆನಪಿಗೆ ತರುತ್ತದೆ. ಹಾಗಾಗಿ ಹಿಂದೂ ಪ್ರಾರ್ಥನೆ ಧ್ಯಾನ ಪೂಜೆ ಮೊದಲಾದ ಸಾಧನೆಗೆ ಒಂದು ಬಾಹ್ಯ ಪ್ರತೀಕದ ನೆರವನ್ನು ಬಯಸುತ್ತಾನೆ. ಯಾರಲ್ಲಿ ತಾನು ತನ್ನ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದಾನೋ ಆ ವಿಶ್ವಚೇತನದ ಮೇಲೆ ತನ್ನ ಮನಸ್ಸನ್ನು ಕೇಂದ್ರೀಕರಿಸಲು ಅದು ಸಹಾಯ ಮಾಡುತ್ತದೆ. ವಿಗ್ರಹವೇ ದೇವರಲ್ಲ ಎಂದು ಅವನಿಗೂ ಸುಸ್ಪಷ್ಟವಾಗಿ ಗೊತ್ತಿದೆ. ಮಣ್ಣಿನ ಕಣಕಣದಲ್ಲಿ , ವಾಯುವಿನ ಅಣುಅಣುವಿನಲ್ಲಿ, ಆಕಾಶದಲ್ಲಿ, ಸಕಲ ವಸ್ತುಗಳಲ್ಲಿ ಜಡಚೇತನಗಳಲ್ಲಿ ವ್ಯಾಪಿಸಿರುವ ಮಹತ್ತತ್ತ್ವದ ಪ್ರತೀಕ ಇದು ಎಂದು ಅವನು ಸುದೃಢವಾಗಿ ಬಲ್ಲ. ಸತ್ಯತ್ವ ಸರ್ವವ್ಯಾಪಕತ್ವ ಚಿದ್ಭಾವ ಆನಂದಾಮೃತ ನಿಲಯ ಮುಂತಾದ ವಿವಿಧ ಭಾವಗಳನ್ನು ವಿವಿಧ ವಿಗ್ರಹಗಳೊಂದಿಗೆ ಹಿಂದೂ ಹೊಂದಿಸಿಕೊಂಡಿದ್ದಾನೆ ಎಂದು ಸ್ವಾಮೀಜಿ ತಿಳಿಸುತ್ತಾರೆ.

**ಇ) ವೈವಿಧ್ಯತೆಯಲ್ಲಿ ಏಕತೆ:** ಹಾಗಾಗಿ ಅವನು ಯಾವುದೇ ದೇವಾಲಯದಲ್ಲಿ,ಯಾವುದೇ ವಿಗ್ರಹದ ಮುಂದೆ ನಿಂತುಕೊಳ್ಳಲಿ ಅಲ್ಲಿ ಅದರಲ್ಲಿ ಅವನು ಅನಂತ ಅಮರ ಅಮೋಘ ಸರ್ವವ್ಯಾಪಕತ್ವ ಮೊದಲಾದ ಅನಂತಕಲ್ಯಾಣಗುಣಗಳನ್ನು ಕಂಡು ಅದನ್ನು ಪೂಜಿಸುತ್ತಾನೆ, ಸ್ತೋತ್ರ ಮಾಡುತ್ತಾನೆ, ಕೊಂಡಾಡುತ್ತಾನೆ. ವೈವಿಧ್ಯದಲ್ಲಿ ಏಕತೆ ಪ್ರಕೃತಿ ರೂಪಿಸಿರುವ ಯೋಜನೆ. ಇದನ್ನು ಹಿಂದೂ ತಿಳಿದುಕೊಂಡಿದ್ದಾನೆ. ಒಂದೊಂದು ಜೀವಿಯ ಕಣ್ಣು ಒಂದೊಂದು ಆಕಾರ, ಗಾತ್ರ ಇತ್ಯಾದಿ ಹೊಂದಿರುತ್ತದೆ. ಹಾಗಾಗಿ ಪ್ರಪಂಚದಲ್ಲಿ ಎಷ್ಟು ಬಗೆ ಜೀವಿಗಳಿವೆಯೋ ಅಷ್ಟು ಬಗೆ ಕಣ್ಣಿದೆ. ಅದು ಎಣಿಕೆಗೆ ಸಿಗದಷ್ಟು ಪ್ರಭೇದಗಳನ್ನು ಹೊಂದಿದೆ. ಆದರೆ ಈ ಎಲ್ಲಾ (ಕೋಟಿ ಕೋಟಿ ಸಂಖ್ಯೆಯ) ಕಣ್ಣುಗಳೂ ಮಾಡುವುದು ಒಂದೇ ಕೆಲಸ 'ನೋಡುವುದು'. ಆ ಕ್ರಿಯೆಗೆ, ಅನುಸರಿಸುವ ವಿಧಾನವೂ ಒಂದೇ ಕಣ್ಣು ವಸ್ತುವಿನ (ಪುಸ್ತಕ, ತಿಂಡಿ ...) ಸಂಪರ್ಕಕ್ಕೆ ಬರುತ್ತದೆ. ಕಣ್ಣಿನಿಂದ ಹೊರಟ ಕಿರಣ ಅದರ ವ್ಯಾಪ್ತಿಯಲ್ಲಿರುವ ವಸ್ತುವನ್ನು ಸುತ್ತುಕಟ್ಟುತ್ತದೆ. ಆ ಚಿತ್ರವನ್ನು ಕಣ್ಣಿನೊಳಗಡೆ (ರೆಟಿನಾ) ಪರದೆಯ ಮೇಲೆ ಪ್ರತಿಬಿಂಬಿಸುತ್ತದೆ. ಬುದ್ಧಿಯಲ್ಲಿ ಆ ವಸ್ತು ಯಾವುದೆಂದು ನಿಶ್ಚಯವಾಗುತ್ತದೆ. ಹೀಗೆ ವೈವಿಧ್ಯತೆಯಲ್ಲಿ ಏಕತೆ ಇದೆ. ಅದನ್ನು ಸಾಕ್ಷಾತ್ಕರಿಸಿಕೊಳ್ಳಲು ಆಧ್ಯಾತ್ಮಿಕ ಸತ್ಯವನ್ನು ಗ್ರಹಿಸಲು ತನ್ನ ಭಾವನೆಯನ್ನು ಆತುಕೊಳ್ಳಲು ಇರುವ ಗೂಟ ಮಾತ್ರ ಈ ವಿಗ್ರಹ ಇತ್ಯಾದಿ ಸಂಕೇತಗಳು.

**ಈ) ಬಹುದೇವತಾರಾಧನೆ:** ಪ್ರತಿಯೊಬ್ಬ ವ್ಯಕ್ತಿಯ ಅರಿವಿನ ಮಟ್ಟ, ಹೃದಯ ಸಂಸ್ಕಾರ, ಗ್ರಹಣ ಧಾರಣ ಸ್ಮರಣ ಸಾಮರ್ಥ್ಯ ವ್ಯಕ್ತಿ ವ್ಯಕ್ತಿಗೆ ಭಿನ್ನವಾಗುತ್ತದೆ. ಅದರಲ್ಲಿ ವಿವಿಧ ಅಂಶಗಳು ಪಾತ್ರ ವಹಿಸುತ್ತವೆ. ಹಾಗಾಗಿ ಯಾವ ವ್ಯಕ್ತಿಗೆ ಯಾವ ರೂಪ ಯಾವ ಆಕಾರ ಯಾವ ನಾಮ ಕೇಳಿದಾಗ ಹೃದಯ ದ್ರವಿಸುವುದೋ ಅಂತರಂಗದಲ್ಲಿ ಆರ್ದ್ರತೆ ಉಂಟಾಗುವುದೋ ಅದನ್ನು 'ಕಾಣದೆ ನಿಲ್ಲಲಾರೆ'ನೆಂಬ ತೀವ್ರ ವ್ಯಾಕುಲತೆ ಹಂಬಲ ಉಂಟಾಗುವುದೋ, ಅವನವನು ಆಯಾಯ ರೂಪ ನಾಮ ಆಕೃತಿಗಳನ್ನು ತನ್ನ ಸಾಧನೆಗೆ ಅಂಗವಾಗಿ ಸ್ವೀಕರಿಸಲು ಮುಕ್ತ ಅವಕಾಶವನ್ನು ಕೊಡುತ್ತದೆ ಹಿಂದೂಧರ್ಮ. ಆದುದರಿಂದಲೇ ಇಲ್ಲಿ ನೂರಾರು ಸಂಖ್ಯೆಯ ದೇವರು, ಅವುಗಳನ್ನು ಆರಾಧಿಸುವ ಕ್ರಮಗಳೂ ನೂರಾರು, ವಿಧಿವಿಧಾನ ಉಪಾಸನೆಗಳೂ ನೂರಾರು. ಇದು ವ್ಯಕ್ತಿ ತನ್ನ ದಿವ್ಯಸ್ವರೂಪವನ್ನು ಕಂಡುಕೊಳ್ಳುವ ಸಾಧನ ಮಾತ್ರ. ಅದಕ್ಕೆ ಸಹಾಯಕವಾಗುವ ಧ್ಯಾನಾವಸ್ಥೆಯನ್ನು ಹೊಂದಲು ಇರುವ ವಿವಿಧ ಮೆಟ್ಟಿಲುಗಳು ಮಾತ್ರ. ಜೀವಿ ಕ್ರಮವಾಗಿ ಇವುಗಳನ್ನು ಏರುತ್ತಾ ಗುರಿಯೆಡೆಗೆ ಸಾಗುವನು.

ಒಬ್ಬ ವ್ಯಕ್ತಿಗೆ ಒಂದು ದಿನಸಿ ಅಂಗಡಿಯಲ್ಲಿ ಒಬ್ಬ ವೈದ್ಯನಲ್ಲಿ ಒಬ್ಬ ತರಕಾರಿಯವನಲ್ಲಿ ವಿಶ್ವಾಸ ಇರುತ್ತದೆ. ಕಷ್ಟವಾದರೂ ದೂರವಾದರೂ ಸಮಯವಿಲ್ಲದಿದ್ದರೂ ಅವನು ಅಲ್ಲಿಗೇ ಹೋಗುತ್ತಾನೆ. ಅದೇ ಮತ್ತೊಬ್ಬ! ಆ ವ್ಯಕ್ತಿಗೆ ಹತ್ತಿರದ ಸಂಬಂಧಿಯೋ ನೆರೆಯವನೋ ಆಗಿದ್ದರೂ - ಅವನು ಬೇರೊಬ್ಬನನ್ನು ಅರಸಿ ಹೋಗುತ್ತಾನೆ. ಈ ನಡೆ ಎಲ್ಲರ ಗಮನಕ್ಕೆ ಬಂದಿರುತ್ತದೆ. ಇದಕ್ಕೆ ಕಾರಣವೇನು? ಗೊತ್ತಿಲ್ಲ. ಹೀಗೆ ವ್ಯಕ್ತಿ ವ್ಯಕ್ತಿಗಳನ್ನು ಒಗ್ಗೂಡಿಸಿ ಬಂಧಿಸುವುದು ವಿಭಜಿಸಿ ದೂರಮಾಡುವುದು — ಯಾವುದೋ ಒಂದು — **'ವ್ಯತಿಷಜತಿ ಪದಾರ್ಥಾನಾಂತರಃ ಕೋಽಪಿ ಹೇತುಃ'**. ಇದೇ ನಿಯಮ ಆಧ್ಯಾತ್ಮಿಕ ಸಾಧನೆ ಉಪಾಸನೆಗಳ ಪ್ರತೀಕಕ್ಕೂ ಅನ್ವಯಿಸುತ್ತದೆ. ಆ ಆಕಾರ ರೂಪ ಯಾವುದೇ ಆಗಿರಲಿ ಅದು ಮಾತ್ರ ಸರ್ವವ್ಯಾಪಕ ಸರ್ವನಿಯಾಮಕ ಸರ್ವ ಪ್ರೇರಕ ಇತ್ಯಾದಿ ಗುಣವುಳ್ಳದ್ದು ಪರಮವೂ ಆಗಿರುತ್ತದೆ.

**ಉಪಸಂಹಾರ : 'ಭಗವತ್ಪ್ರಾಪ್ತ್ಯೈಕ ಪ್ರಯೋಜನಂ'** ಅನಂತ ಶಕ್ತಿಯಾದ ಪರತತ್ತ್ವವನ್ನು ಪಡೆಯುವುದೇ ಶರೀರಲಾಭದ ಪರಮ ಪ್ರಯೋಜನ. ಅದಕ್ಕಾಗಿ ಶೀಲವನ್ನು ರೂಢಿಸಿಕೊಳ್ಳುವುದು, ಇತರರಿಗೆ ಶಾಂತಿ ನೀಡಲು ತಾನು ಶಾಂತಿ ಪಡೆಯುವುದು

– ಪ್ರತಿಯೊಬ್ಬ ಮನುಷ್ಯನ ಸ್ವಭಾವ ಮತ್ತು ಆತನ ಆಜನ್ಮಸಿದ್ಧ ಹಕ್ಕು ಎಂದು ಎಲ್ಲಾ ವೇದ ವೇದಾಂತ ಶಾಸ್ತ್ರಗ್ರಂಥಗಳೂ ಘೋಷಿಸಿವೆ. ಅದನ್ನು ಸಾಧಿಸಲು ಇರುವ ಕ್ರಿಯೋತ್ತೇಜಕ ಪ್ರೇರಕ ಶಕ್ತಿ 'ಧರ್ಮ'. ಇದು ಮಾನವನ ಅಂತರಾಳದಲ್ಲಿ ಕೆಲಸ ಮಾಡುತ್ತಿರುವ ಅದ್ಭುತ ರಹಸ್ಯಗಳ ಮರ್ಮಗಳನ್ನು ಬಿಡಿಸಿ ತೋರಿಸುವುದು. ತನ್ಮೂಲಕ ಅವನನ್ನು ಮುಕ್ತಾತ್ಮನನ್ನಾಗಿ ಪವಿತ್ರಾತ್ಮನನ್ನಾಗಿ ಮಾಡುವುದು.

**ಹಿಂದೂಧರ್ಮದ ಮಹಿಮೆ:** ಎಲ್ಲಾ ಮತಧರ್ಮಗಳೂ ಇದನ್ನು ಮಾಡುವುದರಿಂದ ಹಿಂದೂ ಎಲ್ಲಾ ಧರ್ಮಗಳನ್ನೂ ನಂಬುತ್ತಾನೆ ಮತ್ತು ಗೌರವಿಸುತ್ತಾನೆ. ಆಕಾಶದಿಂದ ಬಿದ್ದ ಪ್ರತಿಯೊಂದು ಹನಿ ನೀರೂ ಸಮುದ್ರವನ್ನೇ ಸೇರುವಂತೆ ಪ್ರತಿಯೊಂದು ಧರ್ಮವೂ ಅಲ್ಲಿ ಬೋಧಿಸಿರುವ ಪ್ರತಿಯೊಂದು ಆಚರಣೆಯೂ ಒಂದೇ ಗುರಿಯೆಡೆಗೆ ಸಾಗುತ್ತದೆ. ವಾತಾವರಣ ಪರಿಸ್ಥಿತಿ ಸಂದರ್ಭಗಳು ವಿಭಿನ್ನವಾದರೂ ಅವು ಒಂದೇ ಗುರಿಯನ್ನು ತಲುಪುವುವು ಎಂಬ ಪೂರ್ಣ ಭರವಸೆ ಹಿಂದೂವಿನದು. ಒಂದೇ ದಾರದಲ್ಲಿ ಪೋಣಿಸಲ್ಪಟ್ಟ ನಾನಾ ಬಣ್ಣದ ರತ್ನಮಣಿಗಳಂತೆ ಭಗವಂತ ಎಂಬ ಸೂತ್ರದಲ್ಲಿ ಎಲ್ಲಾ ಧರ್ಮಗಳೂ ಪೋಣಿಸಲ್ಪಟ್ಟಿವೆ ಎಂದು ಆತ ಭಾವಿಸುತ್ತಾನೆ — ಎಂದು ತಿಳಿಸುತ್ತಾ ಸ್ವಾಮೀಜಿ ಹಿಂದೂಧರ್ಮದ ಪರಮ ಔನ್ನತ್ಯವನ್ನೂ ವೈಶಾಲ್ಯವನ್ನೂ ಜಗದ ಮುಂದೆ ತೆರೆದಿಟ್ಟಿದ್ದಾರೆ.

## ನಾ ಕಂಡ ಸ್ವಾಮೀಜಿ

ಈ ಅದ್ಭುತ ವ್ಯಕ್ತಿಯಿಂದ ಹೊರಹೊಮ್ಮಿದ ಶಕ್ತಿ ಅದೆಷ್ಟು ಹಿರಿದಾದುದೆಂದರೆ ಯಾರಿಗೂ ಅದನ್ನು ತಡೆಯಲಾಗಲಿಲ್ಲ. ಎಲ್ಲರನ್ನೂ ಅಪ್ರತಿಭರನ್ನಾಗಿಸಿತು. ಎಲ್ಲವನ್ನೂ ಕೊಚ್ಚಿಕೊಂಡು ಹೊಗುವಂತಿತ್ತು. ಇದು ಮೊದಲ ಕ್ಷಣದಲ್ಲೇ ಎಲ್ಲರಿಗೂ ವೇದ್ಯವಾಯಿತು. ಮುಂದೆ ಈ ಶಕ್ತಿ ಕೆಲಸ ಮಾಡುವುದನ್ನು ನೋಡಿದೆವು. ಆ ಅದ್ಭುತ ಮನಃಶಕ್ತಿಯನ್ನು ವರ್ಣಿಸುವ ಶಬ್ದವಿದ್ದೀತೆ! ಆ ಮನಸ್ಸಿನ ಪ್ರಕೃತಿಯೇ ಬೇರೆ, ಎಂಥ ಪ್ರತಿಭಾನ್ವಿತರ ಮನಸ್ಸನ್ನೂ ಮೀರಿದುದು ಅದು. ಅವರ ಭಾವನೆಗಳು ಎಷ್ಟೊಂದು ಸುಸ್ಪಷ್ಟವೂ ಶಕ್ತಿಯುತವೂ ಅಪ್ರಾಕೃತವೂ ಆಗಿದ್ದವೆಂದರೆ ಅವು ಸಾಮಾನ್ಯ ವ್ಯಕ್ತಿಯ ಬುದ್ಧಿಯಿಂದ ಹೊರಹೊಮ್ಮಿದವೆಂದು ನಂಬುವುದು ಅಸಾಧ್ಯವಾಗಿತ್ತು. ಆ ಭಾವನೆಗಳು ಎಷ್ಟೇ ಅಮೋಘವಾಗಿರಲಿ ಮತ್ತು ಆ ಬುದ್ಧಿಗೆ ಎಟುಕದ ಶಕ್ತಿ ಅದೆಷ್ಟೇ ಅದ್ಭುತವಾಗಿರಲಿ, ವಿಚಿತ್ರವೆಂದರೆ, ಅದೆಲ್ಲ ತುಂಬ ಪರಿಚಿತವೆನಿಸಿತು. ಈ ಮನಸ್ಸನ್ನು ನಾನು ಮೊದಲೇ ತಿಳಿದಿರುವೆ ಎಂದೆನಿಸಿತು ನನಗೆ. ರವಿ ಕಿರಣವನ್ನೇ ತನ್ನಲ್ಲಿ ಹಿಡಿದಿರಿಸಿಕೊಂಡ ಅತ್ಯುಜ್ವಲ ಅಗ್ನಿ ಗೋಲಕದಂತೆ ಅವರು ನಮ್ಮ ಮೇಲೆ ಎರಗಿದರು.

— ಸಿಸ್ಟರ್ ಕ್ರಿಸ್ಟೈನ್

*('ಸ್ವಾಮಿ ವಿವೇಕಾನಂದರ ದಿವ್ಯಸ್ಮೃತಿ', ಪು.೧೩೬)*

# ಚಿಕಾಗೋ ವಿಶ್ವಧರ್ಮ ಸಮ್ಮೇಳನದಲ್ಲಿ ಹಿಂದೂಧರ್ಮದ ಪುನರುತ್ಥಾನ

**ಸ್ವಾಮಿ ಮಂಗಳನಾಥಾನಂದ**

**ಚಿಕಾಗೋ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ಹಿಂದೂ ಧರ್ಮವನ್ನೇ ಸೃಷ್ಟಿಸಿದರು ಎಂದು ಸೋದರಿ ನಿವೇದಿತಾ ಬರೆಯುತ್ತಾಳೆ. ಒಂದರ್ಥದಲ್ಲಿ ಈ ಭಾಷಣಗಳಿಂದ ಹಿಂದೂಧರ್ಮದ ಪುನರುತ್ಥಾನ ಸಾಧ್ಯವಾಯಿತು ಎನ್ನಬೇಕು. ಈವಿಚಾರಗಳನ್ನು ಕುರಿತು ವಿಶ್ಲೇಷಿಸಿರುವ ಲೇಖಕರು ಬೆಂಗಳೂರು ರಾಮಕೃಷ್ಣ ಮಠದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಉತ್ತಮ ಭಾಷಣಕಾರರೂ, ಬರಹಗಾರರೂ ಆಗಿರುವ ಅವರ ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

ಶ್ರೀರಾಮಕೃಷ್ಣರ ಮಹಾಸಮಾಧಿಯ ನಂತರ, ನರೇಂದ್ರನಾಥ ಶ್ರೀರಾಮಕೃಷ್ಣರ ಮಿಕ್ಕ ಯುವ ಶಿಷ್ಯರೊಂದಿಗೆ ಸಂನ್ಯಾಸ ಸ್ವೀಕರಿಸಿ, ಸ್ವಾಮಿ ವಿವೇಕಾನಂದನೆಂಬ ನಾಮಧೇಯದೊಂದಿಗೆ ಪರಿವ್ರಾಜಕನಂತೆ ಭಾರತದ ಪರ್ಯಟನೆಗೆ ಹೊರಟು ನಿಂತ, ಯಾವ ಭಾವದಲ್ಲಿ?! ಮುಂದೆ ಅವರೇ ಅಮೆರಿಕಾದಲ್ಲಿ ಬರೆದ ಕವನದಲ್ಲಿ ಹೀಗೆ ವರ್ಣಿಸಿದ್ದಾರೆ. (‘ಸಂನ್ಯಾಸಿ ಗೀತೆ’):

ಇರುವುದೊಂದೇ ! ನಿತ್ಯಮುಕ್ತನು, ಸರ್ವಜ್ಞಾನಿಯು ಆತ್ಮನು!..
ನಿನ್ನ ಕೈಲಿದೆ ನಿನ್ನ ಬಿಗಿದಿಹ ಕಬ್ಬಿಣದ ಯಮಪಾಶವು;
ಬರಿದೆ ಶೋಕಿಪುದೇಕೆ? ಬಿಡು, ಬಿಡು ! ನಿನಗೆ ನೀನೇ ಮೋಸವು!
ಬೇಡ, ಪಾಶವ ಕಡಿದು ಕೈಬಿಡು ! ಹಾಡು ಸಂನ್ಯಾಸಿ —
ಓಂ ! ತತ್ ಸತ್ ಓಂ!

*(ಅನುವಾದ ಕುವೆಂಪು)*

ಭಾರತದ ಸಂಚಾರ ಮಾಡುತ್ತ ಮಾಡುತ್ತ ಅವರು ಕನ್ಯಾಕುಮಾರಿಗೆ ಬಂದರು. ಅವರಿಗೆ ಅಮೆರಿಕೆಗೆ ಹೋಗುವ ಸ್ಪಷ್ಟವಾದ ನಿಲುವು ದೊರೆತದ್ದೆ ಕನ್ಯಾಕುಮಾರಿಯಲ್ಲಿ. ಆ ಕನ್ಯಾಕುಮಾರಿಯ ತುತ್ತತುದಿಯ, ಸಮುದ್ರ ಮಧ್ಯದಲ್ಲಿರುವ ಬಂಡೆಯ ಮೇಲೆ ಕುಳಿತು ಮೂರು ಹಗಲು, ಮೂರು ರಾತ್ರಿ ‘‘ಭಾರತದ’’ ಮೇಲೆ ಧ್ಯಾನಿಸುತ್ತ ಸ್ವತಃ ತಾವೇ ‘‘ಭಾರತಘನ’’ (Condensed India) ವಾದರು. ದೇವಿ ಜಗನ್ಮಾತೆಯಲ್ಲಿ ಅವರ ಆಂತರಿಕ ಪ್ರಾರ್ಥನೆ, ‘‘ಹೇ ಜಗನ್ಮಾತೆ, ನನಗೆ ಸ್ವರ್ಗ ಬೇಡ, ಮುಕ್ತಿ ಬೇಡ, ನನ್ನ ಭಾರತದ ಕೋಟಿ ಕೋಟಿ ದೀನ-ದಲಿತ ದರಿದ್ರರನ್ನು ಮೇಲೆತ್ತುವ ಮಾರ್ಗ ತೋರು!’’ ಎಂದು.

ಭಾರತದ ಉದ್ಧಾರಕ್ಕಾಗಿ ಮಾರ್ಗವನ್ನು ಹುಡುಕುತ್ತ ‘‘ವಿಶ್ವ ಧರ್ಮ ಸಮ್ಮೇಳನದಲ್ಲಿ’’ ಭಾಗವಹಿಸಿದರು. ಸ್ವಾಮಿ ವಿವೇಕಾನಂದರು ಮಾಡಿದ ಆ ಉಪನ್ಯಾಸಗಳು ಹಿಂದೂಧರ್ಮದ ಪುನರುತ್ಥಾನಕ್ಕೂ ಕಾರಣವಾಯಿತು.

ಹಿಂದೂ ಧರ್ಮದ ಪುನರುತ್ಥಾನವನ್ನು ಅರಿಯುವ ಮುನ್ನ, ಹಿಂದೂಧರ್ಮವೆಂದರೇನು? ಎಂದು ಅರಿಯಬೇಕು. ಹಿಂದು ಧರ್ಮವೆಂದರೆ ವೇದೋಕ್ತ ಧರ್ಮವು, ಸನಾತನ ಧರ್ಮವು. ಜಾತಿ-ಭೇದವರಿಯದ ‘‘**ಸರ್ವಂ ಖಲ್ವಿದಂ ಬ್ರಹ್ಮ**’’ ಎಂದು ಸಾರಿದ ಧರ್ಮ. ಜಗತ್ತಿಗೇ ‘‘**ಏಕಂ ಸತ್ ವಿಪ್ರಾಃ ಬಹುಧಾ ವದಂತಿ**’’ ಎಂದು ತಿಳಿಸಿಕೊಟ್ಟ ಧರ್ಮ. ಋಷಿಗಳು ತೋರಿಸಿಕೊಟ್ಟ, ಅನುಭವ ಆಧಾರಿತ ಧರ್ಮ. ಇಂತಹ ಧರ್ಮವು ಸ್ವಾತಂತ್ರ್ಯಪೂರ್ವದಲ್ಲಿ, ದಿವ್ಯತ್ರಯರು ಅವತರಿಸುವ ಕಾಲದಲ್ಲಿ, ಹಿಂದೂಧರ್ಮವು ಮತ-ಪಂಥಗಳಲ್ಲಿ ಸಿಲುಕಿ, ಜಾತಿ ಪದ್ಧತಿಯಲ್ಲಿ ಜಾತಿ, ಧರ್ಮಕ್ಕಿಂತ ಆಚರಣೆಯೇ ಶ್ರೇಷ್ಠವೆಂದು ಭಾವಿಸಿ, ಆಂಗ್ಲರ, ಪರಕೀಯರ ದಾಳಿಯಲ್ಲಿ ಸಿಲುಕಿ ತನ್ನತನವನ್ನು ಕಳೆದುಕೊಂಡಿತ್ತು .

ಧರ್ಮದ ಅವನತಿ ಮತ್ತು ಅದರ ಪುನರುತ್ಥಾನವನ್ನು ಅರಿಯಬೇಕಾದರೆ ಮುಖ್ಯವಾಗಿ ನಾವು, ಐತಿಹಾಸಿಕ, ಸಾಮಾಜಿಕ, ರಾಜಕೀಯ ಹಾಗೂ ವೇದ-ಧರ್ಮಗಳ ಬಗ್ಗೆ ತಿಳಿದಿರಬೇಕು. ಇವುಗಳ ವಿಚಾರವನ್ನು ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲು ಪ್ರಯತ್ನಿಸಿದೆ.

ಆದಿಶಂಕರರು ತಮ್ಮ ಗೀತಾಭಾಷ್ಯದಲ್ಲಿ ಹೇಳುವಂತೆ :

**''..ದೀರ್ಘೇಣ ಕಾಲೇನ ಅನುಷ್ಠಾತೃಣಾಂ ಕಾಮೋದ್ಭವಾತ್ ಹೀಯಮಾನ-ವಿವೇಕವಿಜ್ಞಾನಹೇತುಕೇನ ಅಧರ್ಮೇಣ ಅಭಿಭೂಯಮಾನೇ ಧರ್ಮೇ ಪ್ರವರ್ಧಮಾನೇ ಚ ಅಧರ್ಮೇ...''**

''...ಬಹುಕಾಲದ ಮೇಲೆ ಇದನ್ನು (ಧರ್ಮವನ್ನು) ಅನುಷ್ಠಾನ ಮಾಡುವವರಿಗೆ ಕಾಮವುಂಟಾಗಿ ವಿವೇಕಜ್ಞಾನವು ಹೋದದ್ದರಿಂದ ಉಂಟಾದ ಅಧರ್ಮದಿಂದ ಧರ್ಮವು ಮುಚ್ಚಿಹೋಗಿ, ಅಧರ್ಮವು ಹೆಚ್ಚುತ್ತಾ ಬರಲಾಗಿ...'' ಎಂದು ವಿವರಿಸಿದ್ದಾರೆ.

ಸ್ವಾಮಿ ವಿವೇಕಾನಂದರು ಅವತರಿಸುವ ಕಾಲದಲ್ಲಿ ಭಾರತ ಮತ್ತು ಅಮೆರಿಕದ ಸಾಮಾಜಿಕ ಪರಿಸ್ಥಿತಿಯನ್ನು ನೋಡಬೇಕು.

**ಅಂದಿನ ಭಾರತ :**

ಶ್ರೀರಾಮಕೃಷ್ಣರ ಜೀವನವನ್ನು ಓದಿದರೆ ನಮಗೆ ಮತ-ಪಂಥಗಳಲ್ಲಿ ಸಮನ್ವಯ ಇಲ್ಲದಿರುವುದು ಗೋಚರಿಸುತ್ತದೆ. ವೇದಾಂತ ಮಾರ್ಗದಲ್ಲಿ ಗುರುವಾಗಿ ಬಂದ ತೋತಾಪುರಿಯು, ಶ್ರೀರಾಮಕೃಷ್ಣರು ಕೈತಟ್ಟುತ್ತ ಭಗವಂತನ ನಾಮಸ್ಮರಣೆಯನ್ನು ಮಾಡುತ್ತಿದ್ದರೆ — ''ರೊಟ್ಟಿಯನ್ನು ತಟ್ಟುತ್ತಿದ್ದೀಯ'' ಎಂದು ಲೇವಡಿ ಮಾಡುತ್ತಿದ್ದ! ಆ ಕಡೆ ಭೈರವಿ ಬ್ರಾಹ್ಮಣಿ ಶ್ರೀರಾಮಕೃಷ್ಣರಿಗೆ ತೋತಾಪುರಿಯೊಂದಿಗೆ ಹೆಚ್ಚು ಸಂಪರ್ಕವಿರುವಂತೆ ಎಚ್ಚರಿಸುತ್ತಾಳೆ. ಏಕೆಂದರೆ ಭಕ್ತನಾದ ಈತ ಶುಷ್ಕನಾಗಿಬಿಡುತ್ತಾನೆ ಎಂದು! ಎಂತಹ ಅದ್ಭುತ ಸಾಧನೆ ಮಾಡಿ, ಸಿದ್ಧಿಯನ್ನು ಪಡೆದ ಇಂತಹ ಮಹಾತ್ಮರ ಜೀವನದಲ್ಲೇ ಹೀಗಿರುವಾಗ ಸಾಮಾನ್ಯರ ಪಾಡೇನು?

ಸ್ವಯಂ ಸ್ವಾಮಿ ವಿವೇಕಾನಂದರೇ ಹೇಳುವಂತೆ: ''ಕಾಲಕ್ರಮೇಣ ಆರ್ಯ ಜನಾಂಗದವರು ಸದಾಚಾರದಿಂದ ವಿಮುಖರಾದರು, ವೈರಾಗ್ಯವನ್ನು ಕಳೆದುಕೊಂಡರು, ಲೋಕಾಚಾರಗಳಿಗೆ ಬದ್ಧರಾಗಿ ಬುದ್ಧಿಸೂಕ್ಷ್ಮತೆಯನ್ನು ಕಳೆದುಕೊಂಡರು. ಅವರಿಗೆ ಪುರಾಣಗಳ ಅಂತರಾರ್ಥವನ್ನು ತಿಳಿಯಲಾಗಲಿಲ್ಲ. ಅವು ವಿವಿಧ ಭಗವದ್‌ಭಾವಗಳನ್ನು ಬೋಧಿಸುವುದರಿಂದ ಮತ್ತು ಜನಸಾಮಾನ್ಯರಿಗೆ ಅರ್ಥವಾಗುವಂತೆ ಸೂಕ್ಷ್ಮತತ್ತ್ವಗಳನ್ನು ಸ್ಥೂಲರೂಪಗಳಲ್ಲಿ ವಿವರಿಸುವುದು. ಅವು ಪರಸ್ಪರ ವಿರುದ್ಧವಾಗಿ ಕಾಣತೊಡಗಿದವು. ಆದ್ದರಿಂದ ಅವರು ಧಾರ್ಮಿಕ ಭಾವಗಳಿಂದ ಕೂಡಿದ ಸಮಗ್ರವಾದ ಸನಾತನ ಧರ್ಮವನ್ನು ಅಸಂಖ್ಯ ಮತಗಳಾಗಿ ವಿಚ್ಛಿದ್ರಗೊಳಿಸಿದರು. ಮತೀಯ ದ್ವೇಷ ಅಸೂಯೆಯ ಬೆಂಕಿಯನ್ನು ಹೊತ್ತಿಸಿ ಪರಸ್ಪರರನ್ನು ಆ ಬೆಂಕಿಗೆ ತಳ್ಳಲು ಪ್ರಯತ್ನಿಸಿದರು.'' *('ಶ್ರೀರಾಮಕೃಷ್ಣ ಲೀಲಾಪ್ರಸಂಗ', ಭಾಗ ೧, ಪು. ૩೫೪)*

ಮಹೇಂದ್ರನಾಥ ದತ್ತ ''ಶ್ರೀರಾಮಕೃಷ್ಣೇರ್ ಅನುಧ್ಯಾನ್'' ಪುಸ್ತಕದಲ್ಲಿ ಅಂದಿನ ಬಂಗಾಳದ ಬಗ್ಗೆ ಬರೆಯುತ್ತಾನೆ: ''ಶಾಕ್ತರು ಎಂದಿಗೂ ಭಾಗವತವನ್ನು ಓದುತ್ತಿರಲಿಲ್ಲ. ಶಾಕ್ತ ಅರ್ಚಕರು ಭಾಗವತವನ್ನು ಓದುವುದೆಂದರೆ ಅದೊಂದು ಹೀನವಾದ ಕಾರ್ಯ ಎಂದು ಭಾವಿಸಿದ್ದರು. ಅಂತೆಯೇ ವೈಷ್ಣವರು ಶಾಕ್ತ ತಂತ್ರದ ಮೇಲೆ ಈ ಭಾವನೆಯನ್ನು ತಾಳಿದ್ದರು. ಹಿಂದೂ ಶಾಸ್ತ್ರಗಳ ಗ್ರಂಥಗಳು ಸಾಮಾನ್ಯವಾಗಿ ಲಭ್ಯವಿರಲಿಲ್ಲ. ಕೇವಲ ಏಸುಕ್ರಿಸ್ತನ ಕಥೆಗಳು ಮತ್ತು ಬೈಬಲ್ ಎಲ್ಲೆಡೆಯೂ ಲಭ್ಯವಾಗಿತ್ತು. ಸಾಮಾನ್ಯ ಜನರಿಗೆ ಕ್ರೈಸ್ತಮತವನ್ನು ಒಪ್ಪಲು ಮನಸ್ಸಿರಲಿಲ್ಲ, ವೇದಾಂತದ ನಿರ್ಗುಣ-ನಿರಾಕಾರ ಬ್ರಹ್ಮನ ತತ್ತ್ವ ಮನಸ್ಸಿಗೆ ಎಟಕುತ್ತಿರಲಿಲ್ಲ. ಜೊತೆಗೆ ಮೂವತ್ತು ಮೂರು ಕೋಟಿ ದೇವತೆಗಳ ಆರಾಧನೆ ಅರಿವಾಗುತ್ತಿಲ್ಲ'' ಎಂದು ವಿವರಿಸಿದ್ದಾನೆ.

''ವಿಶ್ವಚೈತನ್ಯ ಶ್ರೀರಾಮಕೃಷ್ಣ'' ಎಂಬ ಗ್ರಂಥದಲ್ಲಿ ಹೀಗೆ ಬರೆಯುತ್ತಾರೆ: ''The educated rich and upper middle class people of the society mainly of urban area began to imitate blindly the ways of the west which often stood diametrically opposite to the standing culture in vogue... what does Hindu-religion stands for appered to be guito vague and obsecure even to the educated of the society.''

ರಾಜಕೀಯ ಸ್ವಾತಂತ್ರ್ಯವನ್ನು ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತವು ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡು, ಪರಕೀಯರ ನೂರಾರು ವರ್ಷದ ದಾಳಿಗೆ, ಪ್ರಭಾವಕ್ಕೆ ಒಳಗಾಗಿ, ಸಾಮಾಜಿಕ-ಧಾರ್ಮಿಕ ಸಂಘಗಳು (ಬ್ರಾಹ್ಮಸಮಾಜ ಇತ್ಯಾದಿ) ಮೂರ್ತಿಪೂಜೆಗೆ, ಹಿಂದೂ ಆಚರಣೆಗಳಿಗೆ ವಿರುದ್ಧವಾಗಿ ಬೋಧಿಸುತ್ತಿರುವಂತಹ ಕಾಲವಾಗಿತ್ತು. ನಿಜವಾಗಿಯೂ ದೇಶವು ದ್ವಂದ್ವದಲ್ಲಿ ಸಿಲುಕಿತ್ತು.

**ಅಮೆರಿಕದಲ್ಲಿ :**

ಲಿಯೋನ್ ಲಾಂಡ್‌ಬರ್ಗ್ ಒಂದು ಪತ್ರದಲ್ಲಿ ಅಮೆರಿಕದ ಬಗ್ಗೆ ಹೀಗೆ ಬರೆಯುತ್ತಾನೆ:

''It is easy to write on a blackboard once it has been cleaned from the dust covering it, and all the traces of former uncouth writing have been effaced from its surface; but when the blackboard is covered with the accumulated dust of the ages and disfigured by thousands of the oddest characters that have left their imprint upon it, the task becomes more difficult, if not impossible.... The American mind resembles such a blackboard.... In this Bedlam of religious cranks of all shades and colour, in this devil's kitchen of fraud, imposture and knavery, The Swami appeared to teach the lofty religion of the Vedas ... The sublime wisdom of your ancient Rishis.'' *(Brahmavadin 15.2.1896)*

ಮೇರಿ ಲೂಯಿ ಬರ್ಕ್ ತನ್ನ *The New Discoveries* ನಲ್ಲಿ ಬರೆಯುತ್ತಾಳೆ: ''ಮತೀಯ ಕ್ರೈಸ್ತರು ಅಮೆರಿಕದ ಜನತೆಗೆ ಭಾರತದ ಬಗ್ಗೆ ಹಾಗೂ ಹಿಂದೂ ಧರ್ಮದ ಬಗ್ಗೆ ಎಷ್ಟು ಸಾಧ್ಯವೊ

ಅಷ್ಟೂ ನಕಾರಾತ್ಮಕ ಭಾವನೆಗಳನ್ನು ತುಂಬುತ್ತಿದ್ದರು. ಮಕ್ಕಳಿಗೆ ಪದ್ಯಗಳನ್ನು ಹೇಳಿಕೊಡಲು ''Songs for the little ones at Home'' ಎಂಬ ಪುಸ್ತಕವನ್ನು ಕೊಡುತ್ತಿದ್ದರು. ಅದರಲ್ಲಿ ಭಾರತೀಯ ತಾಯಂದಿರು ತಮ್ಮ ಮಕ್ಕಳನ್ನು ಪ್ರಾಣಿಗಳಿಗೆ ಆಹಾರವಾಗಿ ಕೊಡುತ್ತಿದ್ದರು. ಆದ್ದರಿಂದ ''Send, Oh send the Bible there'' ಎಂಬ ಅಪಪ್ರಚಾರ ಅಡಕವಾಗಿದೆ. ಕಾಲೆಬ್ ರೈಟ್ (Mr. Caleb Wright) ಎಂಬುವನು ಅಮೆರಿಕಾದ ಉದ್ದಗಲಕ್ಕೂ ಸಂಚಾರ ಮಾಡಿ, ಭಾರತದ ಬಗ್ಗೆ ಉಪನ್ಯಾಸಗಳನ್ನು ನೀಡಿದ್ದಾನೆ. ಆ ಉಪನ್ಯಾಸಗಳನ್ನು ಸಂಗ್ರಹಿಸಿ ''India and its Inhabitants'' ಎಂಬ ಪುಸ್ತಕ ಪ್ರಕಟವಾಯಿತು. ಈ ಪುಸ್ತಕವು ಆಗಿನ ಕಾಲದಲ್ಲಿ ಬಹಳ ಪ್ರಖ್ಯಾತಿಯನ್ನು ಪಡೆದ ಪುಸ್ತಕ. ಎರಡು ವರ್ಷದಲ್ಲಿ ೩೬,೦೦೦ ಪ್ರತಿಗಳು ಮಾರಾಟಗೊಂಡವು. ಆತ ಭಾರತಕ್ಕೆ ಬಾರದೆ ಭಾರತವನ್ನು ತಿಳಿದು ಇಡೀ ಭಾರತವನ್ನು ಸಂಚಾರ ಮಾಡಿ ಪುಸ್ತಕವನ್ನು ಪ್ರಕಟಿಸಿದ್ದೇನೆ ಎಂದು ಸುಳ್ಳು ಮುನ್ನುಡಿ ಬರೆದಿದ್ದಾನೆ. ಆ ಪುಸ್ತಕದಲ್ಲಿ ಭಾರತದ ಬಗ್ಗೆ ಎಷ್ಟು ಸಾಧ್ಯವೋ, ಅಷ್ಟು ಸುಳ್ಳು ಅಪಪ್ರಚಾರ ಮಾಡಿದ್ದಾನೆ.

ಶ್ರೀಕೃಷ್ಣನ ಬಗ್ಗೆ ಅಮೆರಿಕಾದಲ್ಲಿ ಯಾವ ರೀತಿಯ ಅಪಪ್ರಚಾರವಿತ್ತು ತಿಳಿದಿದಿಯೆ? ಮತೀಯ ಕ್ರೈಸ್ತರು ಹೇಳುತ್ತಾರೆ. ''ಕೃಷ್ಣನ ಜೀವನವೆಲ್ಲ ಯುದ್ಧದಲ್ಲಿ, ರಾಜ್ಯವನ್ನು ಗಳಿಸುವುದರಲ್ಲಿ ಕಳೆಯಿತು. ಆತ ಕಾಶೀನಗರವನ್ನು ಸುಟ್ಟು ಧ್ವಂಸಮಾಡಿ, ನಗರದ ಪ್ರಜೆಗಳನ್ನು ಕೊಂದುಹಾಕಿದನು. ತನ್ನ ಅಂತಿಮಕಾಲದಲ್ಲಿ ಮಕ್ಕಳಾದ ೧,೮೦,೦೦೦ ಜನರನ್ನು ಕೊಂದನು. ಈತನಿಗೆ ಎಂಟು ರಾಣಿಯರು ಹಾಗೂ ೧೬,೧೦೦ ಪತ್ನಿಯರು. ಇಂಥವನನ್ನು ಕಾಮುಕ ಎನ್ನಬೇಕು. ಅವನು ಉತ್ತಮ ದೇವನಾಗಲು ಹೇಗೆ ಸಾಧ್ಯ ? *(ಮೂಲ: 'ಸ್ವಾಮಿ ವಿವೇಕಾನಂದ ಸಮಕಾಲೀನ ಭಾರತವರ್ಷ', ಶಂಕರಿಪ್ರಸಾದ ಬಸು)*

ಇಂಥಹ ವಿಚಿತ್ರ ಡೋಲಾಯಮಾನ ಯುಗದಲ್ಲಿ ಶ್ರೀರಾಮಕೃಷ್ಣರ ಅವತಾರವಾದದ್ದು.

### ಶ್ರೀರಾಮಕೃಷ್ಣರ ಅವತಾರ:

ಭಗವಂತನು ಇದ್ದಾನೆ ಎಂಬುದೇ ಸಂಶಯಾತ್ಮಕವಾಗಿದ್ದಾಗ, ಶಾಸ್ತ್ರವೂ ಋಷಿಗಳ ಹುಚ್ಚು ಕಲ್ಪನೆಗಳು ಎಂದು ಭಾವಿಸಿದ್ದಾಗ, ವ್ಯಾಕುಲ ಯೋಗದಿಂದ, ಶ್ರದ್ಧೆಯಿಂದ ಪ್ರಥಮದಲ್ಲಿ ಯಾವ ಗುರುವಿನ ಸಹಾಯವಿಲ್ಲದೆಯೇ ಕಾಳಿಯ ಸಾಕ್ಷಾತ್ಕಾರ ಪಡೆದು, ಹನ್ನೆರಡು ವರ್ಷ ಸುದೀರ್ಘ ಸಾಧನೆಯಲ್ಲಿ ಎಲ್ಲಿ ಮತ-ಪಂಥಗಳ ತಿರುಳನ್ನು ಅನುಭವಕ್ಕೆ ಪಡೆದು ಯುಗದ ಅವತಾರವರಿಷ್ಠರಾದರು ಶ್ರೀರಾಮಕೃಷ್ಣರು.

ರೋಮೇ ರೋಲಾ ಹೇಳುವಂತೆ: ''ನಾನು ಚಿತ್ರಿಸಬಯಸುವ ವ್ಯಕ್ತಿಯು ಮೂವತ್ತು ಕೋಟಿ ಜನರ ಎರಡು ಸಹಸ್ರವರ್ಷಗಳ ಆಧ್ಯಾತ್ಮಿಕ ಜೀವನದ ಪರಾಕಾಷ್ಠೆಯಾಗಿದ್ದರು.''

ಇಂತಹ ಶ್ರೀರಾಮಕೃಷ್ಣ ಪರಮಹಂಸರ ಪದತಲದಲ್ಲಿ ಶಿಷ್ಯ ನರೇಂದ್ರ, ಸ್ವಾಮಿ ವಿವೇಕಾನಂದರಾದರು.

ಗುರುವಿನ ಅನುಭೂತಿ-ತರಬೇತಿ-ಉಪದೇಶಗಳು ಸ್ವಾಮಿ ವಿವೇಕಾನಂದರ ಮೂಲಕ ಜಗತ್ತಿಗೆ ಶಾಂತಿಯ ನವೀನ ಸಂದೇಶವಾಗಿ ಹೊರಹೊಮ್ಮಿತು.

### ಚಿಕಾಗೋ ಉಪನ್ಯಾಸ ಮತ್ತು ಪ್ರಭಾವ (ಪುನರುತ್ಥಾನ):

ಸೋದರಿ ನಿವೇದಿತಾ 'ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ' ಪೀಠಿಕೆಯಲ್ಲಿ ಬರೆಯುವಂತೆ, ''ಸ್ವಾಮಿ ವಿವೇಕಾನಂದರು ಮಾತನಾಡಲು ಮೇಲೆದ್ದಾಗ ಅವರ ಮುಂದಿದ್ದ ಶ್ರೋತೃಗಳು ಒಂದು ವಿನೂತನ ಮಾನಸಿಕ ವಾತಾವರಣವನ್ನು ಸೃಷ್ಟಿಸಿದ್ದರು. ಅವರೆಲ್ಲರೂ ಯುವ ಮನಸ್ಸಿನಿಂದ ಕೂಡಿದ್ದು ಅಪಾರ ಶಕ್ತಿಯಿಂದ, ಆತ್ಮವಿಶ್ವಾಸದಿಂದ ತುಂಬಿತುಳುಕುತ್ತಿದ್ದರು. ಅವರು ಜಿಜ್ಞಾಸುಗಳೂ ತೀಕ್ಷ್ಣಗ್ರಾಹಿಗಳೂ ಆಗಿದ್ದರು.''

ಇತ್ತ ಭಾರತವೂ, ಹಿಂದೂಧರ್ಮವೂ ತನ್ನನ್ನು ಪ್ರತಿಬಿಂಬಿಸುವ, ಪ್ರತಿನಿಧಿಸುವ ವ್ಯಕ್ತಿಗಾಗಿ ಕಾಯುತ್ತಿತ್ತು. ಆದ್ದರಿಂದ ಸೋದರಿ ನಿವೇದಿತಾ ಮುಂದುವರಿಸಿ ಬರೆಯುತ್ತಾಳೆ : ''ವರ್ತಮಾನ ಯುಗದ ಅವನತಿಯ ಕಾಲದಲ್ಲಿ ಹಿಂದೂಧರ್ಮಕ್ಕೆ ತಾನು ನೆಲೆ ನಿಲ್ಲುವುದಕ್ಕೆ ಸುಭದ್ರವಾದ ಒಂದು ಅಡಿಪಾಯ ಬೇಕಾಗಿತ್ತು . ತನ್ನ ಶ್ರೇಷ್ಠತೆಯನ್ನು ತಾನು ಗುರುತಿಸಿಕೊಳ್ಳುವುದಕ್ಕೆ ಸಪ್ರಮಾಣವಾದ ಹೇಳಿಕೆಗಳ ಆವಶ್ಯಕತೆಯಿತ್ತು . ಸ್ವಾಮಿ ವಿವೇಕಾನಂದರ ಈ ಕೃತಿಶ್ರೇಣಿಯು ಅದನ್ನು ಒದಗಿಸುತ್ತದೆ.''

ಮತ್ತೂ ಮುಂದುವರಿಸಿ ಬರೆಯುತ್ತಾಳೆ:

''ಭಾರತವು ಹಿಂದಿನಷ್ಟೇ ಇಂದೂ ಶ್ರೇಷ್ಠವಾಗಿದೆ. ಎಲ್ಲಕ್ಕಿಂತಲೂ ಮಿಗಿಲಾದ ಪ್ರಮಾಣವು ಸ್ವಾಮಿ ವಿವೇಕಾನಂದರಂತಹ ವ್ಯಕ್ತಿಯೊಬ್ಬರು ಮೂಡಿ ಬಂದು ಸಮಸ್ತ ಜನಾಂಗದ ಅಂತಃಪ್ರಜ್ಞೆಯನ್ನು ಪ್ರತಿಧ್ವನಿಸಿದುದು.''

ವಿಶ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಿದ ಪ್ರತಿನಿಧಿಗಳು ತಮ್ಮ ತಮ್ಮ ಮತಗಳ ಅಥವ ಸಂಘದ ಪರವಾಗಿ ಮಾತನಾಡಲು ಬಂದವರು. ಆದರೆ ಏನದ್ಭುತ! ಪ್ರಾರಂಭದಲ್ಲಿಯೇ ಎಲ್ಲ ಧರ್ಮಗಳ 'ತಾಯಿ' ಹಿಂದೂಧರ್ಮವೆಂದು, ಅದರಲ್ಲಿ ಎಲ್ಲವೂ ಅಡಕವಾಗಿದೆ ಎಂದು ಅರ್ಥೈಸಿದರು. ಉಪನ್ಯಾಸದ ಪ್ರಾರಂಭದಲ್ಲಿಯೇ ಸ್ವಾಮೀಜಿ ಹೀಗೆ ಹೇಳಿದ್ದಾರೆ. ''ಪ್ರಪಂಚದ ಅತ್ಯಂತ ಪ್ರಾಚೀನವಾದ ಸಂನ್ಯಾಸಿಗಳ ಸಂಘದ ಪರವಾಗಿ ನಿಮಗೆ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ವಿವಿಧ ಧರ್ಮಗಳ ಮಾತೆಯ ಪರವಾಗಿ ನಿಮಗೆ ಕೃತಜ್ಞತೆಯನ್ನು ಅರ್ಪಿಸುತೇನೆ.''

ಸೆಪ್ಟೆಂಬರ್ ಹನ್ನೊಂದರಿಂದ ಹಿಡಿದು ಹದಿನೇಳನೆ ತಾರೀಖಿನವರೆಗೂ ಮಾಡಿದ ಸ್ವಾಮೀಜಿಯ ಉಪನ್ಯಾಸಗಳು ಭಾರತಕ್ಕೆ ಹಾಗೂ ಹಿಂದೂ ಧರ್ಮಕ್ಕೆ ಕಳೆದುಹೋದ ಸ್ವಾಭಿಮಾನ ಹಾಗೂ

ತನ್ನತನ ಮರಳಿದಂತಾಯಿತು. ಪಾಶ್ಚಾತ್ಯ ದೇಶಗಳಿಗೆ ನಿರ್ಭೀತ ಸತ್ಯದ ಪರಿಚಯವಾಯಿತು.

ಭಾರತದಲ್ಲಿ ಧರ್ಮಪಾಲರು 'Hinduism in America and Swami Vivekananda' ಇದರ ಬಗ್ಗೆ ಮಾತನಾಡಿದರು. 'Indian Mirror' ಪತ್ರಿಕೆಯು ಇದನ್ನು ತನ್ನ ಜುಲೈ ೬ನೇ ತಾರೀಖು ೧೮೯೪ರಲ್ಲಿ ಪ್ರಕಟಗೊಳಿಸಿತು. ''ಧರ್ಮಪಾಲ ಹೇಳಿದ್ದಾರೆ: ''ನಾನು ನಿಸ್ಸಂಶಯವಾಗಿ ಹೇಳಬಲ್ಲೆ. ವಿಶ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರಷ್ಟು ಪ್ರಭಾವಶಾಲಿ ಹಾಗೂ ಆಕರ್ಷಕ ವ್ಯಕ್ತಿ ಇನ್ನೊಬ್ಬರಿರಲಿಲ್ಲ. ನನಗನಿಸುತ್ತದೆ ಜಗತ್ತಿಗೆ ಭಾರತವು ತನ್ನ ಆಧ್ಯಾತ್ಮಿಕ ಶಕ್ತಿಯಿಂದ ಹೊಸ ಬೆಳಕನ್ನು ನೀಡುವ ಕಾಲ ಒದಗಿದೆ ಎಂದು.... ಹಿಂದೂ ತತ್ತ್ವಶಾಸ್ತ್ರಗಳನ್ನು ಕೇವಲ ಅಲ್ಲಿನ ಬುದ್ಧಿವಂತ ವರ್ಗದವರಿಗೆ ಮಾತ್ರವಲ್ಲದೆ ಸಾಮಾನ್ಯ ಜನರಿಗೂ ತಿಳಿಯುವಂತೆ ಬೋಧಿಸಿದ್ದಾರೆ.'' ಮತ್ತೆ ಇದೇ ಪತ್ರಿಕೆಯು ಏಪ್ರಿಲ್ ೨೨ರ ೧೮೯೪ರಲ್ಲಿ ಹೀಗೊಂದು ಸುದ್ದಿಯನ್ನು ಪ್ರಕಟಿಸಿತು:

''ಜಗತ್ತಿನ ಇತಿಹಾಸದಲ್ಲಿ ಮೊಟ್ಟಮೊದಲ ಬಾರಿಗೆ ಹಿಂದೂ ಧರ್ಮದ ಪ್ರಚಾರವು ಪಾಶ್ಚಾತ್ಯರಾಷ್ಟ್ರದಲ್ಲಿ ನಡೆದಿದೆ. ಮತೀಯ ಕ್ರೈಸ್ತರು ಹಿಂದುಗಳನ್ನು 'ದೆವ್ವದ ಆರಾಧಕರು' ಎಂದು ಕರೆದಿದ್ದರು. ಅದೇ ಕ್ರೈಸ್ತ ರಾಷ್ಟ್ರದಲ್ಲಿ ಸ್ವಾಮಿ ವಿವೇಕಾನಂದರು ಕೇವಲ ಅಲ್ಪ ಸಮಯದಲ್ಲಿ ರತ್ನದ ಪರಿಚಯ ಮಾಡಿಸಿಕೊಟ್ಟರು.''

ಸರ್ ಹಿರಮಾ ಮ್ಯಾಕ್ಸಮ್ ಆಗಿನ ಕಾಲದ ಪ್ರಚಂಡ ಎಂಜಿನಿಯರ್ ಹಾಗೂ ಅನ್ವೇಷಕ. ವಿಶ್ವಧರ್ಮ ಸಮ್ಮೇಳನ ನಡೆದು ಇಪ್ಪತ್ತು ವರ್ಷಗಳ ನಂತರ ಈತ ತಾನು ಬರೆದ Li Hung Chong's Scrap-Book ಎಂಬ ಪುಸ್ತಕದ ಮುನ್ನುಡಿಯಲ್ಲಿ ಸಮ್ಮೇಳನದ ಹಾಗೂ ಅದರ ಪರಿಣಾಮದ ಬಗ್ಗೆ ಹೀಗೆ ಬರೆಯುತ್ತಾನೆ:

''ಕೆಲ ವರ್ಷಗಳ ಹಿಂದೆ ಶಿಕಾಗೋದಲ್ಲಿ ಒಂದು ಸರ್ವಧರ್ಮ ಸಮ್ಮೇಳನ ನಡೆಯಿತು. ಇಂಥದೊಂದು ನಡೆಯಲು ಸಾಧ್ಯವೇ ಇಲ್ಲವೆಂದು ಕೆಲವರು ಹೇಳಿದ್ದರು. ಪ್ರತಿಯೊಂದು ಮತವೂ ಸಂಪೂರ್ಣ ಸತ್ಯವಾಗಿದ್ದು ಇತರ ಎಲ್ಲವೂ ಸಂಪೂರ್ಣ ತಪ್ಪಾಗಿರುವಾಗ ಯಾವುದೇ ಬಗೆಯ ಒಪ್ಪಂದಕ್ಕೆ ಬರಲು ಹೇಗೆ ತಾನೆ ಸಾಧ್ಯ? ಆದರೂ ಸಮ್ಮೇಳನ ನಡೆಯಿತು. ಮತ್ತು ಅಮೆರಿಕದ ಜನತೆಗೆ ಪ್ರತಿವರ್ಷವೂ ಹತ್ತು ಲಕ್ಷ ಡಾಲರ್‌ಗೂ ಹೆಚ್ಚು ಹಣವನ್ನು ಮಿಗಿಸಿಕೊಟ್ಟಿತು. ಇನ್ನು ವಿದೇಶಗಳಲ್ಲಿ ಅದು ಉಳಿಸಿದ ಎಷ್ಟೊ ಜೀವಗಳ ಬಗ್ಗೆಯಂತೂ ಹೇಳಬೇಕಾಗಿಯೇ ಇಲ್ಲ! ಇವೆಲ್ಲವೂ ಸಾಧ್ಯವಾದದ್ದು ಒಬ್ಬ ಧೀರ, ಪ್ರಾಮಾಣಿಕ ಮನುಷ್ಯನಿಂದ. ಅವನೇ ಕಲ್ಕತ್ತದಿಂದ ಬಂದಿದ್ದ ಸಂನ್ಯಾಸಿ ವಿವೇಕಾನಂದ. ಈತನದು ಅತ್ಯಂತ ಪ್ರಭಾವಶಾಲಿ ವ್ಯಕ್ತಿತ್ವ. ಅಪರಿಮಿತ ಜ್ಞಾನ.''

ಮತ್ತೊಂದು ಪತ್ರಿಕೆ New York Hearld ಬರೆಯಿತು:

''ನಿಸ್ಸಂಶಯವಾಗಿಯೂ ಅವರು ಸಮ್ಮೇಳನದ ಅತಿ ಶ್ರೇಷ್ಠ ವ್ಯಕ್ತಿ. ಅವರ ಮಾತುಗಳನ್ನು ಕೇಳಿದ ಮೇಲೆ 'ಇಂತಹ ತಿಳುವಳಿಕಸ್ಥ ದೇಶಕ್ಕೆ ಧರ್ಮ ಪ್ರಚಾರಕರನ್ನು ಕಳಿಸುವುದು ಎಂತಹ ಮೂರ್ಖತನ!' ಎನ್ನಿಸುತ್ತದೆ.''

ವಿಶ್ವಧರ್ಮ ಸಮ್ಮೇಳನದ ಮುನ್ನ ಭಾರತದ ಮತ್ತು ಅಮೆರಿಕದ ಸಾಮಾಜಿಕ, ಧಾರ್ಮಿಕ ಹಿನ್ನೆಲೆಯನ್ನು ಪ್ರಾರಂಭದಲ್ಲಿಯೇ ಚರ್ಚಿಸಲಾಗಿದೆ. ಆ ಹಿನ್ನೆಲೆಯಲ್ಲಿ ಸಮ್ಮೇಳನ ನಂತರ ಚಿತ್ರವನ್ನು ಹೋಲಿಸಿ ನೋಡಬೇಕು. ಆಗ ನಮಗೆ ಸ್ಪಷ್ಟವಾದ ಚಿತ್ರ ದೊರಕುತ್ತದೆ. ಹೀಗೆ ವಿಶ್ವಧರ್ಮ ಸಮ್ಮೇಳನವು ಸ್ವಾಮಿ ವಿವೇಕಾನಂದರ ಮೂಲಕ ಹಿಂದೂ ಧರ್ಮದ ಪುನರುತ್ಥಾನಕ್ಕೆ ನಾಂದಿಯಾಯಿತು. ಹಿಂದೂ ಧರ್ಮದ ಪುನರುತ್ಥಾನದ ವಿಚಾರ ಆಳವಾಗಿ ಅಧ್ಯಯನ ಮಾಡುವಂತಹ ವಿಷಯ. ಆ ನಿಟ್ಟಿನಲ್ಲಿ ಈ ಲೇಖನವು ಕೇವಲ ಆಳಕ್ಕೆ ಇಳಿಯಲು ಒಂದು ಕಿಂಡಿ ಮಾತ್ರ.

## ಸಾಮಾಜಿಕ ಸಮಸ್ಯೆಗಳು ಮತ್ತು ಸ್ವಾಮೀಜಿ

ವಿವೇಕಾನಂದರ ಅನುಕಂಪ ಕೇವಲ ಭಾರತೀಯರ ಮೇಲೆ ಮಾತ್ರ ಇರಲಿಲ್ಲ. ಇವರು ಪೌರ್ವಾತ್ಯ ದೇಶದಲ್ಲಿ ಜನಿಸಿದ್ದುದರಿಂದ ಯಾವಾಗಲೂ ಸಣ್ಣ ರೈತ, ಸಣ್ಣ ವರ್ತಕನನ್ನು ಒಪ್ಪುತ್ತಿದ್ದರೇ ಹೊರತು ಪಾಶ್ಚಾತ್ಯರು ಅನುಮೋದಿಸುವಂತೆ ದೊಡ್ಡ ದೊಡ್ಡ ಉದ್ಯಮಗಳನ್ನು ಒಪ್ಪುತ್ತಿರಲಿಲ್ಲ. ಇನ್ನು ಮೇಲೆ ಬರುವ ಮಾನವರು ಕೆಲಸಗಾರರ ಸಮಸ್ಯೆಯನ್ನು ಮೊದಲು ಪರಿಹರಿಸಲೆತ್ನಿಸುವರು. ಅಥವಾ ಅವರು ಹೇಳಿದಂತೆ ಶೂದ್ರರ ಕಷ್ಟವನ್ನು ಪರಿಹರಿಸಲು ಯತ್ನಿಸುವರು. ಮೊದಲು ಪಾಶ್ಚಾತ್ಯ ದೇಶಗಳಿಗೆ ಬಂದಾಗ ಅಲ್ಲಿಯ ತೋರಿಕೆಯ ಸಾರ್ವಜನಿಕ ನೀತಿಗೆ ಮಾರುಹೋಗಿದ್ದರು. ಅನಂತರ ೧೯೦೦ರಲ್ಲಿ ಅಲ್ಲಿಗೆ ಹೋದಾಗ ಹಣಕ್ಕಾಗಿ ಅವರಲ್ಲಿದ್ದ ಸ್ವಾರ್ಥ, ಹಕ್ಕುಗಳಿಗಾಗಿ ಹೋರಾಡುತ್ತಿರುವುದು ಇದನ್ನೆಲ್ಲಾ ನೋಡಿದಾಗ ಪಾಶ್ಚಾತ್ಯ ದೃಶ್ಯ ಆಗ ನರಕ ಸದೃಶವಾಗಿತ್ತು. ಇವರ ಅನುಭವ ಮಾಗಿದ ಮೇಲೆ, ಚೀನಾ ಪಾಶ್ಚಾತ್ಯ ರಾಷ್ಟ್ರಗಳಿಗಿಂತ ಹೆಚ್ಚು ಮಾನವ ಕೋಟಿಯ ನೈತಿಕ ಆದರ್ಶದ ಕಡೆ ಹೋಗಿದೆ ಎನ್ನುತ್ತಿದ್ದರು. ಹೊಸ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಉದಾತ್ತ ನೈತಿಕ ಆದರ್ಶ ಈಗ ಮೂಡಿಲ್ಲ, ಮುಂದೆ ಮೂಡುವಂತೆಯೂ ಕಾಣುವುದಿಲ್ಲ ಎಂದು ಹೇಳುತ್ತಿದ್ದರು.ಆದರೂ ಭವಿಷ್ಯಪ್ರಪಂಚ ಜನಸುಧಾರಣೆಗಾಗಿ ಬರುವುದು ಎಂಬುದನ್ನು ಅಡವರು ಎಂದಿಗೂ ಅವರು ಅನುಮಾನಿಸಲಿಲ್ಲ. ''ನಾವು ಶೂದ್ರರ ಸಮಸ್ಯೆಯನ್ನು ಪರಿಹರಿಸಬೇಕಾಗಿದೆ. ಆದರೆ ಎಷ್ಟೊಂದು ಇದಕ್ಕಾಗಿ ಗೊಂದಲ!'' ಎಂದು ಒಂದು ದಿನ ಹೇಳಿದರು. ಅವರು ಭವಿಷ್ಯವನ್ನು ನೇರವಾಗಿ ನೋಡುತ್ತಿರುವಂತೆ ಮಾತನಾಡಿದರು. ಅವರ ವಾಣಿಯಲ್ಲಿ ದ್ರಷ್ಟಾರನ ಪ್ರತಿಭೆಯಿತ್ತು.

— ಸೋದರಿ ನಿವೇದಿತಾ

*('ನಾ ಕಂಡಂತೆ ನನ್ನ ಗುರುದೇವ', ಪು. ೨೦೦)*

# ಚಿಕಾಗೋ ಉಪನ್ಯಾಸಗಳಲ್ಲಿ ಸ್ವಾಮಿ ವಿವೇಕಾನಂದರು ಮತಾಂಧತೆ ಮತ್ತು ಸೌಹಾರ್ದತೆ ಕುರಿತು ನೀಡಿದ ಭಾವನೆಗಳು

**ಸ್ವಾಮಿ ಕರುಣಾಕರಾನಂದ**

ಮತಾಂಧತೆಯ ಅಪಾಯ ಹಾಗೂ ಸೌಹಾರ್ದತೆ, ಸಹ ಬಾಳ್ವೆಯ ಅಗತ್ಯ — ಇವುಗಳನ್ನು ಚಿಕಾಗೋ ಭಾಷಣದಲ್ಲಿ ಪ್ರಬಲವಾಗಿ ಪ್ರತಿಪಾದಿಸಿದ್ದರು ಸ್ವಾಮೀಜಿ. ಈ ಕುರಿತು ಇಲ್ಲಿ ವಿಶ್ಲೇಷಿಸಿರುವ ಪೂಜ್ಯ ಸ್ವಾಮೀಜಿ ಸಂಸ್ಕೃತ ಹಾಗೂ ವೇದಾಂತ ಶಾಸ್ತ್ರಗಳನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ. ಅವರು ಪ್ರಸ್ತುತ ಬೇಲೂರು ಮಠದಲ್ಲಿರುವ ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರದಲ್ಲಿ ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಉತ್ತಮ ವಾಗ್ಮಿ ಹಾಗೂ ಬರಹಗಾರರಾಗಿದ್ದು, ಅವರ ಅನೇಕ ಬರಹಗಳು ಈಗಾಗಲೇ 'ವಿವೇಕಪ್ರಭ'ದಲ್ಲಿ ಪ್ರಕಟವಾಗಿವೆ.



ಚಿಕಾಗೋದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನ 'ವರ್ಲ್ಡ್ ಕೊಲಂಬಿಯನ್ ಎಕ್ಸ್‌ಪೊಸಿಷನ್'ನ ಅಂಗವಾಗಿದ್ದು ಅದರ ಉದ್ದೇಶ ಮಿಸ್ಟರ್ ಮರ್ವಿನ್ ಮೇರಿ ಸ್ನೆಲ್ ಹೇಳುವಂತೆ: ''ಎಲ್ಲ ಧರ್ಮಗಳ ಮಾಹಿತಿಯನ್ನು ಸಂಗ್ರಹಿಸಿ, ನಿಷ್ಪಕ್ಷವಾಗಿ ಪರಿಶೀಲಿಸುವುದು ಮತ್ತು ಆ ಮೂಲಕ ಎಲ್ಲ ಧರ್ಮಗಳ ನಡುವೆ ಇರುವ ಮುಖ್ಯ ಭೇದಗಳನ್ನು ತೊಡೆದು ಹಾಕುವಲ್ಲಿ ದಾರಿಯನ್ನು ಕಂಡುಹುಡುಕುವುದು ಹಾಗೂ ಧಾರ್ಮಿಕ ತತ್ತ್ವಗಳನ್ನು ಒಂದು ದುರ್ಭೇದ್ಯ ಆಧಾರದ ಮೇಲೆ ಮಂಡಿಸುವುದು.'' ಮೊದಮೊದಲು ಈ ವಿಶ್ವಧರ್ಮ ಸಮ್ಮೇಳನಕ್ಕೆ ಕ್ರೈಸ್ತ ಧರ್ಮಗುರುಗಳಿಂದ ಬಹಳ ವಿರೋಧ ವ್ಯಕ್ತವಾಯಿತು. ಅದು ಹೇಗೆ ಕ್ರೈಸ್ತಧರ್ಮವನ್ನು ವಿಶ್ವದ ಇನ್ನಿತರ ಕ್ಷುದ್ರ ಧರ್ಮಗಳ ಸರಿಸಮಾನವಾಗಿ ಪರಿಗಣಿಸಿ ಒಂದೇ ವೇದಿಕೆಯಲ್ಲಿ ಅವುಗಳ ಜೊತೆಗೆ ನಿಲ್ಲಿಸಲು ಸಾಧ್ಯವೆಂದು ಪ್ರಶ್ನಿಸಿದರು. ಅವುಗಳೊಂದಿಗೆ ಕ್ರೈಸ್ತಧರ್ಮವನ್ನು ತುಲನೆ ಮಾಡುವುದೇ ತಮ್ಮ ಧರ್ಮಕ್ಕೆ ಅವಮಾನವೆಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ, ನಂತರ ಕ್ರೈಸ್ತ ಧರ್ಮದ ಮೇಲುಗಾರಿಕೆಯನ್ನು ಸಾರುವುದಕ್ಕೆ ಸಮ್ಮೇಳನವು ಒಂದು ಅತ್ಯುತ್ತಮ ವೇದಿಕೆಯೆಂಬ ಆಶ್ವಾಸನೆಯನ್ನು ಆಯೋಜಕರಿಂದ ಪಡೆದು ತಮ್ಮ ಸಮ್ಮತಿಯಿತ್ತರು. ಈ ಹಿನ್ನೆಲೆಯನ್ನು ಚೆನ್ನಾಗಿ ಅರಿತಿದ್ದ ಸ್ವಾಮಿ ವಿವೇಕಾನಂದರು ಹಿಂದೂಧರ್ಮದ ಮೂಲಭೂತ ತತ್ತ್ವಗಳನ್ನು ಪ್ರಸ್ತುತಪಡಿಸುವುದಲ್ಲದೆ, ಧಾರ್ಮಿಕ ಅಸಹಿಷ್ಣುತೆಯನ್ನೂ, ಮತಾಂಧತೆಯನ್ನೂ ಖಂಡಿಸಿ, ಸಕಲ ಧರ್ಮಗಳ ಅಗತ್ಯವನ್ನು ಮನಗಾಣಿಸುವುದಕ್ಕಾಗಿ ವಿಶ್ವಧರ್ಮ ಸಮ್ಮೇಳನವನ್ನು ಉಪಯೋಗಿಸಿಕೊಂಡರು.

೧೮೯೩ ಸೆಪ್ಟೆಂಬರ್ ೧೧ರಂದು ನೀಡಿದ ಸ್ವಾಗತಕ್ಕೆ ಉತ್ತರವಾಗಿ ಸ್ವಾಮಿ ವಿವೇಕಾನಂದರು ಧನ್ಯವಾದಗಳನ್ನು ಅರ್ಪಿಸುತ್ತ ಧಾರ್ಮಿಕ ಸಹನೆಯ ವಿಷಯವನ್ನು ಕೈಗೆತ್ತಿಕೊಳ್ಳುತ್ತಾರೆ. ''ಧಾರ್ಮಿಕ ಸಹನೆಯನ್ನೂ, ಎಲ್ಲ ಧರ್ಮಗಳೂ ಸ್ವೀಕಾರಯೋಗ್ಯ ಎಂಬುದನ್ನೂ ಜಗತ್ತಿಗೆ ಬೋಧಿಸಿದ ಧರ್ಮಕ್ಕೆ ಸೇರಿದವನು ನಾನು ಎಂಬ ಹೆಮ್ಮೆ ನನ್ನದು. ಪರಧರ್ಮ ಸಹಿಷ್ಣುತೆಯಲ್ಲಿ ನಮಗೆ ನಂಬಿಕೆ

ಯುಂಟು; ಅಷ್ಟೇ ಅಲ್ಲ, ಎಲ್ಲ ಧರ್ಮಗಳೂ ಸತ್ಯ ಎಂಬುದನ್ನು ನಾವು ಒಪ್ಪುತ್ತೇವೆ. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ೧.೫, ೪ನೆಯ ಮುದ್ರಣ).* ಪರಧರ್ಮವನ್ನು ಸಹಿಸಿಕೊಳ್ಳುವುದು ಮಾತ್ರವಲ್ಲ, ಅದೂ ಸತ್ಯವೆಂದು ಒಪ್ಪಿಕೊಳ್ಳುವುದು— ಇದು ಸ್ವಾಮೀಜಿಯವರ ಉಪನ್ಯಾಸದ ವೈಶಿಷ್ಟ್ಯ! ಪರಧರ್ಮ ಸಹಿಷ್ಣುತೆಯನ್ನು ಸಾಮಾನ್ಯವಾಗಿ ಎಲ್ಲ ಉದಾರ ಮನಸ್ಸಿನ ಧಾರ್ಮಿಕರೂ ಒಪ್ಪಿಕೊಳ್ಳುವರು. ಈ ಧೋರಣೆಯಲ್ಲಿ 'ನಮ್ಮದು ನಮಗೆ; ಅವರದ್ದು ಅವರಿಗೆ', 'ನಮ್ಮದು ಸರಿ; ಅವರದ್ದು ಸರಿಯೋ ತಪ್ಪೋ. ನಮಗೆ ಬೇಡ', 'ನಮ್ಮದೇ ಸರಿ; ಅವರದ್ದು ತಪ್ಪು. ಪಾಪ! ಏನೇನೋ ಆಚರಿಸುತ್ತಾರೆ. ತಿಳುವಳಿಕೆ ಸಾಲದು. ನಮಗೇಕೆ ಬಿಡಿ. ಅವರೇನು ಬೇಕಾದರೂ ಆಚರಿಸಿಕೊಳ್ಳಲಿ. ನಮಗೆ ತೊಂದರೆಯಾಗದಿದ್ದರೆ ಸಾಕು', 'ನಿನ್ನ ಧರ್ಮ ಸರಿಯಲ್ಲ; ಆದರೂ ನಾನು ಸಹಿಸಿಕೊಳ್ಳುತ್ತೇನೆ' ಇಂತಹ ಆಲೋಚನೆಗಳ ಸರಣಿಯಿರುತ್ತದೆ. ಸಹಿಷ್ಣುತೆಯಲ್ಲಿಯೂ ಒಂದು ರೀತಿಯ ಸಣ್ಣ ಅಸಹಿಷ್ಣುತೆ ಕಂಡು ಬರುತ್ತದೆ, ಉದ್ಧಟತನ ಕಂಡುಬರುತ್ತದೆ.

ಈ ಅಸಹಿಷ್ಣತೆಗೆ ಕಾರಣವೇನು? ಸ್ವಾಮೀಜಿ ಹೇಳುತ್ತಾರೆ, ''ಸಂಕುಚಿತ ಪಂಥಭಾವನೆ, ಸ್ವಮತಾಭಿಮಾನ, ಅದರ ಭೀಕರ ಸಂತಾನವಾದ ಮತಾಂಧತೆ ಇವು ಈ ಪೃಥ್ವಿಯನ್ನು ಬಹುಕಾಲ ಬಾಧಿಸುತ್ತಿವೆ. ಇವು ಈ ಭೂಮಿಯನ್ನು ಹಿಂಸೆಯಿಂದ ತುಂಬಿವೆ, ಅದನ್ನು ಮತ್ತೆ ಮತ್ತೆ ನರರಕ್ತದಿಂದ ತೋಯಿಸಿವೆ, ನಾಗರಿಕತೆಯನ್ನು ನಾಶಗೊಳಿಸಿವೆ, ರಾಷ್ಟ್ರರಾಷ್ಟ್ರಗಳನ್ನೇ ನಿರಾಶೆಯ ಕೂಪಕ್ಕೆ ತಳ್ಳಿವೆ'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ೧.೬, ೪ನೆಯ ಮುದ್ರಣ).* ಪಂಥಭಾವನೆಯೆಂದರೆ ಯಾವುದಾದರೂ ಒಂದು ಪಂಥಕ್ಕೆ ಬಹಳ ಅಂಟಿಕೊಳ್ಳುವುದು (ಆಕ್ಸಫರ್ಡ್ ಡಿಕ್ಷನರಿ). ಪಂಥದ ಒಳಿತು–ಕೆಡಕುಗಳನ್ನು ಪರಿಶೀಲನೆ ಮಾಡದೆ ಕುರುಡಾಗಿ ಪಂಥದ ತತ್ತ್ವವನ್ನು ಹಾಗೂ ಅದರ ಮುಖಂಡರ ಆದೇಶಗಳನ್ನು ಅನುಸರಿಸುವುದು. ಇದರಿಂದ ಸ್ವಂತ ಆಲೋಚನಾ ಸಾಮರ್ಥ್ಯವೇ ಅನುಯಾಯಿಯಲ್ಲಿ ನಾಶವಾಗುತ್ತದೆ. ಯಾವಾಗ ಮನುಷ್ಯ ಸ್ವತಃ ಆಲೋಚನೆ ಮಾಡನೋ, ಆಗ ಸುಲಭವಾಗಿ ಇನ್ನೊಬ್ಬರ ಆಲೋಚನೆಗಳನ್ನು, ಅಭಿಪ್ರಾಯಗಳನ್ನು ಒಪ್ಪಿಕೊಂಡು ಅದರಂತೆ ಆಚರಿಸುತ್ತಾನೆ. ಇನ್ನೊಬ್ಬರ ಯಂತ್ರವಾಗುತ್ತಾನೆ, ಸಮಾಜದ ಶಾಂತಿಗೆ ಭಂಗ ತರುವ ಸುಪ್ತ ಆಯುಧವಾಗುತ್ತಾನೆ. ಸ್ವಮತಾಭಿಮಾನವೆಂದರೆ ತಮಗಿಂತಲೂ ಭಿನ್ನ ಅಭಿಪ್ರಾಯಗಳನ್ನು ಹೊಂದಿರುವವರ ಕುರಿತು ಅಸಹನೆ (ಆಕ್ಸಫರ್ಡ್ ಡಿಕ್ಷನರಿ). ಈ ಭಾವನೆಯನ್ನು ಹೊಂದಿರುವವರು ತಮ್ಮ ಪಂಥದ ತತ್ತ್ವಗಳು, ಆಚರಣೆಗಳಿಗೆ ಅದೆಷ್ಟು ಅಂಟಿಕೊಂಡಿರುವರೆಂದರೆ ಅವುಗಳ ಮೂಲ ಉದ್ದೇಶವನ್ನೇ ಮರೆತು ಅವುಗಳಿಗಿಂತ ಭಿನ್ನ ಆಚರಣೆಗಳನ್ನು, ತತ್ತ್ವಗಳನ್ನು ಸಹಿಸಿಕೊಳ್ಳರು. ತಮಗಿಂತಲೂ ಭಿನ್ನವಾಗಿ ಆಲೋಚಿಸುವವರು, ಭಿನ್ನವಾಗಿ ಆಚರಿಸುವವರು ತಮ್ಮೊಂದಿಗೆ ಈ ಭೂಮಿಯಲ್ಲಿ ಒಟ್ಟಿಗೆ ಇರಬಾರದೆಂದೇ ಇಂತಹವರ ಆಶಯ. ಎಲ್ಲರೂ ತಮ್ಮಂತೆಯೇ ಆಚರಿಸಿದರೆ, ತಮ್ಮಂತೆಯೆ ಆಲೋಚಿಸಿದರೆ ಇಂತಹವರಿಗೆ ಸಂತೋಷ. ಹೀಗಾಗಿ ಇಂತಹವರು ಭಿನ್ನವಾಗಿ ಆಲೋಚಿಸುವವರು, ಆಚರಿಸುವವರು ತಮ್ಮ ಮತವನ್ನು ಅನುಸರಿಸುವಂತೆ ಅವರ ಮನವೊಲಿಸಲು ಪ್ರಯತ್ನಿಸುತ್ತಾರೆ, ಪರಿವರ್ತಿಸಲು ಬಯಸುತ್ತಾರೆ. ಪರರ ತತ್ತ್ವಗಳು ತಮ್ಮ ತತ್ತ್ವಕ್ಕಿಂತ ಎಲ್ಲ ರೀತಿಯಲ್ಲಿಯೂ ಉತ್ಕೃಷ್ಟವಾಗಿದ್ದರೂ ಸ್ವಮತಾಭಿಮಾನಿಗಳು ಅದನ್ನು ಒಪ್ಪಿಕೊಳ್ಳುವುದಿಲ್ಲ. ಅದಕ್ಕೆ ಬದಲಾಗಿ ಅದರಲ್ಲಿ ದೋಷವನ್ನು ಹುಡುಕುತ್ತಾರೆ.

ಇಂತಹ ಸ್ವಮತಾಭಿಮಾನವನ್ನು ಎತ್ತಿ ತೋರಿಸಲು ಸ್ವಾಮೀಜಿ 'ನಮ್ಮಲ್ಲಿ ಏಕೆ ಒಮ್ಮತವಿಲ್ಲ?' ಎನ್ನುವ ಚಿಕಾಗೋ ಉಪನ್ಯಾಸದಲ್ಲಿ ಎರಡು ಕಪ್ಪೆಗಳ ಕತೆಯನ್ನು ಹೇಳುತ್ತಾರೆ. ಒಂದು ಬಾವಿಯಲ್ಲಿ ಒಂದು ಕಪ್ಪೆ ಬಹುಕಾಲದಿಂದ ವಾಸವಾಗಿತ್ತು. ಒಮ್ಮೆ ಸಮುದ್ರದಲ್ಲಿದ್ದ ಒಂದು ಕಪ್ಪೆ ಅಕಸ್ಮಾತ್ತಾಗಿ ಬಾವಿಗೆ ಬಂದು ಬಿತ್ತು. ಬಾವಿಯ ಕಪ್ಪೆ ಅದನ್ನು ಪ್ರಶ್ನಿಸಿತು: 'ನೀನು ಎಲ್ಲಿಂದ ಬಂದೆ?' 'ಸಮುದ್ರದಿಂದ' ಎಂದು ಉತ್ತರಿಸಿತು ಸಮುದ್ರ ಕಪ್ಪೆ. ಆಶ್ಚರ್ಯದಿಂದ ಬಾವಿಯ ಕಪ್ಪೆ ಕೇಳಿತು, 'ಸಮುದ್ರ? ಅದು ಎಷ್ಟು ದೊಡ್ಡದು? ಅದು ನನ್ನ ಬಾವಿಯಷ್ಟು ದೊಡ್ಡದೆ?' ಎನ್ನುತ್ತ ತಮ್ಮ ಬಾವಿಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ನೆಗೆದು ತೋರಿಸಿತು. ಸಮುದ್ರ ಕಪ್ಪೆ ಹೇಳಿತು, 'ಸ್ನೇಹಿತ! ಎಲ್ಲಾದರೂ ಬಾವಿಯನ್ನು ಸಮುದ್ರಕ್ಕೆ ಹೋಲಿಸುವುದುಂಟೆ?' ಬಾವಿಯ ಕಪ್ಪೆ ಇನ್ನೊಮ್ಮೆ ಬಾವಿಯ ಒಂದು ಬದಿಯಿಂದ ಇನ್ನೊಂದು ಬದಿಗೆ ನೆಗೆಯುತ್ತ ಕೇಳಿತು, 'ಇಷ್ಟು ದೊಡ್ಡದೊ?' ಸಮುದ್ರ ಕಪ್ಪೆ ನಕ್ಕು, 'ಬಾವಿಗೂ ಸಮುದ್ರಕ್ಕೂ ಯಾವ ಹೋಲಿಕೆ?' ಎಂದಿತು. ತತ್‌ಕ್ಷಣ ಬಾವಿಯ ಕಪ್ಪೆ ಕೋಪದಿಂದ, 'ನನ್ನ ಬಾವಿಗಿಂತ ದೊಡ್ಡದು ಯಾವುದೂ ಇರುವುದು ಸಾಧ್ಯವಿಲ್ಲ. ಇವನೊಬ್ಬ ಸುಳ್ಳುಗಾರ, ಇವನನ್ನು ಹೊರಗೆ ನೂಕಿ.' ಈ ಕತೆಯನ್ನು ಧರ್ಮಾನುಯಾಯಿಗಳಿಗೆ ಅನ್ವಯ ಮಾಡುತ್ತ ಸ್ವಾಮೀಜಿ ಹೇಳುತ್ತಾರೆ, ''ಯಾವಾಗಲೂ ನಮ್ಮ ಮುಂದಿರುವ ಕಷ್ಟ ಇದೇ. ನಾನೊಬ್ಬ ಹಿಂದು. ನಾನು ನನ್ನ ಸಣ್ಣ ಬಾವಿಯಲ್ಲಿ ಕುಳಿತುಕೊಂಡು ಜಗತ್ತೆಲ್ಲ ಈ ನನ್ನ ಬಾವಿ ಎಂದು ಯೋಚಿಸುತ್ತಿರುವೆ. ಕ್ರೈಸ್ತರು ತಮ್ಮ ಪುಟ್ಟ ಬಾವಿಯಲ್ಲಿ ಕುಳಿತುಕೊಂಡು ಪ್ರಪಂಚವೆಲ್ಲ ಇಷ್ಟೆ ಎಂದು ತಿಳಿಯುವರು. ಮಹಮ್ಮದೀಯರು ತಮ್ಮ ಪುಟ್ಟ ಬಾವಿಯಲ್ಲಿ ಕುಳಿತು ಪ್ರಪಂಚವೆಲ್ಲ ಇಷ್ಟೆ ಎಂದು ತಿಳಿಯುವರು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ೧.೭, ೪ನೆಯ ಮುದ್ರಣ)*

ಕಪ್ಪೆಗಳ ಮೇಲಿನ ಕತೆಯಲ್ಲಿ ಹೇಗೆ ತನ್ನ ಬಾವಿಗಿಂತಲೂ ಸಮುದ್ರವೆಂಬುದು ದೊಡ್ಡದೊ ಸಣ್ಣದೊ ಎಂದು ಪರೀಕ್ಷಿಸದೆಯೇ ತಾನು ಬಹುಕಾಲದಿಂದ ವಾಸಿಸುತ್ತಿರುವ ಬಾವಿಯೇ ಎಲ್ಲಕ್ಕಿಂತಲೂ ಶ್ರೇಷ್ಠ ಎಂಬ ವಿಚಾರಹೀನವಾದ ಸ್ವಮತಾಭಿಮಾನವನ್ನು ಅದರಲ್ಲಿದ್ದ ಕಪ್ಪೆ ಹೊಂದಿತ್ತೋ, ಹಾಗೇ ಒಂದು ಧರ್ಮದ ಅನುಯಾಯಿಗಳೂ ಇನ್ನೊಂದು ಧರ್ಮದ ತತ್ತ್ವವನ್ನು, ಆಚರಣೆಗಳ ಔಚಿತ್ಯಗಳನ್ನು ಪರೀಕ್ಷೆಗೆ ಒಳಪಡಿಸದೇ ತಮ್ಮ ಧರ್ಮವೇ

ಉಳಿದೆಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವೆಂಬ ಧೋರಣೆ ಯನ್ನು ಹೊಂದಿರುತ್ತಾರೆ. ತಮ್ಮ ಧರ್ಮವನ್ನು 'ಎಲ್ಲ' ಧರ್ಮಗಳಿ ಗಿಂತ 'ಶ್ರೇಷ್ಠ'ವೆಂದು ನಿಶ್ಚಯಿಸಬೇಕಾದರೆ ಅವರ ಬಳಿ ಯಾವ ಆಧಾರವೂ ಇರುವುದಿಲ್ಲ, ಅಥವಾ ಅಂತಹ ಸ್ವಮತಾಭಿಮಾನಿಗಳಿಗೆ ಯಾವ ಆಧಾರದ ಅಗತ್ಯವೂ ಕಂಡುಬರುವುದಿಲ್ಲ! ಇದೇ ಸ್ವಮತಾಭಿಮಾನಿಗಳಲ್ಲಿರುವ ದೊಡ್ಡ ದೋಷ. ಇಂತಹವರು ಇನ್ನೊಬ್ಬರ ಭಿನ್ನ ಅಭಿಪ್ರಾಯಗಳನ್ನು ಕೇಳಲೂ ತಯಾರಿರುವುದಿಲ್ಲ. ಮಾನವನಿಗೆ ಸ್ವಮತಾಭಿಮಾನವು ಮೂಢನಂಬಿಕೆಗಿಂಲೂ ದೊಡ್ಡ ಶತ್ರು ಎನ್ನುತ್ತಾರೆ ಸ್ವಾಮೀಜಿ. ಸಮಾಜಕ್ಕೆ ಮೂಢನಂಬಿಕೆಯುಳ್ಳವನು ಸ್ವಮತಾಭಿಮಾನಿಗಿಂತ ಅಪಾಯಕಾರಿಯಲ್ಲ. ತನ್ನ ಮೂಢನಂಬಿಕೆಯನ್ನು ಹೋಗಲಾಡಿಸುವ ಶಿಕ್ಷಣ ನೀಡಿದರೆ ಆತ ಸ್ವೀಕರಿಸಬಲ್ಲ. ಸ್ವಮತಾಭಿಮಾನಿ ಹಾಗಲ್ಲ. ಎಲ್ಲ ಧರ್ಮಗಳ ಆಚರಣೆಗಳನ್ನೂ ತಮ್ಮ ಧರ್ಮಾಚರಣೆಗಳ ಬೆಳಕಿನಿಂದಲೇ ನೋಡುತ್ತಾನೆ.

ಮತಾಂಧತೆಯ ಇಂಗ್ಲೀಷ್ ಪದ fanaticism, ಫ್ರೆಂಚ್ ಪದವಾದ fanaticus ನಿಂದ ಬಂದಿರುತ್ತದೆ. ಉತ್ಸಾಹಭರಿತ ಎಂದು ಇದರ ಅರ್ಥ. ಟೋನು ಲೆತ್ಸಾರ್ ಎಂಬ ಧಾರ್ಮಿಕ ಹಾಗೂ ಸಾಮಾಜಿಕ ಮನಶ್ಶಾಸ್ತ್ರಜ್ಞರು ಮತಾಂಧತೆಯನ್ನು ಹೀಗೆ ವಿವರಿಸುತ್ತಾರೆ: ಮತಾಂಧತೆಯೆಂದರೆ ಯಾವುದನ್ನಾದರೂ ಅತಿಯಾಗಿ, ಭಾವೋದ್ರೇಕದಿಂದ ಪ್ರಚಾರ ಮಾಡುವುದು, ಎತ್ತಿ ಹಿಡಿಯುವುದು ಅಥವಾ ಅನುಸರಿಸುವುದು. ತನ್ನ ಧರ್ಮವನ್ನೋ ಅಥವಾ ರಾಜಕೀಯ ಪಕ್ಷವನ್ನೋ ಅಥವಾ ಇನ್ನಾವುದೇ ಭಾವಧಾರೆಯನ್ನು ಉತ್ಸಾಹದಿಂದ ಬೆಂಬಲಿಸುವುದು. ಇದರಲ್ಲಿ ಸಂಕುಚಿತ ಪಂಥಭಾವನೆ ಹಾಗೂ ಸ್ವಮತಾಭಿಮಾನವೆರಡೂ ಬೆರತಿರುತ್ತವೆ. ಪರರನ್ನು ತಮ್ಮ ಮತಕ್ಕೆ ಪರಿವರ್ತಿಸುವ ಉತ್ಸಾಹ ಈ ಮತಾಂಧರಲ್ಲಿರುತ್ತದೆ. ತಮ್ಮ ಮತದ ಹಿಂಬಾಲಕರ ಸಂಖ್ಯೆ ಹೆಚ್ಚಿಸುವುದರಲ್ಲೇ ಇವರು ನಿರತರಾಗಿರುತ್ತಾರೆಯೇ ಹೊರತು ತಾವು ಅಷ್ಟು ಉತ್ಸಾಹಭರಿತರಾಗಿ ಬೆಂಬಲಿಸಿ, ಅನುಸರಿಸುತ್ತಿರುವ ಧರ್ಮವೋ, ಪಕ್ಷವೋ, ಭಾವಧಾರೆಯೋ ತಮ್ಮ ಅಭ್ಯುದಯನ್ನುಂಟು ಮಾಡುತ್ತಿರುವುದೋ ಇಲ್ಲವೋ ಎಂದು ಆಲೋಚಿಸುವುದಿಲ್ಲ. ತಮ್ಮ ಪ್ರಯೋಜನಕ್ಕಿಂತಲೂ ಹೆಚ್ಚಾಗಿ ಇವರು ತಾವು ಬೆಂಬಲಿಸುವ ಧರ್ಮದ, ಪಕ್ಷದ ಅಥವಾ ಯಾವುದೋ ಭಾವಧಾರೆಯ ಸಮರ್ಥನೆಯ ಕುರಿತು ಹೆಚ್ಚು ಚಿಂತಿಸುತ್ತಾರೆ, ಶ್ರಮಿಸುತ್ತಾರೆ. ಹೀಗಾಗಿ 'ಅಂಧ'ರಂತೆಯೇ ವರ್ತಿಸುತ್ತಾರೆ. ಧರ್ಮ ನಮ್ಮ ಆತ್ಮವಿಕಾಸಕ್ಕಾಗಿ ಇರುವ ಸಾಧನ ಮಾತ್ರ ಎಂಬುದನ್ನು ಮರೆತು ಅದನ್ನೇ ಗುರಿಯಾಗಿಸಿಕೊಂಡಿರುತ್ತಾರೆ. ಹೀಗಾಗಿ ಸಮಾಜದ ಶಾಂತ ಪರಿಸರಕ್ಕೆ ಧಕ್ಕೆಯನ್ನುಂಟುಮಾಡುತ್ತಾರೆ.

ಹಾಗಾದರೆ, ಇಂತಹ ಸಂಕುಚಿತ ಪಂಥಭಾವನೆ, ಸ್ವಮತಾಭಿಮಾನ ಹಾಗೂ ಮತಾಂಧತೆಯನ್ನು ಹೋಗಲಾಡಿಸಿ ಸೌಹಾರ್ದತೆಯನ್ನುಂಟು ಮಾಡಲು ಏನು ಮಾಡಬೇಕು? ಧಾರ್ಮಿಕ ಅನುಯಾಯಿಗಳು ಮುಕ್ತ ಮನಸ್ಸಿನಿಂದ ಪರಸ್ಪರ ಬೆರೆಯಬೇಕು, ಬೇರೆ ಬೇರೆ ಧರ್ಮಗಳ ಅಧ್ಯಯನ ನಡೆಸಬೇಕು, ವಿಚಾರ ವಿನಿಮಯ ಮಾಡಿಕೊಳ್ಳಬೇಕು, ತಮ್ಮ ಧರ್ಮದಲ್ಲಿರದ ಪರರ ಧರ್ಮದಲ್ಲಿರುವ ಅಂಶಗಳನ್ನು ಗುರುತಿಸಿ ಮೆಚ್ಚಿಕೊಳ್ಳಬೇಕು. ತಮ್ಮ ಧರ್ಮದಂತೆ ಬೇರೊಬ್ಬರ ಧರ್ಮವೂ ಸತ್ಯವೆಂದು ಸ್ವೀಕರಿಸಬೇಕು. ಎಲ್ಲ ಧರ್ಮಗಳು ಒಂದೇ ಪರಮಾತ್ಮನೆಡೆಗೆ ಕೊಂಡೊಯ್ಯುವ ಹಲವು ಮಾರ್ಗಗಳು ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬೇಕು. ಇದನ್ನು ಸೂಚಿಸಲು ಸ್ವಾಮೀಜಿ ಭಗವದ್ಗೀತೆಯ ಶ್ಲೋಕವನ್ನು ಉದ್ಧರಿಸುತ್ತ ನುಡಿಯುತ್ತಾರೆ : '' 'ಯಾರೇ ಆಗಲಿ, ಯಾವುದೇ ರೂಪದಲ್ಲೇ ಆಗಲಿ ನನ್ನ ಬಳಿಗೆ ಬಂದರೆ ನಾನು ಅವರನ್ನು ಸ್ವೀಕರಿಸುತ್ತೇನೆ; ಅಂತಿಮವಾಗಿ ನನ್ನ ಬಳಿಗೆ ಬರುವ ವಿವಿಧ ಪಥಗಳಲ್ಲಿ ಸಾಗಿ ಬಂದು ನನ್ನನ್ನೇ ಸೇರಲು ಎಲ್ಲ ಜನರೂ ಪ್ರಯತ್ನಿಸುತ್ತಿದ್ದಾರೆ' ಎಂಬ ಗೀತೆಯ ಅದ್ಭುತ ತತ್ತ್ವದ ಸತ್ಯವನ್ನು ಜಗತ್ತಿಗೆ ಸಾರುವುದಕ್ಕೆ ಈ ಸಭೆಯೊಂದೇ ಸಾಕು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೬, ೩ನೆಯ ಮುದ್ರಣ)* ಹಾಗೆಯೇ ವಿಶ್ವಧರ್ಮ ಸಮ್ಮೇಳನದ ಉದ್ದೇಶವನ್ನು ಎತ್ತಿ ತೋರಿಸುತ್ತ ಹೇಳುತ್ತಾರೆ, ''ಆದರೆ ಅವರ ಕಾಲ ಮುಗಿದಿದೆ. ಇಂದು ಬೆಳಿಗ್ಗೆ ಈ ಸಭೆಯ ಶುಭಾರಂಭವನ್ನು ಸೂಚಿಸಲು ಮೊಳಗಿದ ಘಂಟಾನಾದ ಎಲ್ಲ ಮತಾಂಧತೆಯ, ಖಡ್ಗ ಇಲ್ಲವೆ ಲೇಖನಿಯಿಂದ ಸಾಧಿಸಿದ ಮತೀಯ ಹಿಂಸೆಗಳ, ಒಂದೇ ಗುರಿಯೆಡೆಗೆ ಸಾಗುತ್ತಿದ್ದರೂ ಪಥಿಕರಲ್ಲಿ ತಲೆದೋರುವ ಅನುದಾರವಾದ ಎಲ್ಲ ಮನಸ್ತಾಪಗಳ ಅಂತ್ಯಕ್ರಿಯೆಯನ್ನು ಸೂಚಿಸುವ ಘಂಟಾನಾದವೂ ಆಗಲಿ ಎಂಬುದೇ ನನ್ನ ಆಶಯ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೬, ೩ನೆಯ ಮುದ್ರಣ)*

ಹಾಗೆ ಧಾರ್ಮಿಕ ಐಕ್ಯತೆಯ ಸಮಾನ ಭೂಮಿಕೆಯನ್ನು ಪರಸ್ಪರ ಧರ್ಮ ಪರಿವರ್ತನೆಯಿಂದ, ಯಾವುದೇ ಒಂದು ಧರ್ಮವನ್ನುಳಿದು ಮಿಕ್ಕೆಲ್ಲ ಧರ್ಮಗಳನ್ನು ನಾಶ ಮಾಡುವುದರಿಂದ ಕಂಡುಕೊಳ್ಳಬಹುದೆ? ಖಂಡಿತ ಅಲ್ಲ. ಸ್ವಾಮೀಜಿ ಆ ಬಗ್ಗೆ ತಿಳಿಸುತ್ತ ಹೇಳುತ್ತಾರೆ, ಆದರೆ ಅಂಥ ಐಕ್ಯತೆ ಯಾವುದಾದರೂ ಒಂದು ಧರ್ಮದ ವಿಜಯದಿಂದ, ಇತರ ಧರ್ಮಗಳ ನಾಶದಿಂದ ಸಾಧಿಸಲಾಗುತ್ತದೆ ಎಂದು ಯಾರಾದರೂ ಭಾವಿಸಿದರೆ ಅವರಿಗೆ ನಾನು ಹೀಗೆ ಹೇಳಬೇಕಾಗಿದೆ: 'ಸೋದರನೆ, ನಿನ್ನ ಬಯಕೆ ನೆರವೇರುವುದು ಅಸಾಧ್ಯ.' ಕ್ರೈಸ್ತರು ಹಿಂದುಗಳಾಗಲಿ ಎಂಬುದು ನನ್ನ ಬಯಕೆಯೆ? ಖಂಡಿತ ಅಲ್ಲ. ಹಿಂದುಗಳು, ಬೌದ್ಧರು ಕ್ರೈಸ್ತರಾಗಲಿ ಎಂಬುದು ನನ್ನ ಬಯಕೆಯೆ? ಖಂಡಿತ ಅಲ್ಲ.... ಕ್ರೈಸ್ತ ಹಿಂದು ಅಥವಾ ಬೌದ್ಧನಾಗಬೇಕಿಲ್ಲ. ಹಿಂದುವಾಗಲಿ ಬೌದ್ಧ ಅಥವಾ ಕ್ರೈಸ್ತನಾಗಬೇಕಿಲ್ಲ. ಪ್ರತಿಯೊಬ್ಬನೂ ಇತರರ ಮನೋಭಾವವನ್ನು ಗ್ರಹಿಸಬೇಕು. ಆದರೆ ತನ್ನ ವೈಯಕ್ತಿಕತೆಯನ್ನು ಉಳಿಸಿಕೊಂಡು ತನ್ನದೇ ಬೆಳವಣಿಗೆಯ ನಿಯಮಗಳಿಗೆ ಅನುಗುಣವಾಗಿ ಬೆಳೆಯಬೇಕು. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ,*

*೧.೨೫, ೪ನೆಯ ಮುದ್ರಣ)* ಚಿಕಾಗೋದಲ್ಲಿ ಹಿಂದೂ ಧರ್ಮದ ಮೇಲೆ ನೀಡಿದ ಉಪನ್ಯಾಸದಲ್ಲಿ ಸ್ವಾಮೀಜಿ ಹಿಂದೂಧರ್ಮದ ಉಳಿವಿಗೆ ಅದರ ಈ ಗುಣವೇ ಕಾರಣವೆಂದು ಸೂಚಿಸಿದ್ದಾರೆ. ಆದರೆ ಭರತಖಂಡದಲ್ಲಿ ಒಂದು ಪಂಗಡವಾದ ಮೇಲೆ ಮತ್ತೊಂದು ಪಂಗಡವೆದ್ದು ವೈದಿಕಧರ್ಮದ ತಳಹದಿಯನ್ನೇ ಅಲುಗಾಡಿಸುವಂತೆ ಕಂಡಿತು. ಭಯಂಕರವಾದ ಭೂಕಂಪವಾದಾಗ ಸಾಗರದ ತೀರದಲ್ಲಿ ನೀರು ಸ್ವಲ್ಪ ಮಾತ್ರ ಹಿಂದೆ ಸಾಗಿ ಪುನಃ ಸಾವಿರ ಪಾಲು ವೇಗದಿಂದ ಎಲ್ಲವನ್ನೂ ಆವರಿಸುವ ಪ್ರಚಂಡ ಪ್ರವಾಹವಾಗಿ ನುಗ್ಗಿಬರುವಂತೆ ಈ ಘನಗರ್ಜನೆ ನಿಂತ ಮೇಲೆ ಮೂಲಧರ್ಮವೆಂಬ ಅಗಾಧವಾದ ದೇಹ ಈ ಪಂಗಡಗಳನ್ನೆಲ್ಲಾ ಹೀರಿಕೊಂಡಿತು, ಜೀರ್ಣಿಸಿ ರಕ್ತಗತ ಮಾಡಿಕೊಂಡಿತು. ಹಿಂದೂ ಧರ್ಮವು ತನ್ನತನವನ್ನು ಉಳಿಸಿಕೊಂಡು, ತನ್ನ ಅಸ್ತಿತ್ವಕ್ಕೆ ಧಕ್ಕೆ ತಂದ ಮಿಕ್ಕೆಲ್ಲ ಧರ್ಮಗಳ ಅಂಶಗಳನ್ನು ಹೀರಿಕೊಂಡುದೇ ಇಂದಿಗೂ ಹಚ್ಚಹಸುರಾಗಿ ಅದು ನಿಂತಿರುವುದಕ್ಕೆ ಸಾಕ್ಷಿ.

ಸರ್ವಧರ್ಮ ಸಮ್ಮೇಳನದ ಅಂತಿಮ ದಿನದ ಅಧಿವೇಶನದಲ್ಲಿ ಉಪನ್ಯಾಸ ನೀಡುತ್ತ ಸ್ವಾಮೀಜಿ ಹೇಳುತ್ತಾರೆ, ''ಸರ್ವಧರ್ಮ ಸಮ್ಮೇಳನವು ಜಗತ್ತಿಗೆ ಏನನ್ನಾದರೂ ಪ್ರಕಟಪಡಿಸಿದ್ದರೆ ಅದು ಇದು: ಪಾವಿತ್ರ್ಯ, ಪರಿಶುದ್ಧತೆ, ದಾನ, ದಯೆಗಳು ಯಾವುದೇ ಒಂದು ಧರ್ಮದ ಸ್ವಂತ ಆಸ್ತಿ ಅಲ್ಲ; ಪ್ರತಿಯೊಂದು ಧರ್ಮವೂ ಅತ್ಯಂತ ಉದಾರಚರಿತವಾದ ಸ್ತ್ರೀಪುರುಷರನ್ನು ರೂಪಿಸಿದೆ. ಇಷ್ಟೆಲ್ಲ ಸಾಕ್ಷ್ಯಾಧಾರಗಳು ಇರುವಾಗ ಯಾರಾದರೂ ತನ್ನ ಧರ್ಮವೊಂದೇ ಉಳಿಯತಕ್ಕದ್ದು, ಇತರ ಧರ್ಮಗಳು ನಾಶಹೊಂದತಕ್ಕವು ಎಂಬ ಭ್ರಾಂತಿಯಲ್ಲಿದ್ದರೆ ಅವನ ವಿಷಯದಲ್ಲಿ ನನಗೆ ಅಪಾರವಾದ ಮರುಕವಿದೆ. ಅವನಿಗೆ ನಾನು ಹೇಳುವುದಿಷ್ಟೆ— ಯಾರು ಎಷ್ಟೇ ವಿರೋಧಿಸಿದರೂ, ಪ್ರತಿಯೊಂದು ಧರ್ಮದ ಧ್ವಜದ ಮೇಲೂ ಬಹುಬೇಗ ಈ ಮಾತುಗಳು ಬರೆಯಲ್ಪಡುತ್ತವೆ: 'ಹೋರಾಟವಲ್ಲ; ಸೌಹಾರ್ದ', 'ವಿನಾಶವಲ್ಲ', 'ಸ್ವೀಕಾರ', 'ವೈಮನಸ್ಯವಲ್ಲ', 'ಸಾಮರಸ್ಯ ಮತ್ತು ಶಾಂತಿ'. *(ಸ್ವಾಮಿ ವಿವೇಕಾನಂದರ ಕೃತಿ ಶ್ರೇಣಿ, ೧.೨೬, ೪ನೆಯ ಮುದ್ರಣ)* ಯಾವುದೇ ಧರ್ಮದ ಸಂತರ ಜೀವನವನ್ನು ನಾವು ಪರಿಶೀಲಿಸಿದರೆ ಅವರಲ್ಲಿ ಧರ್ಮದ ಮೂಲಭೂತ ಅಂಶಗಳಾದ ದಯೆ, ಪಾವಿತ್ರ್ಯ, ಪರಿಶುದ್ಧತೆ, ದಾನ ಕಂಡುಬರುವುದು ಸತ್ಯ. ಧರ್ಮದ ದಿವ್ಯಗುಣಗಳು ದೇವಸ್ಥಾನ, ಚರ್ಚು, ಮಸೀದಿಗಳಲ್ಲ. ಯಾವ ಬಾಹ್ಯ ಆಚರಣೆಗಳೂ ಅಲ್ಲ. ಈ ಮೇಲೆ ಹೇಳಿದ ಗುಣಗಳು ಯಾವ ವ್ಯಕ್ತಿಯಲ್ಲಿ ವ್ಯಕ್ತಗೊಂಡಿವೆಯೋ ಅವನೇ ಧಾರ್ಮಿಕ. ಈ ತಥ್ಯವನ್ನು ಅರಿತುಕೊಂಡರೆ ಧರ್ಮದ ಬಾಹ್ಯಸ್ವರೂಪವನ್ನು ಕಂಡು ಯಾರೂ ಅಸಹನೆ ವ್ಯಕ್ತಪಡಿಸಬೇಕಾಗಿಲ್ಲ. 

# ಹಿಂದೂಧರ್ಮದ ಪರಿಪೂರ್ಣತೆ - ಬೌದ್ಧಧರ್ಮ

## ಚಿಕಾಗೋ ಉಪನ್ಯಾಸಗಳಲ್ಲಿ ಬೌದ್ಧ ಧರ್ಮ ಕುರಿತ ಉಪನ್ಯಾಸ

**ಸ್ವಾಮಿ ವೀರೇಶಾನಂದ**



ಜಗತ್ತಿಗೆ ವಿಶ್ವವಿಶಾಲ ಆದರ್ಶ, ಧ್ಯೇಯಗಳನ್ನು ಸಾರಿ ತನ್ನ ಉಜ್ಜ್ವಲ ಜೀವನದ ಮೂಲಕ ಶ್ರೇಷ್ಠ ಮೌಲ್ಯಗಳನ್ನು ಮನುಕುಲಕ್ಕೆ ಕೊಟ್ಟು ಹೋದ ಬುದ್ಧನ ಮೇಲೆ ಸ್ವಾಮೀಜಿಯವರಿಗೆ ಅಪಾರ ಗೌರವವಿತ್ತು. ಚಿಕಾಗೋ ಉಪನ್ಯಾಸಗಳಲ್ಲಿ ಅವರು ನೀಡಿದ ಬೌದ್ಧಧರ್ಮವನ್ನು ಕುರಿತ ಭಾಷಣದ ಬಗ್ಗೆ ಇಲ್ಲಿ ಬರೆದಿರುವ ಪೂಜ್ಯ ಸ್ವಾಮೀಜಿಯವರು **'ವಿವೇಕ ಪ್ರಭ'** ಪತ್ರಿಕೆಯ ಹಿಂದಿನ ಸಂಪಾದಕರಾಗಿದ್ದರು. ಉತ್ತಮ ವಾಗ್ಮಿಗಳೂ, ಸಂಸ್ಕೃತ ವಿದ್ವಾಂಸರೂ ಆಗಿರುವ ಅವರು ಈ ಪತ್ರಿಕೆಯಲ್ಲಿ ನಿಯತವಾಗಿ ಹಲವು ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ. ಪ್ರಸ್ತುತ ಆಸ್ಟ್ರೇಲಿಯಾದ ವೇದಾಂತ ಸೆಂಟರ್ ಆಫ್ ಸಿಡ್ನಿಯಲ್ಲಿ ಅವರು ಸೇವೆ ಸಲ್ಲಿಸುತ್ತಿದ್ದಾರೆ.

### ಅವಿನಾಭಾವ ನಂಟು

**ಯು**ವಕನಾಗಿದ್ದಾಗ ನರೇಂದ್ರನು ನಿಯಮಬದ್ಧವಾಗಿ ಧ್ಯಾನ ಮಾಡುತ್ತಿದ್ದನು. ಮೊದಮೊದಲು ಬ್ರಾಹ್ಮಸಮಾಜದ ಪದ್ಧತಿಯ ಪ್ರಕಾರ ನಿರಾಕಾರ ಸಗುಣಬ್ರಹ್ಮದ ಧ್ಯಾನವನ್ನು ಕೈಗೊಳ್ಳುತ್ತಿದ್ದನು. ತದನಂತರ ತನ್ನ ಹೃದಯಾಂತರಾಳದಿಂದ ಹೀಗೆ ಪ್ರಾರ್ಥಿಸತೊಡಗಿದನು: ''ಹೇ ಪರಮಾತ್ಮ, ದಯವಿಟ್ಟು ನನ್ನ ಮೇಲೆ ಕೃಪೆಮಾಡು. ಸತ್ಯಸ್ವರೂಪನಾದ ನಿನ್ನ ನಿಜರೂಪವನ್ನು ನನಗೆ ಮೈದೋರು.'' ಹೀಗೆ ಪ್ರಾರ್ಥಿಸಿದ ಮೇಲೆ ತನ್ನ ಮನಸ್ಸಿನಿಂದ ಉಳಿದೆಲ್ಲ ಚಿಂತನೆಗಳನ್ನೂ ಹೊರದೂಡುತ್ತಿದ್ದನು. ಸ್ವಲ್ಪ ಹೊತ್ತಿನ ನಂತರ, ಅವನ ಮನಸ್ಸು ಆತ್ಮಾರಾಮವಾಗುತ್ತಿತ್ತು; ಚಿನ್ಮಯ ಆತ್ಮನಲ್ಲಿ ನೆಲೆಗೊಳ್ಳುತ್ತಿತ್ತು. ಅವನಿಗೆ ತನ್ನ ದೇಹದ ಪರಿವೆಯೇ ಇರುತ್ತಿರಲಿಲ್ಲ; ಸಮಯದ ಪರಿಜ್ಞಾನವೇ ಇರುತ್ತಿರಲಿಲ್ಲ. ರಾತ್ರಿಯ ಗಾಢ ನಿಶ್ಶಬ್ದದ ಸಮಯದಲ್ಲಿ ಅವನು ಹೀಗೆ ಧ್ಯಾನಿಸುತ್ತಿದ್ದನು. ಅವನ ಮನೆಯವರೆಲ್ಲರೂ ನಿದ್ರಿಸುತ್ತಿದ್ದ ಸಮಯವದು. ಆಗ ಅವನು ವರ್ಣಿಸಲು ಅಸಾಧ್ಯವಾದ ಶಾಂತಿ ಮತ್ತು ಆನಂದಗಳನ್ನು ಅನುಭವಿಸುತ್ತಿದ್ದನು. ಸ್ವಲ್ಪಕಾಲದಲ್ಲಿಯೇ ಒಂದು ತೆರನ ಆನಂದದ ಉನ್ಮಾದ ಅವನನ್ನು ಕವಿಯುತ್ತಿತ್ತು. ಹೀಗಿರುವಾಗ, ತನ್ನ ಆಸನದಿಂದ ಎದ್ದೇಳಲೂ ಅವನಿಗೆ ಸಾಧ್ಯವಾಗುತ್ತಿರಲಿಲ್ಲ. ಒಂದು ರಾತ್ರಿ ನರೇಂದ್ರನು ತನ್ನ ಧ್ಯಾನವನ್ನು ಸಂಪೂರ್ಣಗೊಳಿಸಿ, ಕುಳಿತುಕೊಂಡಾಗ ಭಗವಾನ್ ಬುದ್ಧನ ದರ್ಶನವನ್ನು ಪಡೆದುಕೊಂಡು ಪುನೀತನಾದನು. ಮುಂದೆ ಅವನೇ ಹೀಗೆ ಹೇಳಿಕೊಳ್ಳುತ್ತಾನೆ: ''... (ಧ್ಯಾನದ ಅಂತಿಮ ಸಮಯದಲ್ಲಿ) ನಾನು ಒಬ್ಬ ಸಂನ್ಯಾಸಿಯ ಅದ್ಭುತ ಆಕೃತಿಯು

ನನ್ನ ಮುಂದೆಯೇ, ಅನತಿ ದೂರದಲ್ಲಿಯೇ, ಬಂದು ನಿಂತಿರುವುದನ್ನು ಹಠಾತ್ತಾಗಿ ನೋಡಿದೆನು. ಅವನು ತನ್ನ ದಿವ್ಯ ತೇಜಸ್ಸಿನಿಂದ ಇಡೀ ಕೊಠಡಿಯನ್ನು ಬೆಳಗಿಬಿಟ್ಟಿದ್ದನು. ಕಾಷಾಯವಸ್ತ್ರವನ್ನು ಧರಿಸಿದ್ದ ಅವನು ಕಮಂಡಲುವನ್ನು ಕೈಯಲ್ಲಿ ಹಿಡಿದುಕೊಂಡಿದ್ದನು. ಅವನ ಮುಖವು ಅವನಲ್ಲಿನ ಅಂತರ್ಮುಖತೆ ಮತ್ತು ಎಲ್ಲ ಸಂಗತಿಗಳ ಬಗೆಗಿನ ಉದಾಸೀನಭಾವದಿಂದ ಹುಟ್ಟುವ ಶಾಂತ ಹಾಗೂ ನೀರವಭಾವದಿಂದ ಕಂಗೊಳಿಸುತ್ತಿತ್ತು. ಅವನನ್ನು ಕಂಡು ನಾನು ಅಚ್ಚರಿಗೊಂಡೆ; ಅವನ ಕಡೆಗೆ ಆಕರ್ಷಿತನಾದೆ. ಬಳಿಕ ಅವನು ನನ್ನೆಡೆಗೆ ನಿಧಾನವಾಗಿ ಹೆಜ್ಜೆಯಿಡುತ್ತ ನಡೆದು ಬರಲಾರಂಭಿಸಿದನು. ಅವನ ಕಣ್ಣುಗಳು ನನ್ನ ಮೇಲೆಯೇ ನೆಟ್ಟಿದ್ದವು. ಅವನು ಏನನ್ನೋ ಹೇಳಲು ಬಯಸುತ್ತಿದ್ದನು. ಆದರೆ ನನ್ನನ್ನು ಒಂದು ರೀತಿಯ ಭಯ ಆವರಿಸಿಬಿಟ್ಟಿತು. ನನಗೆ ಕೂಡಲಾಗಲಿಲ್ಲ. ಆಸನದಿಂದ ಎದ್ದು, ಕೊಠಡಿಯ ದ್ವಾರವನ್ನು ತೆಗೆದು, ಒಡನೆ ಹೊರಕ್ಕೆ ಹೊರಟುಹೋದೆ. ಮುಂದಿನ ಕ್ಷಣವೇ ಹೀಗೆ ಭಾವಿಸಿದೆ: ''ಇದೇಕೆ ಈ ಅರ್ಥವಿಲ್ಲದ ಹೆದರಿಕೆ?'' ನಾನು ಧೈರ್ಯ ಗಳಿಸಿಕೊಂಡು, ಆ ಸಂನ್ಯಾಸಿಯ ಮಾತುಗಳನ್ನು ಆಲಿಸಲು ಮತ್ತೆ ಕೊಠಡಿಯ ಒಳಗೆ ಹೋದೆ. ಅವನು ಅಂತರ್ಧಾನನಾಗಿದ್ದನು. ಬಹಳ ಕಾಲದವರೆಗೆ ಅವನಿಗಾಗಿ ವ್ಯರ್ಥವಾಗಿ ನಾನು ಕಾಯುತ್ತಿದ್ದೆ. ''ಅವನ ಮಾತುಗಳನ್ನು ಕೇಳಿಸಿಕೊಳ್ಳದೆ ಓಡಿ ಹೋದೆನಲ್ಲ, ಎಂಥ ಮೂರ್ಖ ನಾನು'' ಎಂದು ಹತಾಶನಾಗಿಬಿಟ್ಟೆ ಮತ್ತು ಪಶ್ಚಾತ್ತಾಪಪಟ್ಟೆ. ನಾನು ಬಹಳ ಸಂನ್ಯಾಸಿಗಳನ್ನು ನೋಡಿದ್ದೇನೆ. ಆದರೆ ಈ ಸಂನ್ಯಾಸಿಯ ಮುಖಾರವಿಂದದಲ್ಲಿ ಕಂಡುಬಂದಂತಹ ಅಸಾಧಾರಣ ಕಾಂತಿಯನ್ನು ಯಾರಲ್ಲೂ ನಾನು ಕಂಡಿಲ್ಲ. ನನ್ನ ಹೃದಯಲ್ಲಿ ಆ ಮುಖವು ಅಳಿಸಲಾಗದ ಮುದ್ರೆಯನ್ನು ಮೂಡಿಸಿದೆ. ಇದು ಒಂದು ಆಭಾಸವೇ ಇರಬಹುದು. ಆದರೆ ಅಂದು ನಾನು ಭಗವಾನ್ ಬುದ್ಧನನ್ನೇ ಕಂಡೆನೆಂದು ಅನೇಕ ಸಲ ಅಂದುಕೊಳ್ಳುತ್ತೇನೆ.''

ಇದಲ್ಲದೆ ಶ್ರೀರಾಮಕೃಷ್ಣರು ಕಾಶಿಪುರದಲ್ಲಿ ಇದ್ದಾಗಲೂ, ನರೇಂದ್ರನು ಅಲ್ಲಿಂದ ಬುದ್ಧಗಯೆಗೆ ಹೇಳದೆಯೇ ಪರಾರಿಯಾಗಿಬಿಟ್ಟಿದ್ದನು. ಅಲ್ಲಿನ ಬೋಧಿವೃಕ್ಷದ ಬುಡದಲ್ಲಿ ಕುಳಿತು ಧ್ಯಾನಮಾಡಿದ್ದನು. ಹೀಗೆ ಸ್ವಾಮಿ ವಿವೇಕಾನಂದರಿಗೂ ಭಗವಾನ್ ಬುದ್ಧನಿಗೂ ಅವಿನಾಭಾವ ನಂಟು ಇದ್ದೇ ಇತ್ತು.

### ಚಿಕಾಗೋದಲ್ಲಿ ಬೌದ್ಧಧರ್ಮದ ವಿಶ್ಲೇಷಣೆ

ಚಿಕಾಗೋ ಸರ್ವಧರ್ಮ ಸಮ್ಮೇಳನಕ್ಕೆ ಸ್ವಾಮಿ ವಿವೇಕಾನಂದರು ಹೋಗಿದ್ದು ಹಿಂದೂಧರ್ಮದ ಪ್ರತಿನಿಧಿಯಾಗಿ. ಆದರೆ, ಅಲ್ಲಿ ಅವರು ಪರಿಚಯಿಸಿದ ಧಾರ್ಮಿಕ ಪರಿಕಲ್ಪನೆಗಳು ವಿಶ್ವವ್ಯಾಪಿಯಾಗಿದ್ದವು; ಸರ್ವಾಂಗೀಣವಾಗಿದ್ದವು; ಉದಾರತೆಯಿಂದ ಕೂಡಿದ್ದವು. ಹಿಂದೂಧರ್ಮವನ್ನು ವಿಶ್ವಧರ್ಮದ ದರ್ಜೆಗೆ ಏರಿಸಿ, ಅದನ್ನು ಚಿಕಾಗೋ ಸಮ್ಮೇಳನದ ಜಾಗತಿಕ ವೇದಿಕೆಯಲ್ಲಿ ಪ್ರಸ್ತುತಪಡಿಸಿದರು ಸ್ವಾಮೀಜಿ. ಆ ಮೂಲಕ ಭಾರತೀಯರಿಗೆ ಮಾತ್ರವಲ್ಲ, ಇಡೀ ಜಗತ್ತಿನ ಜನರಿಗೆಲ್ಲ ಮಹದುಪಕಾರವನ್ನು ಮಾಡಿದರು; ಧಾರ್ಮಿಕತೆಯ ಹೊಸ ವಿಶ್ವ ಆಂದೋಲನವನ್ನು ಹುಟ್ಟುಹಾಕಿದರು; ಜಾಗತಿಕ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಗುರುತರವಾದೊಂದು ಕ್ರಾಂತಿಯನ್ನೇ ಮಾಡಿದರು.

ಸ್ವಾಮಿ ವಿವೇಕಾನಂದರು ಭಗವಾನ್ ಬುದ್ಧ ಮತ್ತು ಬೌದ್ಧಧರ್ಮದ ಬಗ್ಗೆ ಅಮೆರಿಕೆಯಲ್ಲಿ ಅನೇಕ ಭಾಷಣಗಳನ್ನು ಮಾಡಿದರು. ಅವುಗಳಲ್ಲೆಲ್ಲ ಚಿಕಾಗೋ ಸರ್ವಧರ್ಮ ಸಮ್ಮೇಳನದ ಸಂದರ್ಭದಲ್ಲಿ ೨೬, ಸೆಪ್ಟೆಂಬರ್, ೧೮೯೩ರಂದು ಅವರು ಮಾಡಿದ ಭಾಷಣ ಅತ್ಯಂತ ಸಂಕ್ಷಿಪ್ತವಾದುದು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬಂತೆ ಚಿಕ್ಕದಾದರೂ ಅದರ ವಿಷಯದ ಹರವು ಗಂಭೀರವಾದುದು. ಬುದ್ಧನ ಮತ್ತು ಬೌದ್ಧಧರ್ಮದ ಬಗ್ಗೆ ಕ್ರಾಂತಿಕಾರಕ ನಿಲುವುಗಳನ್ನು ಸ್ವಾಮೀಜಿ ಬಹಳ ಧೈರ್ಯದಿಂದ ಇಲ್ಲಿ ವ್ಯಕ್ತಪಡಿಸಿದ್ದಾರೆ. ಬುದ್ಧನು ಬೌದ್ಧಧರ್ಮಕ್ಕೆ ಹೇಗೋ, ಹಿಂದೂಧರ್ಮದ ಅನುಯಾಯಿಗಳಿಗೂ ಹೇಗೆ ಆರಾಧನಾಮೂರ್ತಿಯಾಗಿದ್ದಾನೆ ಎನ್ನುವುದನ್ನು ಹೃದಯಂಗಮವಾಗಿ ಬಿಂಬಿಸಿದ್ದಾರೆ.

ಬುದ್ಧ ಮತ್ತು ಅವನ ಧರ್ಮವನ್ನು ಆಧ್ಯಾತ್ಮಿಕ ದೃಷ್ಟಿಕೋನದಲ್ಲಿ ಹೇಗೋ ಹಾಗೆ, ಚಾರಿತ್ರಿಕ ಮತ್ತು ಸಾಮಾಜಿಕ ನೆಲೆಗಟ್ಟುಗಳಲ್ಲಿಯೂ ಕೂಡ ವಿಮರ್ಶಾತ್ಮಕವಾಗಿ ಪರೀಕ್ಷಿಸಿನೋಡುವ ಮಹಾನ್ ದೃಢತೆ, ಗಾಂಭೀರ್ಯಗಳನ್ನು ಸ್ವಾಮೀಜಿ ಇಲ್ಲಿ ತೋರಿಸುತ್ತಾರೆ. ಹೀಗಾಗಿ ಈ ಪ್ರವಚನವು ಅತ್ಯಂತ ಮಹತ್ವವನ್ನು ಪಡೆದುಕೊಳ್ಳುತ್ತದೆ; ವಿಶ್ಲೇಷಣೆಗೆ ಒಳಪಡಿಸಲೇಬೇಕಾದ ಚಾರಿತ್ರಿಕ ದಾಖಲೆಯಾಗಿದೆ. ಪ್ರವಚನದ ಶೀರ್ಷಿಕೆಯೇ ವಿಶಿಷ್ಟವಾಗಿದೆ. **'ಬೌದ್ಧಧರ್ಮ – ಹಿಂದೂಧರ್ಮದ ಪರಿಪೂರ್ಣತೆ'** ಎಂಬುದೇ ಈ ಶೀರ್ಷಿಕೆ. ಬೌದ್ಧಧರ್ಮವು ಹಿಂದೂಧರ್ಮದಿಂದ ಬಂಡಾಯವೆದ್ದು ಜನಿಸಿದ ಧರ್ಮವಾಗಿದೆ; ಬುದ್ಧನು ಹಿಂದೂಧರ್ಮದ ನಂಬಿಕೆಗಳ ವಿರುದ್ಧ ಸೆಟೆದು ಎದ್ದವನು ಎಂಬುದು ಇತಿಹಾಸಜ್ಞರ ಸಾಮಾನ್ಯ ಅಭಿಪ್ರಾಯ. ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರೂ ಬಹುಮಟ್ಟಿಗೆ ಈ ನಿಲುವನ್ನೇ ತಳೆದಿದ್ದಾರೆ. ಆದರೆ ಧಾರ್ಮಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ಹಿಂದೂಧರ್ಮ ಮತ್ತು ಬೌದ್ಧಧರ್ಮಗಳ ನಡುವಿನ ಸಂಬಂಧವನ್ನು ಪೂರ್ವಾಗ್ರಹರಹಿತವಾಗಿ ವಿಶ್ಲೇಷಿಸಿದ ಚಿಂತಕರು ಬಹಳ ವಿರಳ. ಅಂಥವರಲ್ಲಿ ಎದ್ದು ಕಾಣುವವರು, ಸ್ವಾಮಿ ವಿವೇಕಾನಂದರು. ಇಲ್ಲಿ ಎರಡು ಮಹಾನ್ ಧರ್ಮಗಳ ನಡುವೆ ಸಂಘರ್ಷವನ್ನು ಮೂಡಿಸುವ ಛಿದ್ರತೆಯ ಮನೋಭಾವವನ್ನು ಕಾಣುವುದಿಲ್ಲ. ಅದಕ್ಕೆ ಬದಲಾಗಿ, ಎರಡೂ ಧರ್ಮಗಳ ನಡುವೆ ಇರುವ ತಾಯಿ-ಮಗುವಿನ ಮಧುರ ಸಂಬಂಧವನ್ನು ಅನ್ವೇಷಿಸುವ, ತಾರ್ಕಿಕವಾಗಿ ವಿಶ್ಲೇಷಿಸುವ ಪ್ರಾಮಾಣಿಕ ಪ್ರಯತ್ನವನ್ನು ಕಾಣುತ್ತೇವೆ. ಈ ಪ್ರವಚನದಲ್ಲಿ ಬೌದ್ಧಿಕತೆಯ ಹೊಳಪಿನ ಜೊತೆಗೆ, ಧಾರ್ಮಿಕ ಶ್ರದ್ಧೆ ಮತ್ತು





ಆಧ್ಯಾತ್ಮಿಕತೆಯ ಅನುಭೂತಿಯ ಪ್ರಕಾಶ ಧಾರಾಳವಾಗಿ ಕಾಣ ಸಿಗುತ್ತದೆ. ಈ ವಿಶಿಷ್ಟತೆಗಳೇ ಈ ಭಾಷಣವನ್ನು ಅತ್ಯಂತ ಅಪೂರ್ವ ವಾದ ಸಾಹಿತ್ಯವನ್ನಾಗಿಸಿದೆ.

### ನಾನೂ ಒಬ್ಬ ಬೌದ್ಧ

ಈ ಪ್ರವಚನದ ಮೊದಲಲ್ಲೇ ನಾನೊಬ್ಬ ಬೌದ್ಧನಲ್ಲ ಎಂದು ಸ್ವಾಮೀಜಿ ಹೇಳಿಕೊಳ್ಳುತ್ತಾರೆ. ಆದರೂ ಇನ್ನೊಂದು ಅರ್ಥದಲ್ಲಿ ನಾನೊಬ್ಬ ಬೌದ್ಧನೇ ಎಂದು ಅದೇ ಉಸಿರಿನಲ್ಲಿ ಹೇಳುತ್ತಾರೆ. ಈ ಅದ್ಭುತ ಹೇಳಿಕೆಯೇ ಸ್ವಾಮೀಜಿಯವರ ಪ್ರವಚನಕ್ಕೆ ಆರಂಭದ ಮೆರುಗನ್ನು ನೀಡುತ್ತದೆ. ಚೀನಾ, ಜಪಾನ್, ಶ್ರೀಲಂಕಾ ಮೊದ ಲಾದ ಬೌದ್ಧದೇಶಗಳಲ್ಲಿ ಬೌದ್ಧಗುರುವಿನ ಬೋಧನೆಗಳನ್ನು ಜನರು ಅನುಸರಿಸುತ್ತಾರೆ. ಆದರೆ ಭಾರತವು ಆ ಮಹಾಪುರುಷ ನನ್ನು ಭಗವಂತನ ಅವತಾರವೆಂದೇ ಆರಾಧಿಸುತ್ತದೆ. ಅಂಥ ಆರಾಧಕನು ತಾವು ಎಂದು ಸ್ವಾಮಿ ವಿವೇಕಾನಂದರ ಈ ಮಾತಿನ ಅರ್ಥ. ತಾವು ಬೌದ್ಧಧರ್ಮವನ್ನು ಟೀಕಿಸುತ್ತಿಲ್ಲ. ಅದಕ್ಕೆ ಬದ ಲಾಗಿ ಬುದ್ಧನನ್ನು ಭಗವಂತನೆಂದೇ ಹಿಂದೂಗಳಾದ ನಾವು ಆರಾ ಧಿಸುತ್ತೇವೆ. ''ಅಂಥವನನ್ನು ನಾನು ಹೇಗೆತಾನೇ ಟೀಕಿಸಲಿ?'' ಎಂದು ಸ್ವಾಮೀಜಿ ಉದ್ಗಾರವೆತ್ತುತ್ತಾರೆ. ಆದರೆ ಬುದ್ಧನ ಉಪ ದೇಶಗಳನ್ನು ಅವನ ಶಿಷ್ಯರೇ ಸರಿಯಾಗಿ ಅರ್ಥಮಾಡಿಕೊಂಡಿಲ್ಲ ಎಂದು ವಿಷಾದ ವ್ಯಕ್ತಪಡಿಸುತ್ತಾರೆ. ಹಿಂದೂಧರ್ಮವು ವೈದಿಕ ಧರ್ಮ. ಅದಕ್ಕೂ ಇಂದು ನಾವು ಯಾವುದನ್ನು ಬೌದ್ಧಧರ್ಮ ವೆಂದು ಕರೆಯುತ್ತೇವೆಯೋ, ಆ ಧರ್ಮಕ್ಕೂ ಇರುವ ಸಂಬಂಧ ವನ್ನು ವಿವರಿಸಲು ಒಂದು ಐತಿಹಾಸಿಕ ಉದಾಹರಣೆಯನ್ನು ಸ್ವಾಮೀಜಿ ನೀಡುತ್ತಾರೆ. ಯಹೂದಿ ಧರ್ಮ ಮಾತೃಧರ್ಮ; ಕ್ರೈಸ್ತಧರ್ಮವು ಅದರಿಂದ ಹೊರಬಂದ ಶಿಶು. ಇದರಂತೆಯೇ ಹಿಂದೂಧರ್ಮ ಮತ್ತು ಬೌದ್ಧಧರ್ಮಗಳ ಸಂಬಂಧವು ಕೂಡ ಎಂದು ಸ್ವಾಮೀಜಿ ಪ್ರತಿಪಾದಿಸುತ್ತಾರೆ. ಕ್ರಿಸ್ತನು ಮೂಲತಃ ಯಹೂದಿ; ಶಾಕ್ಯಮುನಿಯು ಮೂಲತಃ ಹಿಂದೂ ಎನ್ನುವುದನ್ನು ನಮಗೆ ಜ್ಞಾಪಿಸುತ್ತಾರೆ. ಯಹೂದಿಗಳು ಕ್ರಿಸ್ತನನ್ನು ತಿರಸ್ಕರಿಸಿ ದರು; ಆದರೆ ಹಿಂದೂಗಳು ಬೌದ್ಧನನ್ನು ವಿಷ್ಣುವಿನ ಅವತಾರ ವೆಂದು ಪರಿಗಣಿಸಿ, ಆರಾಧಿಸುತ್ತಾರೆ. ಇದೇ ಈ ಎರಡು ಧಾರ್ಮಿಕ ಜೋಡಿ ಸಂಬಂಧಗಳ ನಡುವಣ ಐತಿಹಾಸಿಕ ವ್ಯತ್ಯಾಸ.

### ಹಿಂದೂಗಳು ಕಂಡಂತೆ ಬುದ್ಧ

ಹಿಂದೂಗಳು ಬುದ್ಧನ ಬಗ್ಗೆ ತಳೆದ ನಿಲುವಿನ ಬಗ್ಗೆ ಆಧುನಿಕ ಇತಿಹಾಸಜ್ಞರು ಅಪಾರ್ಥಗಳನ್ನು ಕಲ್ಪಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಬುದ್ಧನ ಬಗ್ಗೆ ಸ್ವಾಮೀಜಿಯವರ ಸ್ಪಷ್ಟವಾದ ನಿಲುವು ಅಧ್ಯಯನಕ್ಕೆ ಯೋಗ್ಯವಾದುದು; ಎಲ್ಲರಿಂದಲೂ ಸ್ವೀಕಾರಾರ್ಹವಾದುದು. ಆ ಮೂಲಕ ಈ ಎರಡು ಮಹಾನ್ ಆಧ್ಯಾತ್ಮಿಕ ಆಂದೋಲನಗಳ ನಡುವೆ ಕೃತಕ ಕಂದಕಗಳನ್ನು ಮತ್ತು ಇಲ್ಲಸಲ್ಲದ ವೈಷಮ್ಯಗಳನ್ನು

ಸೃಷ್ಟಿಸುತ್ತಿರುವ ಕೆಲವು ವಿಚಾರವಾದಿಗಳ ಪೂರ್ವಾಗ್ರಹಪೂರಿತ (ಅ)ವಿಚಾರಗಳಿಗೆ ಸಮರ್ಪಕವಾದ ಉತ್ತರಗಳನ್ನು ನಾವು ನೀಡಬಹುದು. ಸ್ವಾಮೀಜಿಯವರ ಪ್ರಕಾರ ಆಧುನಿಕ ಬೌದ್ಧಧರ್ಮವು ಭಗವಾನ್ ಬುದ್ಧನನ್ನು ಕಾಣುವ ರೀತಿಯೇ ಬೇರೆ. ಹಿಂದೂಗಳಾದ ನಾವು ಆ ಮಹಾನುಭಾವನ ಅದ್ಭುತ ವ್ಯಕ್ತಿತ್ವವನ್ನು ದೃಷ್ಟಿಸುವ ಕ್ರಮವೇ ಬೇರೆ. ಶಾಕ್ಯಮುನಿಯು ಹೊಸದೇನನ್ನೂ ಬೋಧಿಸಲು ಅವತರಿಸಲಿಲ್ಲ ಎಂಬುದು ನಮ್ಮ ನಿಲುವು. ಅದೇ ರೀತಿ, ಕ್ರೈಸ್ತನು ಕೂಡ ಯಹೂದಿ ಧರ್ಮದಲ್ಲಿ ಇಲ್ಲದ ಹೊಸದೇನನ್ನೂ ಉಪದೇಶಿಸಲಿಲ್ಲ. ಇದಕ್ಕೆ ಬದಲಾಗಿ ಇಬ್ಬರೂ ತಮ್ಮ ಮಾತೃಧರ್ಮಗಳನ್ನು ಸುಸಂಪನ್ನಗೊಳಿಸಲು, ಪರಿಪೂರ್ಣಗೊಳಿಸಲು ಅಥವಾ ಸಮೃದ್ಧವಾಗಿಸಲು ಬಂದವರೇ ಹೊರತು, ಹಳೆಯದೇನನ್ನೂ ನಾಶಪಡಿಸಲು ಅವತರಿಸಿ ಬಂದವರಲ್ಲ. ಯೇಸುಕ್ರಿಸ್ತನನ್ನು ಕಟ್ಟಾ ಸಂಪ್ರದಾಯಸ್ಥರಾದ ಹಳೆಯ ಜನ, ಎಂದರೆ ಯಹೂದಿಗಳು ಅರ್ಥಮಾಡಿಕೊಳ್ಳಲು ವಿಫಲರಾದರು. ಆದರೆ ಬುದ್ಧನ ವಿಷಯದಲ್ಲಿಯಾದರೋ, ಅವನ ಅನುಯಾಯಿಗಳೇ ಆ ತಪ್ಪನ್ನು ಮಾಡಿದರು. ಅವರು ಅವನ ದಿವ್ಯ ಸಂದೇಶಗಳ ಮಹತ್ವವನ್ನು ಸರಿಯಾಗಿ ಅರ್ಥಮಾಡಿಕೊಳ್ಳುವಲ್ಲಿ ಸೋತುಹೋದರು. ಏಸುಕ್ರಿಸ್ತನು ಹಳೆಯ ಒಡಂಬಡಿಕೆಯ ಆಧ್ಯಾತ್ಮಿಕ ಆದರ್ಶದ ಮೂರ್ತಿವೆತ್ತ ಸುಸಂಪನ್ನರೂಪ ಎಂದು ಅರಿತುಕೊಳ್ಳಲು ಯಹೂದಿಗಳು ವಿಫಲರಾದರೆ, ಭಗವಾನ್ ಬುದ್ಧನು ಹಿಂದೂಧರ್ಮದ ವೈದಿಕ ಅಥವಾ ಉಪನಿಷತ್ತಿನ ಸತ್ಯಗಳ ಘನೀಭೂತರೂಪನಾಗಿದ್ದಾನೆ, ಆ ಸತ್ಯಗಳ ಉತ್ಕೃಷ್ಟ ಪ್ರತಿನಿಧಿಯಾಗಿದ್ದಾನೆ ಎನ್ನುವುದನ್ನು ಅವನ ಅನುಯಾಯಿಗಳೇ ತಿಳಿಯಲಾರದೇ ಹೋದರು. ಸ್ವಾಮಿ ವಿವೇಕಾನಂದರ ಪ್ರಕಾರ, ಇದೊಂದು ದೊಡ್ಡ ದುರ್ದೈವದ ಸಂಗತಿ. ಹಾಗೆಂದೇ ಸ್ವಾಮೀಜಿ, ಶಾಕ್ಯಮುನಿಯು ಹಿಂದೂಧರ್ಮದ ಪರಿಪೂರ್ಣತೆಯ ಸಂಕೇತನಾಗಿದ್ದಾನೆ; ಹಿಂದೂಗಳ ಧರ್ಮದ ತಾರ್ಕಿಕ ಸುಸಂಪನ್ನತೆಯನ್ನು ಅವನು ಬಿಂಬಿಸುತ್ತಾನೆ ಎಂದು ಒತ್ತಿ ಹೇಳುತ್ತಾರೆ.

### ಪರಿಪೂರ್ಣ ಹಿಂದೂ ಸಂನ್ಯಾಸಿ

ಸ್ವಾಮೀಜಿಯವರ ಅದ್ಭುತ ಪ್ರತಿಭೆಯನ್ನು ನಾವಿಲ್ಲಿ ನೋಡಬಹುದು. ಗೌತಮ ಮುನಿಯನ್ನು ಅವರು ಆದರ್ಶ ಸಂನ್ಯಾಸಿಯನ್ನಾಗಿ ಚಿತ್ರಿಸುತ್ತಾರೆ. ಹಿಂದೂಧರ್ಮದ ಜ್ಞಾನಕಾಂಡವೇ ಉಪನಿಷತ್ತುಗಳು. ಇದರ ಅಧ್ಯಯನವನ್ನು ವಿಶೇಷವಾಗಿ ಸಂನ್ಯಾಸಿಗಳು ಕೈಗೊಳ್ಳುತ್ತಾರೆ. ಸಂನ್ಯಾಸಿಗಳಿಗೆ ಯಾವ ಜಾತಿಯ ಕಟ್ಟೂ ಇಲ್ಲ. ಅವರು ಎಲ್ಲರಿಗೂ ಸೇರಿದವರು; ಸರ್ವಮಾನ್ಯರು. ಮೇಲು ಜಾತಿಗೆ ಸೇರಿದವನೂ ಸಂನ್ಯಾಸಿಯಾಗಬಹುದು; ಕೀಳು ಜಾತಿಗೆ ಸೇರಿದವನೂ ಸಂನ್ಯಾಸಿಯಾಗಬಹುದು. ಇಬ್ಬರನ್ನೂ ಹಿಂದೂ ಸಮಾಜವು ಸಮಾನವಾಗಿ ಆದರದಿಂದ ಕಾಣುತ್ತದೆ. ಸಂನ್ಯಾಸಾಶ್ರಮದಲ್ಲಿ ಮಾತ್ರವೇ ಎಲ್ಲ ಜಾತಿವೈಷಮ್ಯಗಳೂ ಅಂತ್ಯಗೊಳ್ಳುತ್ತವೆ ಎನ್ನುತ್ತಾರೆ, ಸ್ವಾಮೀಜಿ. ಅವರ ಪ್ರಕಾರ ಶಾಕ್ಯಮುನಿಯು ಅಂಥ ಒಬ್ಬ ಸಂನ್ಯಾಸಿ. ಅವನು ಅಪಾರ ಹೃದಯವೈಶಾಲ್ಯವನ್ನು ಹೊಂದಿದ್ದನು. ಅದಕ್ಕೆಂದೇ, ವೇದಗಳಲ್ಲಿ ಹುದುಗಿದ್ದ ಸತ್ಯಗಳನ್ನು ಹೊರತೆಗೆದು, ಜಗತ್ತಿನಾದ್ಯಂತ ಪ್ರಸಾರ ಮಾಡಿದನು. ಇದಲ್ಲದೆ, ಬುದ್ಧನ ಇನ್ನೊಂದು ವೈಶಿಷ್ಟ್ಯವನ್ನು ಸ್ವಾಮೀಜಿ ಎತ್ತಿತೋರಿಸುತ್ತಾರೆ. ಬುದ್ಧನು ಜಗತ್ತಿನ ಮೊದಲ ಧರ್ಮಪ್ರಚಾರಕ (ಮಿಷನರಿ). ತನ್ನ ಭಾವನೆಗಳನ್ನು ಸಮಾಜದ ಎಲ್ಲ ಸ್ತರದವರಿಗೂ ಮುಟ್ಟಿಸುವಲ್ಲಿ ಅವನು ತೋರಿದ ಉತ್ಸಾಹ ಅಸದಳವಾದುದು. ಇದೇ ರೀತಿಯ ಧರ್ಮಪ್ರಸಾರದ ಆಸಕ್ತಿಯನ್ನು ನಾವು ಭವಿಷ್ಯದಲ್ಲಿ ಹುಟ್ಟಿದ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳಲ್ಲಿಯೂ ನೋಡುತ್ತೇವೆ. ಈ ಬಗೆಯ ಧರ್ಮಪ್ರಸಾರ ಆಂದೋಲನದ ಪರಿಕಲ್ಪನೆಯನ್ನು ಮೊದಲುಮಾಡಿದವನೇ ಭಗವಾನ್ ಬುದ್ಧ.

### ಬುದ್ಧನ ಹೃದಯವೈಶಾಲ್ಯತೆ

ಭಗವಾನ್ ಬುದ್ಧನ ಮಹಾನತೆಯಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಸ್ವಾಮೀಜಿ ಮೆಚ್ಚುವುದು ಅವನ ಅಪಾರ ಹೃದಯವೈಶಾಲ್ಯತೆಯನ್ನು. ಮಹಾಗುರುವಿನ ಮಹಾನ್ ವೈಭವವಿರುವುದು ಎಲ್ಲರ ಮೇಲೆಯೂ, ಅದರಲ್ಲೂ ಅಜ್ಞಾನಿಗಳು ಮತ್ತು ದರಿದ್ರರ ಮೇಲಿನ ಅತ್ಯದ್ಭುತ ಅನುಕಂಪದಲ್ಲಿ ಎಂದು ಅವರು ಹೇಳುತ್ತಾರೆ. ಬುದ್ಧನ ಶಿಷ್ಯರಲ್ಲಿ ಕೆಲವರು ಬ್ರಾಹ್ಮಣರೂ ಇದ್ದರು. ಬುದ್ಧನು ಖಂಡಿತ ಬ್ರಾಹ್ಮಣರ ಅಥವಾ ವೈದಿಕರ ವಿರೋಧಿಯಾಗಿರಲಿಲ್ಲ ಎನ್ನುವುದನ್ನು ಸ್ವಾಮೀಜಿ ಎತ್ತಿಹೇಳುತ್ತಾರೆ. ಆ ಕಾಲದಲ್ಲಿ ಸಂಸ್ಕೃತವು ಆಡುಭಾಷೆಯಾಗಿರಲಿಲ್ಲ. ವಿದ್ವಾಂಸರು ಅಧ್ಯಯನ ಮಾಡುವ ಕೆಲವು ಪುಸ್ತಕಗಳ ಭಾಷೆಯಾಗಿ ಮಾತ್ರ ಸಂಸ್ಕೃತ ಭಾಷೆಯು ಈಗಾಗಲೇ ಸೀಮಿತವಾಗಿತ್ತು. ಬುದ್ಧನ ಕೆಲವು ಬ್ರಾಹ್ಮಣ ಶಿಷ್ಯರು, ಬೋಧನೆಗಳನ್ನು ಸಂಸ್ಕೃತ ಭಾಷೆಯಲ್ಲಿ ನೀಡುವಂತೆ ಅವನಲ್ಲಿ ಕೇಳಿಕೊಂಡರು. ಅದಕ್ಕೆ ಬುದ್ಧ ನೀಡಿದ ಉತ್ತರ ಇದು: '' ನಾನು ಬಡವರ ಪರವಾಗಿದ್ದೇನೆ; ಸಾಮಾನ್ಯ ಜನರ ಪರವಾಗಿದ್ದೇನೆ, ಆದ್ದರಿಂದ ಜನಗಳು ಆಡುವ ಆಡುಭಾಷೆಯಲ್ಲಿಯೇ ನಾನು ಮಾತನಾಡುತ್ತೇನೆ.'' ಇದು ಕೂಡ ಬುದ್ಧನ ಹೃದಯವೈಶಾಲ್ಯತೆಯ ಅಪೂರ್ವ ನಿದರ್ಶನವಾಗಿದೆ ಎಂದು ಸ್ವಾಮೀಜಿ ಅಭಿಪ್ರಾಯಪಡುತ್ತಾರೆ.

### ಕಳೆದುಹೋದ ದೇವರು

ಬುದ್ಧನ ಉಪದೇಶದಲ್ಲಿ ಇರುವ ಮುಖ್ಯವಾದ ಲೋಪವೆಂದರೆ ದೇವರೆಂಬ ಕಲ್ಪನೆಯ ಸಾರಾಸಗಟು ನಿರಾಕರಣೆ. ಈ ವಿಷಯದಲ್ಲಿ ಸ್ವಾಮೀಜಿಯವರ ಚಿಂತನೆಗಳು ಹೀಗಿವೆ: ತತ್ತ್ವಶಾಸ್ತ್ರಗಳು ಯಾವುದೇ ನಿಲುವನ್ನು ತೆಗೆದುಕೊಳ್ಳಲಿ, ಅತೀಂದ್ರಿಯ ವಿಜ್ಞಾನದ ಅಭಿಪ್ರಾಯ ಕೂಡ ಏನೇ ಇರಲಿ, ಮರಣ ಎನ್ನುವ ಅನಿವಾರ್ಯ ಸಂಗತಿಯು ಜಗತ್ತಿನಲ್ಲಿ ಇರುವವರೆಗೆ, ಮಾನವ ಹೃದಯದಲ್ಲಿ ದುರ್ಬಲತೆಯು ಅಡಗಿರುವ ತನಕ, ಆ ದುರ್ಬಲ

ಹೃದಯದಿಂದ ಆಕ್ರಂದನವು ಹೊರಹೊಮ್ಮುತ್ತಿರುವವರೆಗೂ, ಪರಮಾತ್ಮನಲ್ಲಿ ಶ್ರದ್ಧೆ ಎನ್ನುವುದು ಇದ್ದೇ ಇರುತ್ತದೆ. ಈ ದೇಶದ ಪ್ರತಿಯೊಬ್ಬ ಮನುಷ್ಯನೂ — ಅವನು ಪುರುಷನಾಗಿರಲಿ, ಮಹಿಳೆಯೇ ಆಗಿರಲಿ — ಯಾವುದನ್ನು ನೆಚ್ಚಿಕೊಂಡಿದ್ದನೋ, ಆ ಚಿರಂತನ ಪರಮಾತ್ಮನ ಭಾವನೆಯನ್ನು ಬುದ್ಧನ ಅನುಯಾಯಿಗಳು ಕಸಿದುಕೊಳ್ಳುವ ಕಾರ್ಯವನ್ನು ಮಾಡಿದರು. ಹೀಗಾಗಿಯೇ ಬೌದ್ಧಧರ್ಮವು ಭಾರತದಲ್ಲಿ ಸಹಜ ಸಾವನ್ನು ಕಾಣಬೇಕಾಯಿತು ಎಂದು ಸ್ವಾಮೀಜಿ ಅಭಿಪ್ರಾಯಪಡುತ್ತಾರೆ.

## ವೈದಿಕ ಧರ್ಮದ ದೌರ್ಭಾಗ್ಯ

ಇದರಿಂದಾಗಿ ವೈದಿಕ ಧರ್ಮವು ಕೂಡ ನಷ್ಟವನ್ನು ಅನುಭವಿಸಿತು ಎಂದು ಸ್ವಾಮೀಜಿ ಹೇಳುತ್ತಾರೆ. ಧರ್ಮವನ್ನು ಸುಧಾರಿಸಬೇಕು ಎನ್ನುವ ಉತ್ಸಾಹ, ಆ ಅದ್ಭುತವಾದ ಅನುಕಂಪ ಮತ್ತು ಎಲ್ಲರಲ್ಲಿಯೂ ಉದಾರಭಾವ - ಈ ಉದಾತ್ತ ಮೌಲ್ಯಗಳನ್ನು ವೈದಿಕ ಧರ್ಮವು ಕಳೆದುಕೊಂಡಿತು. ಬುದ್ಧನ ಉಪದೇಶಗಳ ತಿರುಳೇ ಅದು. ಭಾರತೀಯ ಸಮಾಜ ನೈತಿಕವಾಗಿ ಎಷ್ಟೊಂದು ಉನ್ನತ ಮಟ್ಟದಲ್ಲಿ ಇತ್ತು ಎಂದರೆ, ಆಗಿನ ಕಾಲದಲ್ಲಿ ಭಾರತಕ್ಕೆ ಭೇಟಿಕೊಟ್ಟಿದ್ದ ಗ್ರೀಕ್ ಇತಿಹಾಸಜ್ಞನೊಬ್ಬನು ಹೀಗೆ ಹೇಳುತ್ತಾನಂತೆ: ಯಾವೊಬ್ಬ ಹಿಂದುವೂ ಅಸತ್ಯವನ್ನು ನುಡಿಯುವುದು ಕಂಡುಬರುವುದಿಲ್ಲ; ಯಾವೊಬ್ಬ ಹಿಂದೂ ಮಹಿಳೆಯೂ ಅನೈತಿಕ ಜೀವನವನ್ನು ನಡೆಸುವುದು ಕಂಡುಬರುವುದಿಲ್ಲ. ಇಂಥ ಆದರ್ಶ ನೈತಿಕ ಸ್ತರವನ್ನು ತಂದುಕೊಡುವಲ್ಲಿ ಬುದ್ಧನ ಪಾತ್ರ ವಿಶೇಷವಾಗಿತ್ತು. ಬೌದ್ಧಧರ್ಮವು ಈ ಮೌಲ್ಯಗಳನ್ನು ಜನಸಾಮಾನ್ಯರಲ್ಲಿ ಪ್ರಸಾರಮಾಡಿತು. ಬೌದ್ಧಧರ್ಮವು ಪ್ರತ್ಯೇಕಗೊಂಡಿದ್ದರಿಂದ ಹಿಂದೂಧರ್ಮವು ಈ ಬಗೆಯ ನೈತಿಕ ಪ್ರಾಶಸ್ತ್ಯದ ಅಂಶವನ್ನು ಕಳೆದುಕೊಂಡಿತು ಎಂದು ಸ್ವಾಮಿ ವಿವೇಕಾನಂದರು ವಿಷಾದ ವ್ಯಕ್ತಪಡಿಸುತ್ತಾರೆ.

## ಎರಡೂ ಧರ್ಮಗಳ ಅವಿನಾಭಾವ ಸಂಬಂಧ

ಈ ಸಂದರ್ಭದಲ್ಲಿ ಸ್ವಾಮೀಜಿ ಮಹತ್ವವಾದ ಒಂದು ಮಾತನ್ನು ಆಡುತ್ತಾರೆ: ''ಬೌದ್ಧಧರ್ಮವಿಲ್ಲದೆ, ಹಿಂದೂಧರ್ಮವು ಉಳಿಯಲಾರದು. ಬೌದ್ಧಧರ್ಮವು ಹಿಂದೂಧರ್ಮವಿಲ್ಲದೆ ಇರಲಾರದು.'' ವೈದಿಕ ಅನುಯಾಯಿಗಳ ಮೆದುಳು ಮತ್ತು ತತ್ತ್ವಶಾಸ್ತ್ರಗಳಿಲ್ಲದೆಯೇ ಬೌದ್ಧಧರ್ಮವೂ, ಬೌದ್ಧರ ಹೃದಯಶೀಲತೆಯಿಲ್ಲದೆ ಹಿಂದೂಧರ್ಮವೂ ಉತ್ಕೃಷ್ಟ ಧರ್ಮವಾಗಿ ಲೋಕೋಪಕಾರವನ್ನು ಮಾಡಲು ಸಾಧ್ಯವಾಗದು ಎಂದು ಅವರು ಅಭಿಪ್ರಾಯಪಡುತ್ತಾರೆ. ಹೀಗಾಗಿ ಬೌದ್ಧರ ಮತ್ತು ವೈದಿಕ ಧರ್ಮೀಯರ ನಡುವಣ ವಿಭಜನೆಯು ಭಾರತದ ಅಧಃಪತನಕ್ಕೆ ಕಾರಣವಾಯಿತು ಎಂದು ಅವರು ಹೇಳುತ್ತಾರೆ. ಭಾರತದ ಐತಿಹಾಸಿಕ ಪತನಕ್ಕೆ ಧಾರ್ಮಿಕ ಕಾರಣವನ್ನು ಈ ಬಗೆಯಲ್ಲಿ ಹುಡುಕಿ, ವಿಶ್ಲೇಷಿಸಿದವರಲ್ಲಿ ಸ್ವಾಮಿ ವಿವೇಕಾನಂದರೇ ಮೊದಲಿಗರು ಎಂದು ಹೇಳಬಹುದು. ಅವರು ಆಧ್ಯಾತ್ಮಿಕ ಸಂತರಾಗಿದ್ದರಷ್ಟೇ ಅಲ್ಲ, ಉನ್ನತ ಮಟ್ಟದ ಇತಿಹಾಸಜ್ಞರೂ ಆಗಿದ್ದರು ಎಂಬುದನ್ನು ನಾವು ನೆನಪಿನಲ್ಲಿಡಬೇಕು.

ಭಾರತದ ಈ ದೌರ್ಭಾಗ್ಯವನ್ನು ಮನಸ್ಸು ಕಲಕುವಂತೆ ತಮ್ಮ ಪ್ರವಚನದ ಕಡೆಯಲ್ಲಿ ಸ್ವಾಮೀಜಿ ಹೀಗೆ ಬಣ್ಣಿಸುತ್ತಾರೆ: ''(ಬೌದ್ಧಧರ್ಮವು ಹಿಂದೂಧರ್ಮದಿಂದ ಪ್ರತ್ಯೇಕಗೊಂಡಿದ್ದರಿಂದಲೇ) ಈ ಕಾರಣದಿಂದಲೇ, ಭಾರತವು ಮುನ್ನೂರು ಮಿಲಿಯಗಟ್ಟಲೆ (ಈಗ ಅಂಥವರ ಸಂಖ್ಯೆ ಒಂದು ಬಿಲಿಯನ್ನಿಗೂ ಹೆಚ್ಚು!) ಭಿಕ್ಷುಕರಿಂದ ಸಂಕುಲಿತವಾಗಿದೆ! ಈ ಕಾರಣದಿಂದಾಗಿಯೇ ಭಾರತವು ಕಳೆದ ಒಂದು ಸಾವಿರ ವರ್ಷಗಳಿಂದ ಆಕ್ರಮಣಕಾರರ ದಾಸ್ಯಕ್ಕೆ ಒಳಗಾಗಿದೆ!''

## ಬುದ್ಧಿ-ಹೃದಯಗಳ ಮಿಲನ

ಈ ಸಮಸ್ಯೆಗೆ ಪರಿಹಾರವೇನು? ತಮ್ಮ ಈ ಪ್ರವಚನದ ಅಂತಿಮ ವಾಕ್ಯದಲ್ಲಿ ಸ್ವಾಮೀಜಿ ಪರಿಹಾರವನ್ನು ನೀಡುತ್ತಾರೆ. ವೈದಿಕ ಧರ್ಮದ ಅನುಯಾಯಿಗಳ ಅದ್ಭುತ ಬುದ್ಧಿಶಕ್ತಿ ಮತ್ತು ಭಗವಾನ್ ಬುದ್ಧನ ಹೃದಯವಂತಿಕೆ, ಉದಾತ್ತ ಚಾರಿತ್ರ್ಯ ಮತ್ತು ಅಮೋಘ ಮಾನವತಾಶಕ್ತಿಗಳ ಅಪೂರ್ವ ಮಿಲನವನ್ನು ಕೈಗೊಳ್ಳುವುದೇ ಅದು. ಇದು ಮಾತ್ರವೇ ಭಾರತದ ಮಂಗಳಕರ ಭವಿಷ್ಯಕ್ಕೆ ನಾಂದಿಯನ್ನು ಹಾಡಬಲ್ಲದು. ಭಾರತೀಯರಲ್ಲಿ ಪರಿಪೂರ್ಣ ವ್ಯಕ್ತಿತ್ವವನ್ನು, ಆತ್ಮವಿಶ್ವಾಸವನ್ನು, ನಾಡನ್ನು ಕಟ್ಟುವ ಓಜಸ್ಸು, ತೇಜಸ್ಸುಗಳನ್ನು ಉದ್ದೀಪಿಸಬಲ್ಲದು. ಒಟ್ಟರ್ಥವೆಂದರೆ ಹಿಂದೂ ಧರ್ಮದ ಪಾರಂಪರಿಕ ಮೌಲ್ಯಗಳೊಂದಿಗೆ ಬುದ್ಧನ ವಿಶಾಲ ಹೃದಯ, ಅನುಕಂಪಗಳನ್ನು ಕೂಡ ಭಾರತೀಯರು ಮೇಳವಿಸಿಕೊಳ್ಳಬೇಕು. ಆಗ ಮಾತ್ರ ಭಾರತದ ಪುನರುತ್ಥಾನ ಸಾಧ್ಯ. ಇದೇ ಸ್ವಾಮಿ ವಿವೇಕಾನಂದರು ಭಾರತೀಯರಿಗೆ ನೀಡುವ ಸಂದೇಶ. ಇದಲ್ಲದೆ, ಇಡಿಯ ವಿಶ್ವಕ್ಕೂ ಅವರು ಒಂದು ಸಂದೇಶವನ್ನು ನೀಡುತ್ತಿದ್ದಾರೆ ಅನ್ನಿಸುತ್ತದೆ. ಹಿಂದೂಧರ್ಮವು ಎಂದಿಗೂ ಬುದ್ಧನನ್ನು, ಹಾಗೆಯೇ ಬೌದ್ಧಧರ್ಮವನ್ನು ಅನಾದರಕ್ಕೆ ಒಳಪಡಿಸಲಿಲ್ಲ. ಬದಲಾಗಿ, ಭಗವಂತನ ಅವತಾರವೆಂದು ಹಿಂದೂಗಳು ಅವನನ್ನು ಇಂದಿಗೂ ಆರಾಧಿಸುತ್ತಾರೆ. ಆದರೆ, ಬೌದ್ಧಧರ್ಮದ ನಿರೀಶ್ವರವಾದವೇ ಭಾರತದಲ್ಲಿ ಅದು ವಿಫಲವಾಗಲು ಕಾರಣವಾಯಿತು. ಈ ಐತಿಹಾಸಿಕ ತಥ್ಯವನ್ನು ಎಲ್ಲರೂ ಅರ್ಥಮಾಡಿ ಕೊಳ್ಳಬೇಕು. ಹಿಂದೂಧರ್ಮವು ಸನಾತನ ಧರ್ಮವಾಗಿದೆ; ಚಿರಂತನ ಆಧ್ಯಾತ್ಮಿಕ ಪ್ರವಾಹವಾಗಿದೆ. ಅದು ಎಲ್ಲ ಆಧ್ಯಾತ್ಮಿಕ ಚಿಂತನೆಗಳನ್ನೂ ಬರಮಾಡಿಕೊಳ್ಳುತ್ತದೆ; ಎಲ್ಲರನ್ನು ಅಪ್ಪಿಕೊಳ್ಳುತ್ತದೆ. ಹೀಗಾಗಿ ಭಾರತದ ಧರ್ಮವೇ ಆದ ಬೌದ್ಧ ಧರ್ಮವನ್ನೂ ಅದು ತನ್ನ ತೆಕ್ಕೆಗೆ ತಂದುಕೊಳ್ಳುವುದರಲ್ಲಿ ಆಶ್ಚರ್ಯವೇನು? ಈ ಭಾರತ ಭೂಮಿಯ ವರಪುತ್ರನಾದ ಕರುಣಾಳು ಭಗವಾನ್ ಬುದ್ಧನನ್ನು ಪೂಜಿಸುವುದರಲ್ಲಿ ಅಚ್ಚರಿಯೇನು? 

# ಅಧಿವೇಶನದ ಕೊನೆಯ ಉಪನ್ಯಾಸ

ಸ್ವಾಮಿ ಶಾಂತಿವ್ರತಾನಂದ

'ಸರ್ವಧರ್ಮ ಸಮ್ಮೇಳನ'ದ ಒಟ್ಟು ಆಶಯವನ್ನು ಪರಿಣಾಮಕಾರಿಯಾಗಿ ಪ್ರಸ್ತುತಪಡಿಸುತ್ತ, ಪ್ರಪಂಚದ ಭವಿಷ್ಯ ಉನ್ನತ ಆದರ್ಶ, ಮೌಲ್ಯಗಳನ್ನು ಪಾಲಿಸುವ ಮೂಲಕ ಶಾಂತಿ, ಸಮಾಧಾನಗಳನ್ನು ಕಂಡುಕೊಳ್ಳಬೇಕು ಎಂದು ಅಧಿವೇಶನದ ಕೊನೆಯ ಉಪನ್ಯಾಸದಲ್ಲಿ ವಿವರಿಸುತ್ತಾರೆ ಸ್ವಾಮೀಜಿ. ಈ ಕುರಿತು ಇಲ್ಲಿ ವಿವರಿಸಿರುವ ಲೇಖಕರು ಉತ್ತಮ ವಾಗ್ಮಿಗಳು ಮತ್ತು ಲೇಖಕರು; ಪ್ರಸ್ತುತ ಅವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.



### ಹಿನ್ನೆಲೆ

ತರುಣ ಸಂನ್ಯಾಸಿ, ಋಷಿ, ಮಂತ್ರದ್ರಷ್ಟಾರ, ರಾಜಯೋಗಿಗಳಾಗಿದ್ದ ಸ್ವಾಮಿ ವಿವೇಕಾನಂದರು ಪಾಶ್ಚಾತ್ಯದೇಶವನ್ನು ಕುರಿತು ಹೀಗೆ ನುಡಿದಿದ್ದರು: ''ನಿಮ್ಮ ನಾಗರಿಕತೆ ಲಾವಾರಸದ ಮೇಲೆ ನಿಂತಿದೆ. ಯಾವ ಸಮಯದಲ್ಲಾದರೂ ಸ್ಫೋಟಗೊಳ್ಳಬಹುದು. ಎಚ್ಚರಿಕೆ! ಧರ್ಮ ಮತ್ತು ಅಧ್ಯಾತ್ಮವನ್ನು ಕಡೆಗಣಿಸಿದ್ದೀರಿ. ನಿಮ್ಮ ತಪ್ಪನ್ನು ನೀವು ಸರಿಮಾಡಿಕೊಂಡರೆ ನಿಮಗೆ ಒಳಿತು.'' ಎನ್ನುವ ಎಚ್ಚರಿಕೆಯನ್ನು ನೀಡಿದ್ದರು. ಪಾಶ್ಚಾತ್ಯ ದೇಶಗಳು ಕೈಗಾರಿಕಾ ಕ್ರಾಂತಿಯ ಯಶಸ್ಸಿನ ಅಲೆಯ ಮೇಲೆ ತೇಲುತ್ತಿದ್ದ ಕಾಲವದು. ಭೌತಿಕ ವಿಜ್ಞಾನದ ನೆರವಿನಿಂದ ನೂತನ ಅನ್ವೇಷಣೆಗಳು ಹೊರ ಬರುತ್ತಿದ್ದವು. ಈ ಭರಾಟೆಯಲ್ಲಿ ಸಮಾಜದ ಬಹುಭಾಗವು ಧರ್ಮ ಮತ್ತು ಭಗವಂತನನ್ನು ಕಡೆಗಣಿಸಿತ್ತು. ಸ್ವಾಮಿ ವಿವೇಕಾನಂದರು ಎಚ್ಚರಿಕೆ ನೀಡಿ ಐವತ್ತು ವರ್ಷಗಳು ಕಳೆಯುವುದರೊಳಗೆ ವಿಶ್ವವನ್ನೇ ವಿನಾಶದ ಅಂಚಿಗೆ ತಳ್ಳಿದಂತಹ ಎರಡು ವಿಶ್ವಯುದ್ಧಗಳು ನಡೆದೇಬಿಟ್ಟವು.

೧೮೯೩ರ ಸೆಪ್ಟೆಂಬರ್ ೧೧ರಂದು ಆರಂಭವಾದ ಸರ್ವಧರ್ಮ ಸಮ್ಮೇಳನದ ಸ್ವಾಗತ ಭಾಷಣಕ್ಕೆ ಉತ್ತರವಾಗಿ ಸ್ವಾಮೀಜಿ ನೀಡಿದ ಭಾಷಣ ಉಂಟುಮಾಡಿದ ಸಂಚಲನದ ಬಗ್ಗೆ ನಮಗೆಲ್ಲ ತಿಳಿದಿದೆ. ಭಾಷಣದ ಅಂತ್ಯದಲ್ಲಿ, ''...ಗುಂಪುಗಾರಿಕೆ, ಅತಿಯಾದ ಮತಾಭಿಮಾನ ಹಾಗೂ ಅದರ ಘೋರ ಪರಿಣಾಮವಾದ ಧರ್ಮಾಂಧತೆಗಳು ಬಹುಕಾಲದಿಂದ ಈ ಸುಂದರ ಪೃಥ್ವಿಯನ್ನು ಆಕ್ರಮಿಸಿಕೊಂಡಿವೆ. ಅವು ಭೂಮಿಯನ್ನು ಹಿಂಸೆಯಿಂದ ತುಂಬಿ, ಮತ್ತೆ ಮತ್ತೆ ಮಾನವನ ರಕ್ತದಿಂದ ತೋಯಿಸಿವೆ; ನಾಗರಿಕತೆಯನ್ನು ನಾಶಮಾಡಿವೆ, ದೇಶ-ದೇಶಗಳನ್ನೇ ನಿರಾಶೆಯ ಕೂಪಕ್ಕೆ ತಳ್ಳಿವೆ... ಈ ಸಮ್ಮೇಳನದ ಪ್ರತಿನಿಧಿಗಳ ಗೌರವಾರ್ಥವಾಗಿ

ಇಂದು ಬೆಳಿಗ್ಗೆ ಮೊಳಗಿದ ಘಂಟಾನಾದವು ಎಲ್ಲ ಮತಾಂಧತೆಗೆ ಮರಣಾಘಾತವನ್ನೀಯುವುದು ಎಂದು ಆಶಿಸುತ್ತೇನೆ ಮತ್ತು ಅದು ಖಡ್ಗ-ಲೇಖನಿಗಳ ಮೂಲಕ ಸಂಭವಿಸುವ ಹಿಂಸಾದ್ವೇಷಗಳಿಗೆ ಹಾಗೂ ಒಂದೇ ಗುರಿಯೆಡೆಗೆ ಸಾಗುತ್ತಿರುವ ಪಥಿಕರೊಡನೆ ಅಸಹನೆ ಮನಸ್ತಾಪಗಳಿಗೆ ಮರಣಾಘಾತವನ್ನೀಯುವುದು ಎಂದು ಹೃತ್ಪೂರ್ವಕವಾಗಿ ಆಶಿಸುತ್ತೇನೆ'' ಎಂದರು ಸ್ವಾಮಿ ವಿವೇಕಾನಂದರು. ಆದರೆ ಶೋಚನೀಯ ಸಂಗತಿ ಎಂದರೆ ಅವರ ಭವಿಷ್ಯವಾಣಿಯನ್ನು ವಿಶ್ವ ಅಥವಾ ಮುಖ್ಯವಾಗಿ ಅಮೆರಿಕದೇಶವು ಗಂಭೀರವಾಗಿ ಪರಿಗಣಿಸಲೇ ಇಲ್ಲ. ಫಲವಾಗಿ ೨೦೦೧ರ ಸೆಪ್ಟೆಂಬರ್ ೧೧, ರಂದು ಅಮೇರಿಕದ ಪ್ರತಿಷ್ಠೆಯ ಪ್ರತೀಕವಾಗಿದ್ದ ವಿಶ್ವ ವಾಣಿಜ್ಯ ಕೇಂದ್ರದ ಅವಳಿ ಕಟ್ಟಡಗಳನ್ನು ಮತಾಂಧರು ನಾಶಪಡಿಸಿದರು. ೨೯೭೭ ಜನ ಮರಣ ಹೊಂದಿದರು, ಸುಮಾರು ೬೦೦೦ ಜನರು ಗಾಯಗೊಂಡರು ಮತ್ತು ೧೦ ಬಿಲಿಯನ್ ಡಾಲರ್‌ಗಳಷ್ಟು ಆಸ್ತಿ ನಷ್ಟವಾಯಿತು.

ಬ್ರಹ್ಮಜ್ಞಾನಿಯಾಗಿದ್ದ ಸ್ವಾಮೀಜಿಯವರ ಯಾವುದೇ ವಾಕ್ಕು ವ್ಯರ್ಥವಾಗುವುದಿಲ್ಲ. ಅವರ ಬಾಯಿಂದ ಹೊರಟ ಪ್ರತಿಯೊಂದು ಪದವೂ ಫಲಿಸಲೇಬೇಕು. ವಿಶ್ವಭ್ರಾತೃತ್ವ ಕಲ್ಪನೆಯ ಮೂರ್ತಿಯಾಗಿದ್ದ ಸ್ವಾಮೀಜಿ ಅಮೆರಿಕದ ಚಿಕಾಗೋದಲ್ಲಿ ೧೮೯೩ರ ಸೆಪ್ಟೆಂಬರ್ ೧೧ರಂದು ಸರ್ವಧರ್ಮ ಸಮ್ಮೇಳನದ ಮೊದಲನೆಯ ದಿನ ನೀಡಿದ ವಿಶ್ವಪ್ರಸಿದ್ಧ ಉಪನ್ಯಾಸಕ್ಕೆ ಈಗ ಭರ್ತಿ ೧೨೫ ವರ್ಷಗಳು. ಇಂತಹ ಐತಿಹಾಸಿಕ ಸಂದರ್ಭದಲ್ಲಿ ಸ್ವಾಮೀಜಿ ೧೮೯೩ರ ವಿಶ್ವಧರ್ಮ ಸಮ್ಮೇಳನದಲ್ಲಿ ನೀಡಿದ ಕೊನೆಯ ಭಾಷಣ ಕುರಿತು ಚಿಂತಿಸುವುದೇ ಈ ಲೇಖನದ ಉದ್ದೇಶವಾಗಿದೆ.

### ಸರ್ವಧರ್ಮಗಳ ಸಮ್ಮೇಳನದ ಇತಿಹಾಸ

ದೇಶವೊಂದು ತನ್ನ ಶಕ್ತಿ-ಸಾಮರ್ಥ್ಯಗಳನ್ನು ವಿಶ್ವವೇದಿಕೆಯಲ್ಲಿ ಪ್ರದರ್ಶಿಸಬೇಕೆಂದು ಸಂಕಲ್ಪಿಸಿತು. ಕೊಲಂಬಸ್ ಅಮೆರಿಕ ದೇಶವನ್ನು ಕಂಡುಹಿಡಿದು (೧೪೯೨ರಲ್ಲಿ) ನಾಲ್ಕು ನೂರು ವರ್ಷಗಳು ಸಂದಿದ್ದವು. ಆ ಐತಿಹಾಸಿಕ ಸಂದರ್ಭದ ನೆನಪಿಗಾಗಿ ೧೮೯೩ರಲ್ಲಿ ಶಿಕಾಗೋ ನಗರದಲ್ಲಿ ಕೊಲಂಬಿಯನ್ ಜಾಗತಿಕ ಮೇಳವನ್ನು ಏರ್ಪಡಿಸಲಾಯಿತು. ಅಮೆರಿಕ ದೇಶದ ಭೌತಿಕ ಸಾಧನೆಗಳನ್ನು ವಿಶ್ವದ ಮುಂದೆ ಪ್ರದರ್ಶನಕ್ಕಿಡುವುದು ಈ ಮೇಳದ ಮೂಲ ಉದ್ದೇಶವಾಗಿತ್ತು. ಸುಪ್ರಸಿದ್ಧ ವಕೀಲ ಹಾಗು ಲೇಖಕನಾಗಿದ್ದ ಚಾರ್ಲ್ಸ್ ಬಾನಿ ಎಂಬುವವನು ೧೮೮೯ರಲ್ಲಿಯೇ ''ಮಾನವಕುಲಕ್ಕೆ ಸಂಬಂಧಿಸಿರುವಂತಹ ಅತ್ಯಂತ ಮುಖ್ಯವಾದ ವಿಷಯಗಳೆಲ್ಲದರ ಕುರಿತು ಸಮ್ಮೇಳನಗಳು ನಡೆಯಬೇಕು. ಜಗತ್ತಿನ ಎಲ್ಲ ದೇಶಗಳ ಪ್ರತಿನಿಧಿಗಳೂ ಅದರಲ್ಲಿ ಭಾಗವಹಿಸುವಂತಾಗಬೇಕು,'' ಎಂದು ಜಾಗತಿಕ ಸಮ್ಮೇಳನದ ಕುರಿತು ತನ್ನ ನಿಲುವನ್ನು ವ್ಯಕ್ತಪಡಿಸಿದ್ದನು. ಮುಂದಿನ ಎರಡೂವರೆ ವರ್ಷಗಳಲ್ಲಿ ಸಮ್ಮೇಳನದ ಕುರಿತು ಅತ್ಯಂತ ವಿವರವಾದ ಯೋಜನೆಗಳನ್ನು ಸಿದ್ಧಪಡಿಸಲಾಯಿತು. ಜಾಗತಿಕ ಮೇಳದಲ್ಲಿ ವೈದ್ಯಕೀಯ, ಸ್ತ್ರೀಯರ ಪ್ರಗತಿ, ಶಸ್ತ್ರಚಿಕಿತ್ಸೆ, ವಿದ್ಯುಚ್ಛಕ್ತಿ, ಸಂಗೀತ, ವಿದ್ಯಾಭ್ಯಾಸ, ವಿಜ್ಞಾನ, ಸರಕಾರ, ಕಾನೂನು ಸುಧಾರಣೆ, ಕಲೆ ಹೀಗೆ ಸುಮಾರು ಇಪ್ಪತ್ತು ವೈವಿಧ್ಯಮಯ ವಿಷಯಗಳನ್ನು ಕುರಿತು ೧೮೯೩ರ ಮೇ ತಿಂಗಳಿನಿಂದ ಅಕ್ಟೋಬರ್ ಕೊನೆಯವರೆಗೆ ಚರ್ಚೆಗಳನ್ನು ನಡೆಸಲಾಯಿತು. ಇದರ ಜೊತೆಗೆ ಧರ್ಮವನ್ನೂ ಸೇರಿಸಬೇಕೆಂದು ಹಲವರು ಆಶಿಸಿದರು. ಅವರಲ್ಲಿ ಪ್ರಮುಖರಾಗಿದ್ದ ಡಾ. ಹೆನ್ರಿ ಬರೋಸ್, ''ಭಗವಂತನ ಮೇಲಿರುವ ಶ್ರದ್ಧೆಯು ಸೂರ್ಯನಂತೆ ಪ್ರಕಾಶಿಸುತ್ತದೆ. ಇದು, ಮಾನವನ ಬೌದ್ಧಿಕ ಮತ್ತು ನೈತಿಕ ಬೆಳವಣಿಗೆಗೆ ನವಚೈತನ್ಯದಾಯಕ. ಅಂತಿಮ ಫಲವನ್ನು ಅಥವಾ ಯಶಸ್ಸನ್ನು ಕೊಡುವ ಸಾಮರ್ಥ್ಯ ನೀಡುವುದೇ ಭಗವಂತ,'' ಎಂಬ ನಿಲುವನ್ನು ವ್ಯಕ್ತಪಡಿಸಿದರು. ನಂತರ ಧರ್ಮವನ್ನು ಇನ್ನುಳಿದ ವಿಷಯಗಳ ಜೊತೆ ಸಮ್ಮೇಳನದಲ್ಲಿ ಸೇರಿಸಲಾಯಿತು. ಸರ್ವಧರ್ಮ ಸಮ್ಮೇಳನದ ಬಗ್ಗೆ ಜಾಗತಿಕವಾಗಿ ಪ್ರಚಾರ ನೀಡಲಾಯಿತು. ಇನ್ನುಳಿದ ವಿಷಯಗಳ ಕುರಿತು ನಡೆದ ಚಿಂತನಾಗೋಷ್ಠಿಗಳು, ಸಮ್ಮೇಳನಗಳಿಗಿಂತ ಧರ್ಮ ಸಮ್ಮೇಳನಗಳು ಹೆಚ್ಚು ಜನಪ್ರಿಯವಾದವು.

ಈಗಾಗಲೆ ತಿಳಿಸಿರುವಂತೆ ಸ್ವಾಮಿ ವಿವೇಕಾನಂದರ ಪ್ರತಿಯೊಂದು ಮಾತೂ ಗಾಢವಾದ ಅರ್ಥವನ್ನು ಹೊಂದಿದೆ. ಅದರ ವಿಮರ್ಶೆ ಇಲ್ಲಿದೆ:

### ಜಗತ್ತಿನ ಸರ್ವಧರ್ಮ ಸಮ್ಮೇಳನದ ಕನಸು ನನಸಾಯಿತು

೧೮೯೧ರ ವಸಂತ ಋತುವಿನಲ್ಲೇ ಇದರ ರೂಪರೇಷೆಗಳನ್ನು ಸಿದ್ಧಪಡಿಸಲು ಸಮಿತಿಯೊಂದನ್ನು ರಚಿಸಿದರು. ಹಲವಾರು ಪ್ರಾಟೆಸ್ಟಂಟ್ ಪಾದ್ರಿಗಳ ಮಾರ್ಗದರ್ಶನದ ಅಡಿಯಲ್ಲಿ ಸಮಿತಿಯು ಮುಖ್ಯ ಧ್ಯೇಯೋದ್ದೇಶಗಳನ್ನು ಸಿದ್ಧಪಡಿಸಿತು.

೧. ಜಗತ್ತಿನ ಇತಿಹಾಸದಲ್ಲೇ ಪ್ರಥಮ ಬಾರಿಗೆ, ಸಮ್ಮೇಳನದಲ್ಲಿ ವಿಶ್ವದ ಎಲ್ಲ ಪ್ರಮುಖ ಧರ್ಮಗಳ ಪ್ರತಿನಿಧಿಗಳನ್ನು ಒಂದು ವೇದಿಕೆಯಲ್ಲಿ ಕರೆತರಬೇಕು.

೨. ವಿವಿಧ ಧರ್ಮಗಳು ಬೋಧಿಸುವ ಪ್ರಮುಖ ಸತ್ಯಗಳನ್ನು ಮತ್ತು ಅವುಗಳ ನಡುವೆ ಇರುವ ಸಾಮ್ಯತೆಯನ್ನು ಮಾನವ ಸಮುದಾಯಕ್ಕೆ ಮನಮುಟ್ಟುವಂತೆ ತಿಳಿಸುವುದು.

೩. ಪ್ರತಿಧರ್ಮದ ಹಾಗೂ ಕ್ರೈಸ್ತಧರ್ಮದ ವಿವಿಧ ಶಾಖೆಗಳಲ್ಲಿನ ಉತ್ತಮ ವಾಗ್ಮಿಗಳನ್ನು ಆಹ್ವಾನಿಸುವುದು. ಅವರ ಮೂಲಕ ವಿವಿಧ ಧರ್ಮಗಳ ಮುಖ್ಯ ಅಂಶ ಸತ್ಯಗಳನ್ನು ತಿಳಿಯುವುದು.

೪. ಪ್ರತಿಯೊಂದು ಧರ್ಮವು ಇತರ ಧರ್ಮಗಳಿಗೆ ಯಾವ ರೀತಿಯ ಹೊಸ ಬೆಳಕನ್ನು, ವಿಚಾರಗಳನ್ನು ನೀಡಬಹುದು ಎಂಬ ಚರ್ಚೆ.

೫. ಮಾನವಜನಾಂಗದ ಪ್ರಮುಖ ಸಮಸ್ಯೆಗಳಿಗೆ, ಧರ್ಮವು ಯಾವ ರೀತಿಯಲ್ಲಿ ಪರಿಹಾರವನ್ನು ಸೂಚಿಸಬಹುದು

ಎಂದು ಧರ್ಮದ ಯೋಗ್ಯ ಪ್ರತಿನಿಧಿಗಳಿಂದ ತಿಳಿಯುವುದು.

೬. ವಿಶ್ವದ ಎಲ್ಲ ದೇಶಗಳ ನಡುವೆ ಭ್ರಾತೃತ್ವವನ್ನು ಸಾಧಿಸುವುದರ ಮೂಲಕ ವಿಶ್ವಶಾಂತಿಯನ್ನು ಗಳಿಸುವುದು.

ಅಬ್ಬಬ್ಬ, ಎಂತಹ ಸುಂದರ ಕಲ್ಪನೆಗಳು ನೋಡಿ!

**ಈ ಸಮ್ಮೇಳನ ನಡೆಯುವಂತೆ ಮಾಡಲು ಬಹುವಾಗಿ ಶ್ರಮಿಸಿದವರಿಗೆ ದಯಾಮಯನಾದ ಭಗವಂತ ನೆರವಾಗಿದ್ದಾನೆ; ಅವರ ಅತ್ಯಂತ ನಿಃಸ್ವಾರ್ಥ ಪ್ರಯತ್ನಕ್ಕೆ ಅವನು ಯಶಸ್ಸಿನ ಕಿರೀಟವನ್ನು ತೊಡಿಸಿದ್ದಾನೆ**

ಸರ್ವಧರ್ಮ ಸಮ್ಮೇಳನದ ಧ್ಯೇಯೋದ್ದೇಶಗಳನ್ನು ನಾವು ನೋಡಿದಾಗ ಎಷ್ಟು ಅದ್ಭುತ ಎಂದು ನಮಗೆ ಅನ್ನಿಸುತ್ತದೆ. ಆದರೆ ಜೊತೆ-ಜೊತೆಗೆ ಅನೇಕ ಕ್ರೈಸ್ತ ಗುರುಗಳಿಂದ ಅಷ್ಟೇ ಟೀಕಾಪ್ರಹಾರಗಳು ನಡೆದವು. ಅವರುಗಳು ಸಮ್ಮೇಳನವನ್ನು ತೀವ್ರವಾಗಿ ಖಂಡಿಸಿದರು. ಕ್ರೈಸ್ತಧರ್ಮವೊಂದೇ ಶ್ರೇಷ್ಠ ಧರ್ಮ, ನಿಜವಾದ ಧರ್ಮ. ಅದರ ಜೊತೆಗೆ ಇತರ ಅನಾಗರಿಕ ಧರ್ಮಗಳನ್ನು ತುಲನೆ ಮಾಡುವುದು ಅತ್ಯಂತ ಪಾಪಕರ ಎಂದು ಕ್ಯಾಂಟರ್ಬರಿಯ ಆರ್ಚ್ ಬಿಷಪ್‌ರವರು ಆಯೋಜಕರನ್ನು ಟೀಕಿಸಿದ್ದರು. ಅನೇಕ ಕ್ರೈಸ್ತಧರ್ಮಗುರುಗಳು ತೀವ್ರ ವಾಗ್ದಾಳಿಯನ್ನು ನಡೆಸಿದ್ದರು. ಅಮೇರಿಕದ ಅನೇಕ ದಿನಪತ್ರಿಕೆಗಳು ಇದನ್ನು ಖಂಡಿಸಿದ್ದವು. ಅಲ್ಲದೇ ಇದು ನಡೆಯಲು ಸಾಧ್ಯವೇ ಎಂಬ ಸಂಶಯವನ್ನು ವ್ಯಕ್ತಪಡಿಸಿದ್ದವು. ಇನ್ನು ಕೆಲವರು, ''ಕ್ರೈಸ್ತಧರ್ಮವು ಶಕ್ತಿಯುತವಾದುದು. ಈ ಸಮ್ಮೇಳನವು ಅದನ್ನು ವಿಶ್ವಕ್ಕೆ ಪ್ರದರ್ಶಿಸಲು ಉತ್ತಮ ಅವಕಾಶ'' ಎಂದರು. ಆದರೆ ಸ್ವಾಮಿ ವಿವೇಕಾನಂದರು ಹೇಳುವಂತೆ ಅಲ್ಲಿನ ಜನರು, ಇದಾವುದರ ಗೋಜಿಗೂ ಹೋಗದೆ ಉತ್ತಮ ಸಂದೇಶಗಳಿಗಾಗಿ ಕಾತರದಿಂದ ಕಾಯುತ್ತಿದ್ದರು. ಅನೇಕರಿಗೆ ಸರ್ವಧರ್ಮ ಸಮ್ಮೇಳನವು ಜರುಗುತ್ತದೆಯೇ ಎಂಬ ಸಂದೇಹ ಕಾಡಿತ್ತು. ಆದರೆ ಸಮ್ಮೇಳನ ನಡೆಯುವ ದಿನಗಳು ಹತ್ತಿರವಾದಂತೆ, ಒಂದು ಅಲೌಕಿಕ ಶಕ್ತಿಯು ಕೆಲಸ ಮಾಡುತ್ತಿರುವಂತೆ ಸಾಮಾನ್ಯ ವೀಕ್ಷಕನಿಗೂ ತಿಳಿಯುತ್ತಿತ್ತು. ಸ್ವಾಮಿ ವಿವೇಕಾನಂದರು, ಸ್ವಾಮಿ ತುರೀಯಾನಂದರ ಬಳಿ ''ಸರ್ವಧರ್ಮ ಸಮ್ಮೇಳನವು ಇದಕ್ಕಾಗಿ (ತಮ್ಮ ಕಡೆ ಬೆರಳು ತೋರಿಸಿ) ಆಯೋಜನೆಗೊಳ್ಳುತ್ತಿದೆ. ಬಹಳ ಹತ್ತಿರದಲ್ಲೇ ಅದು ಜರುಗುವುದನ್ನು ನೀನು ನೋಡುತ್ತೀಯೆ'' ಎಂದಿದ್ದರು.

ಸ್ವಾಮೀಜಿ ಶಿಷ್ಟಾಚಾರವನ್ನು ಪಾಲಿಸುತ್ತ ತಮ್ಮ ಕೃತಜ್ಞತೆಗಳನ್ನು ಸಲ್ಲಿಸುವುದರ ಮೂಲಕ ತಮ್ಮ ಸಭ್ಯ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಟ್ಟರು. ಯಾರು ಸರ್ವಧರ್ಮ ಸಮ್ಮೇಳನದಲ್ಲಿ ಭ್ರಾತೃತ್ವ ಭಾವನೆಯ ವಿರುದ್ಧ ಮೊಳಗಿದ್ದರೋ, ಅವರಿಗೂ ಸಹ ತಮ್ಮ ಧನ್ಯವಾದಗಳನ್ನು ಅರ್ಪಿಸಿದರು. ಅಬ್ಬಬ್ಬ! ಎಂತಹ ಹೃದಯ ವೈಶಾಲ್ಯತೆ! ಭಾಷಣಕಾರರು ತಮ್ಮ ಭಿನ್ನ ವಿಚಾರಧಾರೆಯ ಮೂಲಕ ಸಮ್ಮೇಳನದ ಮೆರಗನ್ನು ಅಧಿಕಗೊಳಿಸಿದ್ದಾರೆ ಎನ್ನುತ್ತಾರೆ ಸ್ವಾಮೀಜಿ. ಅಂತಹವರಿಗೆ ಸ್ವಾಮೀಜಿ ವಿಶೇಷವಾದ ಧನ್ಯವಾದಗಳನ್ನು ತಿಳಿಸುತ್ತಾರೆ. ಎಂತಹ ಮೇರು ವ್ಯಕ್ತಿತ್ವ ಸ್ವಾಮೀಜಿಯವರದು! ಒಬ್ಬ ಜಗದ್ಗುರು, ಯತಿರಾಜರೇ ಅವರು. ಸರ್ವಧರ್ಮ ಸಮ್ಮೇಳನದ ಸಮಿತಿಯು ತೆರೆಮರೆಯಲ್ಲಿ ಮಾಡಿದ್ದ ಕೆಲಸವು ಅಗಾಧವಾಗಿತ್ತು. ನಮಗೆ ಸಿಗುವ ಅಂಕಿ-ಅಂಶಗಳ ಪ್ರಕಾರ, ೧೦,೦೦೦ ಪತ್ರಗಳ ವ್ಯವಹಾರ ನಡೆದಿತ್ತು. ೪೦,೦೦೦ ದಾಖಲೆಗಳನ್ನು ವಿವಿಧ ದೇಶಗಳಿಂದ ಬಂದ ಕೋರಿಕೆಗಳಿಗೆ ಅನ್ವಯ ಕಳುಹಿಸಿಕೊಡಲಾಗಿತ್ತು. ಸಮ್ಮೇಳನದ ಅಧ್ಯಕ್ಷರಾಗಿದ್ದ ಡಾ. ಬರೋಸ್‌ರವರು ''ಮೂವತ್ತು ತಿಂಗಳುಗಳ ಕಾಲ ಪ್ರಪಂಚದ ಎಲ್ಲ ಹಡಗುಗಳು ಮತ್ತು ರೈಲುಗಳು ಸರ್ವಧರ್ಮ ಸಮ್ಮೇಳನಕ್ಕೆಂದು ತಮಗೇ ಅರಿವಿಲ್ಲದೆ ಕೆಲಸ ನಿರ್ವಹಿಸಿವೆ. ಶಿಕಾಗೋ ನಗರದ ಅಂಚೆ ಕಛೇರಿಯ ಬಹುಭಾಗ ನಮ್ಮ ಸಮ್ಮೇಳನದ ಪತ್ರವ್ಯವಹಾರಗಳಿಂದ ತುಂಬಿಹೋಗಿತ್ತು ಎಂದರೆ ಅತಿಶಯೋಕ್ತಿಯಾಗಲಾರದು. ಅಲ್ಲದೆ ಬೇರೆ ಬೇರೆ ಪ್ರಸಿದ್ಧ ವ್ಯಕ್ತಿಗಳಿಂದ ಸಮ್ಮೇಳನದ ಆವಶ್ಯಕತೆಯನ್ನು ಜನರಿಗೆ ತಿಳಿಸಲು ಉಪನ್ಯಾಸ, ಲೇಖನ, ಸಂಪಾದಕೀಯಗಳನ್ನು ಬರೆಸಿವೆ,'' ಎನ್ನುತ್ತಾರೆ. ಅದೊಂದು ಮಹಾಯಜ್ಞದೋಪಾದಿಯಲ್ಲಿ ಅನೇಕರು ತಮ್ಮ ಸೇವೆಯನ್ನು ಸಲ್ಲಿಸಿದ್ದರು.

''ಆದರೆ ಅಂಥ ಐಕ್ಯತೆ (ಧಾರ್ಮಿಕ ಐಕ್ಯತೆ) ಯಾವುದಾದರೂ ಒಂದು ಧರ್ಮದ ವಿಜಯದಿಂದ, ಇತರ ಧರ್ಮಗಳ ನಾಶದಿಂದ ಸಾಧಿತವಾಗುತ್ತದೆ ಎಂದು ಯಾರಾದರೂ ಭಾವಿಸಿದ್ದರೆ ಅವರಿಗೆ ನಾನು ಹೀಗೆ ಹೇಳಬೇಕಾಗಿದೆ: ಸೋದರನೆ, ನಿನ್ನ ಬಯಕೆ ನೆರವೇರುವುದು ಅಸಾಧ್ಯ. ಕ್ರೈಸ್ತರು ಹಿಂದುಗಳಾಗಲಿ ಎಂಬುದು ನನ್ನ ಬಯಕೆಯೆ? ಖಂಡಿತ ಇಲ್ಲ. ಹಿಂದುಗಳು, ಬೌದ್ಧರು ಕ್ರೈಸ್ತರಾಗಲಿ ಎಂಬುದು ನನ್ನ ಬಯಕೆಯೆ? ಖಂಡಿತ ಅಲ್ಲ.''

ಸಮ್ಮೇಳನದ ಮೊದಲ ಹತ್ತು ದಿನಗಳಲ್ಲಿ ಕ್ರೈಸ್ತಧರ್ಮದ ಹಾಗೂ ಅದರ ಶಾಖೆಗಳ ಕುರಿತು ವಿವರವಾಗಿ ಅನೇಕರು ವಿದ್ವತ್ಪೂರ್ಣ ಉಪನ್ಯಾಸಗಳನ್ನು ಮಾಡಿದರು. ಸರ್ವಧರ್ಮ ಸಮ್ಮೇಳನದ ಧ್ಯೇಯವು ಧಾರ್ಮಿಕ ಸಹಿಷ್ಣುತೆ, ವಿಶ್ವಭ್ರಾತೃತ್ವವನ್ನು ಸಾಧಿಸುವುದು ಎಂದು. ಕೆಲವು ಕ್ರೈಸ್ತಮತದ ಗುರುಗಳು ಇದನ್ನು ಅನುಮೋದಿಸಿದರೂ ಕೂಡ ಪರೋಕ್ಷವಾಗಿ ಉಪಾಯದಿಂದ ವೇದಿಕೆಯ ಮೇಲೆ ವಿಶ್ವಧರ್ಮ ಎಂದರೆ ಕ್ರೈಸ್ತಧರ್ಮ ಒಂದೇ, ಅದನ್ನು ಸ್ವೀಕರಿಸಿದರೆ ವಿಶ್ವಭ್ರಾತೃತ್ವ ಸಿದ್ಧಿಸಿದ ಹಾಗೇ ಎಂದು ಪ್ರಬಲವಾಗಿ ಅನೇಕ ಭಾಷಣಕಾರರು ಒತ್ತಿ ಹೇಳಿದರು.

ಉದಾಹರಣೆಗೆ ಲಂಡನ್ ಮಿಷನರಿ ಸೊಸೈಟಿಯ ರೆವರೆಂಡ್ ಥಾಮಸ್ ಸ್ಲೇಟರ್‌ರವರು ಬರೆದಿದ್ದ ಭಾಷಣದ ಪ್ರತಿಯನ್ನು ರೆವರೆಂಡ್ ಫ್ರ್ಯಾಂಕ್ ಬ್ರಿಸ್ಟೋಲ್‌ರವರು ಓದಿದರು. ಅದರಲ್ಲಿ ''ಭಾರತೀಯ ಉನ್ನತ ತಾತ್ತ್ವಿಕ ಚಿಂತನೆಗಳಲ್ಲಿ ಒಂದಾದ ವೇದಾಂತವು ನಿರಾಶಾವಾದದ ಹಾಗೂ ತಪ್ಪು ಕಲ್ಪನೆಗಳ ಆಧಾರದ ಮೇಲೆ ನಿಂತಿದೆ. ಯಾವುದೇ ಪ್ರಮಾಣಗಳಿಂದ ದೃಢೀಕರಿಸದೆ, ಋಗ್ವೇದದ ಮಂತ್ರಗಳಲ್ಲಿ ವೇದಾಂತವು ನಮಗೆ ಕಾಣಲಾಗುವುದಿಲ್ಲ.

ಅಲ್ಲದೆ ವಿಸ್ತೃತವಾಗಿಯೂ, ಸೂಕ್ಷ್ಮವಾದ ತಪ್ಪಾದ ವಾದಸರಣಿಯಿಂದ ವೇದಾಂತವನ್ನು ಪ್ರತಿಪಾದಿಸಲಾಗಿದೆ'' ಎಂದು ಬರೆದಿತ್ತು.

ರೆವರೆಂಡ್ ಸ್ಲೇಟರ್‌ರವರು ಸ್ವತಃ ಮಾತನಾಡುತ್ತಾ ''ವೇದಗಳು ಕತ್ತಲು ಮತ್ತು ಬೆಳಕಿನ ನಡುವೆ ಹೊಯ್ದಾಡುತ್ತಿದೆ. ಕೆಲವೊಮ್ಮೆ ಬೆಳಕು ಕಂಡರೂ, ಅದು ಕೊಂಚ ಸಮಯ ಮಾತ್ರ. ಅದನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ನಮಗೆ ತಿಳಿಯುವ ವಿಷಯ ವೇನೆಂದರೆ, ವೇದಗಳಲ್ಲಿ ಮಾನವನ ಪ್ರಾರ್ಥನೆಗೆ ಭಗವಂತನಿಂದ ದೊರಕಿರುವ ಉತ್ತರ, ಪರಿಹಾರ ಎಂದು ಕಾಣಿಸುವ ಒಂದು ವಾಕ್ಯವೂ ಅಲ್ಲಿ ಕಾಣಸಿಗುವುದಿಲ್ಲ. ಸತ್ಯಸಾಕ್ಷಾತ್ಕಾರದ ನುಡಿಗಳನ್ನು ಅಲ್ಲಿ ಕಾಣಲಾಗುವುದಿಲ್ಲ. ನಮ್ಮ ಧರ್ಮಗ್ರಂಥವಾದ ಬೈಬಲ್ ಭಗವಂತನಿಂದಲೇ ಉಪದೇಶಿಸಲ್ಪಟ್ಟದ್ದು. ಅಲ್ಲಿ ಭಗವಂತನ ವಾಕ್ಯಗಳು ಮಾತ್ರ ಕಾಣಸಿಗುತ್ತವೆ. ಆದ್ದರಿಂದ ಅದೊಂದು ಅಪೂರ್ವ ಧರ್ಮಗ್ರಂಥ'' ಎನ್ನುತ್ತಾರೆ ರೆವರೆಂಡ್ ಸ್ಲೇಟರ್.

ಹೀಗೆ ಸರ್ವಧರ್ಮ ಸಮ್ಮೇಳನದ ವೇದಿಕೆಯ ಮೇಲೆ ಅನೇಕರು ಕ್ರೈಸ್ತಧರ್ಮ ಮತ್ತು ಅದರ ತಾತ್ತ್ವಿಕ ನಿಲುವು ಮಾತ್ರ ಶ್ರೇಷ್ಠ ಎಂದಿದ್ದರು. ವಿಶೇಷವಾಗಿ ನಾವು ಪಾಪಿಗಳಲ್ಲ, ಅಮೃತಪುತ್ರರು. ಮನುಷ್ಯರನ್ನು ಪಾಪಿಗಳು ಎಂದು ಕರೆಯುವುದು ಮಹಾಪಾಪ, ಎಂಬ ಸ್ವಾಮಿ ವಿವೇಕಾನಂದರ ಮಾತುಗಳು ಕ್ರೈಸ್ತ ಧರ್ಮಗುರುಗಳಿಗೆ ಆಘಾತವನ್ನುಂಟುಮಾಡಿತ್ತು. ಈ ಎಲ್ಲಾ ಆಗುಹೋಗುಗಳನ್ನು ಕಂಡಿದ್ದ ಸ್ವಾಮಿ ವಿವೇಕಾನಂದರು ಮೇಲಿನ ಮಾತುಗಳನ್ನು ನುಡಿಯುತ್ತಾರೆ. ಅಲ್ಲದೆ ಸ್ವಾಮೀಜಿಯವರು ಮುಂದುವರೆಸುತ್ತ ''ಬೀಜವನ್ನು ನೆಲದಲ್ಲಿ ಬಿತ್ತಿದ್ದಾಗಿದೆ. ಮಣ್ಣು, ಗಾಳಿ, ನೀರು ಎಲ್ಲ ಎಲ್ಲಿವೆ. ಬೀಜವೆ ಗಾಳಿ, ನೀರು ಆಗುವುದೇನು? ಇಲ್ಲ. ಅದು ಗಿಡವಾಗುತ್ತದೆ. ತನ್ನದೇ ಬೆಳವಣಿಗೆಯ ನಿಯಮಕ್ಕೆ ಅನುಗುಣವಾಗಿ ಗಾಳಿ ನೆಲ ನೀರುಗಳನ್ನು ತನ್ನ ಸ್ವಭಾವವಾಗಿ ಪರಿವರ್ತಿಸಿಕೊಂಡು ಗಿಡವಾಗಿ ಬೆಳೆಯುತ್ತದೆ.

''ಧರ್ಮದ ವಿಷಯಕ್ಕೆ ಇದೇ ಅನ್ವಯವಾಗುತ್ತದೆ. ಕ್ರೈಸ್ತ ಹಿಂದು ಅಥವಾ ಬೌದ್ಧನಾಗಬೇಕಾಗಿಲ್ಲ. ಹಿಂದುವಾಗಲಿ ಬೌದ್ಧನಾಗಲಿ ಕ್ರೈಸ್ತನಾಗಬೇಕಾಗಿಲ್ಲ. ಪ್ರತಿಯೊಬ್ಬನೂ ಇತರರ ಮನೋಭಾವವನ್ನು ಗ್ರಹಿಸಬೇಕು. ಆದರೆ ತನ್ನ ವೈಯಕ್ತಿಕತೆಯನ್ನು ಉಳಿಸಿಕೊಂಡು ತನ್ನದೇ ಬೆಳವಣಿಗೆಯ ನಿಯಮಗಳಿಗೆ ಅನುಗುಣವಾಗಿ ಬೆಳೆಯಬೇಕು,'' ಎಂದರು.

ಸ್ವಾಮಿ ವಿವೇಕಾನಂದರ ಗುರುಗಳಾದ ಭಗವಾನ್ ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಮಾತೃಧರ್ಮ ಹಾಗೂ ಇತರ ಧರ್ಮಗಳ ಮೂಲಕ ಭಗವಂತನನ್ನು ಕಂಡರು. ಅವರು ಅವರ ಮಾತೃಧರ್ಮವನ್ನಾಗಲೀ ಇತರ ಧರ್ಮವನ್ನಾಗಲೀ ತೆಗಳಲಿಲ್ಲ. ಅವರ ಧರ್ಮವನ್ನು ಬಿಡದೆ ಅನ್ಯಧರ್ಮಗಳ ಅಂತರಂಗವನ್ನು ಅರಿತರು. ಅವರ ಶಿಷ್ಯರಾದ ಸ್ವಾಮಿ ವಿವೇಕಾನಂದರೂ ಕೂಡ ಅವರ ಮಾತೃಧರ್ಮವನ್ನು ಬಿಡದೆ, ಇತರ ಧರ್ಮಗಳಲ್ಲಿ ಇರುವ ಒಳ್ಳೆಯ ಅಂಶಗಳನ್ನು ಮನಗಂಡು, ಅಳವಡಿಸಿಕೊಂಡು ಮುಂದೆ ಸಾಗಲು ಕರೆಕೊಟ್ಟರು. ಇದನ್ನು ನಮ್ಮ ಸನಾತನಧರ್ಮ ಹಾಗೂ ನಮ್ಮ ಮಾತೃಭೂಮಿ ಭಾರತ ಶತಮಾನಗಳಿಂದಲೂ ಮಾಡಿಕೊಂಡು ಬಂದಿವೆ.

ತಮ್ಮತನವನ್ನು ಉಳಿಸಿಕೊಂಡು, ಇತರ ಧರ್ಮ ಮತ್ತು ಸಂಸ್ಕೃತಿಗಳ ಅಂಶವನ್ನು ಭಾರತದೇಶವೂ ಮೈಗೂಡಿಸಿಕೊಂಡು ಬಂದಿದೆ. ಆದ್ದರಿಂದಲೇ ಶತಮಾನಗಳು ಕಳೆದರೂ ನಮ್ಮ ಸಂಸ್ಕೃತಿಯು ನಾಶವಾಗಲಿಲ್ಲ. ಅದಕ್ಕೆ ಹಲವಾರು ಏಳು-ಬೀಳುಗಳು ಆಘಾತಗಳು ಉಂಟಾಗಿದ್ದರೂ, ಅದನ್ನು ಚೇತರಿಸಿಕೊಂಡು ಬಂದಿರುವುದನ್ನು ನಾವು ಇತಿಹಾಸದ ಪುಟಗಳಲ್ಲಿ ಕಾಣುತ್ತೇವೆ. ಅದಕ್ಕೆ ಕಾರಣ ಸ್ವಾತಂತ್ರ್ಯ. ಪ್ರತಿಯೊಬ್ಬನೂ ಅವನ ಸ್ವಭಾವ ಮತ್ತು ಶಕ್ತಿಗಳಿಗೆ ಅನುಗುಣವಾಗಿ ಬೆಳೆಯುವ ಸ್ವಾತಂತ್ರ್ಯವನ್ನು ನೀಡಿದ್ದರು. ಭಾರತದಲ್ಲಿ ಗುಡ್ಡಗಾಡುಗಳ ಪ್ರದೇಶದ ಆಚಾರ-ವಿಚಾರಗಳಿಂದ ಹಿಡಿದು, ಅದ್ವೈತ ವೇದಾಂತದವರೆಗೂ ನಮ್ಮ ಸಂಸ್ಕೃತಿಯು ಎಲ್ಲ ಬಗೆಯ ತಾತ್ತ್ವಿಕ ಚಿಂತನೆಗಳಿಗೂ ಅವಕಾಶವನ್ನು ಮಾಡಿಕೊಟ್ಟಿದೆ. ಆದರೆ ಇತರ ಧರ್ಮಗಳು ತಾವು ಮುಂದುವರಿದಂತೆ ಹಳೆಯದನ್ನು ತ್ಯಜಿಸಿದರು. ಅಲ್ಲದೆ ಪ್ರತಿಯೊಬ್ಬನೂ ಆಧ್ಯಾತ್ಮಿಕವಾಗಿ ಪ್ರಾರಂಭದ ಹಂತದಲ್ಲಿದ್ದರೂ, ಅಥವಾ ಮುಂದುವರೆದಿದ್ದರೂ ಒಂದೇ ರೀತಿ ಆಲೋಚಿಸುವಂತೆ, ಅದೇ ಆಚಾರ-ವಿಚಾರಗಳನ್ನು ಅನುಸರಿಸುವಂತೆ ಕಟ್ಟಪ್ಪಣೆ ಮಾಡಿಬಿಟ್ಟರು.

ಸ್ವಾಮಿ ವಿವೇಕಾನಂದರು ಬಲವಂತವಾಗಿ ಮತಾಂತರ ಮಾಡುವುದನ್ನು ಖಂಡಿಸುತ್ತಾರೆ. ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು, ತಮ್ಮ ಧರ್ಮವೊಂದೇ ಶ್ರೇಷ್ಠ ಹಾಗೂ ನಿಜವಾದ ಧರ್ಮ, ಪ್ರತಿಯೊಬ್ಬ ಮಾನವನೂ ಅದನ್ನೇ ಸ್ವೀಕರಿಸಬೇಕು ಎಂಬ ನಿಲುವನ್ನು ಹೊಂದಿವೆ. ಯೂರೋಪು ಮತ್ತು ಇತರ ದೇಶಗಳಲ್ಲಿ, ಅಲ್ಲಿನ ಮೂಲ ಧರ್ಮಗಳನ್ನು ನಾಶಮಾಡಿ ತಮ್ಮ ಧರ್ಮವನ್ನು ಒತ್ತಾಯದಿಂದ ಜನರ ಮೇಲೆ ಹೇರಿದರು. ಈ ಮನೋಭಾವವನ್ನು ಸ್ವಾಮಿ ವಿವೇಕಾನಂದರು ಒಪ್ಪಲಿಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವೈಯಕ್ತಿಕತೆಯನ್ನು ಉಳಿಸಿಕೊಂಡು, ಇತರೆ ಸಂಸ್ಕೃತಿ, ಧರ್ಮ, ಆಚಾರ-ವಿಚಾರಗಳಲ್ಲಿರುವ ಶ್ರೇಷ್ಠ ಗುಣ, ವಿಚಾರಗಳನ್ನು ಮೈಗೂಡಿಸಿಕೊಳ್ಳಬೇಕು ಎನ್ನುತ್ತಾರೆ ಸ್ವಾಮಿ ವಿವೇಕಾನಂದರು.

''ಸರ್ವಧರ್ಮ ಸಮ್ಮೇಳನ ಜಗತ್ತಿಗೆ ಏನನ್ನಾದರೂ ಪ್ರಕಟಪಡಿಸಿದ್ದರೆ ಅದು ಇದು: ಪಾವಿತ್ರ್ಯ, ಪರಿಶುದ್ಧತೆ, ದಾನ, ದಯೆಗಳು ಯಾವುದೇ ಒಂದು ಧರ್ಮದ ಸ್ವಂತ ಆಸ್ತಿ ಅಲ್ಲ ; ಪ್ರತಿಯೊಂದು ಧರ್ಮವೂ ಅತ್ಯಂತ ಉದಾರಚರಿತರಾದ ಸ್ತ್ರೀಪುರುಷರನ್ನು ರೂಪಿಸಿದೆ.''

ನಮ್ಮ ಸನಾತನ ಸಂಸ್ಕೃತಿಯಿಂದ ಪ್ರಾರಂಭಿಸಿ, ಗ್ರೀಕ್, ರೋಮ್, ಈಜಿಪ್ಟ್ ಮುಂತಾದ ಎಲ್ಲ ನಾಗರಿಕತೆಗಳಲ್ಲಿ, ಸಂಸ್ಕೃತಿಗಳಲ್ಲಿ, ಜನಾಂಗಗಳಲ್ಲಿ ಮಹನೀಯರು ಜನ್ಮತಾಳಿದ್ದಾರೆ. ಅಲ್ಲದೆ

ಹಿಂದೂ, ಪಾರಸೀ, ಝುರತುಷ್ಟ್ರ ಧರ್ಮಗಳು ಪುರಾತನ ಧರ್ಮಗಳು. ಅವೆಲ್ಲವುಗಳಲ್ಲಿಯೂ ಅನೇಕ ಮಹಾಮಹಿಮರು, ಸತ್ಪುರುಷರು ಬಂದು ಹೋಗಿರುವುದನ್ನು ಇತಿಹಾಸದ ಪುಟಗಳಲ್ಲಿ ನಾವು ಕಾಣಬಹುದು. ಇಷ್ಟಿದ್ದರೂ ಕೆಲವರು ಮಹಾಪುರುಷರು ತಮ್ಮ ಧರ್ಮ ಅಥವಾ ಸಂಸ್ಕೃತಿಗೆ ಮಾತ್ರ ಮೀಸಲು ಎಂದು ಹೇಳುವುದು ಎಷ್ಟು ಸಮಂಜಸ? ಇದು ಅವರ ಮೂರ್ಖತನ, ಅಜ್ಞಾನಕ್ಕೆ ಸಾಕ್ಷಿ ಅಲ್ಲವೆ ಎನ್ನುತ್ತಾರೆ ಸ್ವಾಮಿ ವಿವೇಕಾನಂದರು.

ರೆವರೆಂಡ್ ಜೋಸೆಫ್ ಕುಕ್ ತಮ್ಮ ಭಾಷಣದಲ್ಲಿ ಹಿಂದೂಗಳನ್ನು ಅತ್ಯಂತ ತೀಕ್ಷ್ಣವಾಗಿ ಟೀಕಿಸಿದರು. ಬಿಷಪ್ ಜೆ.ಪಿ. ನ್ಯೂಮನ್ ಎಂಬುವವರು ಕೂಡ ಅದೇ ಧಾಟಿಯನ್ನು ಮುಂದುವರೆಸಿದರು. ಹಲವಾರು ಭಾಷಣಕಾರರು, ''ಯೂರೋಪ್, ಇಂಗ್ಲೆಂಡ್ ದೇಶಗಳು ಕ್ರೈಸ್ತ ದೇಶಗಳಾಗಿರುವುದರಿಂದ ಶ್ರೀಮಂತ ರಾಷ್ಟ್ರಗಳಾಗಿವೆ. ಆದರೆ, ಭಾರತದಂತಹ ರಾಷ್ಟ್ರಗಳ ಕಥೆ ಏನಾಗಿದೆ ನೋಡಿ?'' ಎಂದು ಮೂದಲಿಸಿದರು.

ಅಂದು ಮಧ್ಯಾಹ್ನ ಸ್ವಾಮಿ ವಿವೇಕಾನಂದರು ಇದಕ್ಕೆ ಉತ್ತರಿಸಿ ದರು: ''...ಇಂದು ನಾನು ಇಲ್ಲಿ ಕುಳಿತು ಅಸಹಿಷ್ಣುತೆಯ ಪರಮಾವಧಿಗೆ ಸಾಕ್ಷಿಯಾಗಿದ್ದೆ. ಮುಸಲ್ಮಾನರು ಅತ್ಯಂತ ಹೆಮ್ಮೆ ಯಿಂದ ಖಡ್ಗದ ಮೂಲಕ ತಮ್ಮ ಧರ್ಮವನ್ನು ಭಾರತದಲ್ಲಿ ಪ್ರತಿಷ್ಠಾಪಿಸಿದ್ದೇವೆ ಎಂದರು. ಕ್ರೈಸ್ತರು ಕ್ರೈಸ್ತ ರಾಷ್ಟ್ರಗಳು ಮಾತ್ರ ಶ್ರೀಮಂತ ರಾಷ್ಟ್ರಗಳು ಎಂದರು. ನಾನು ಇಲ್ಲಿ ಹೇಳಲು ಇಚ್ಛಿ ಸುವುದೇನೆಂದರೆ, ಖಡ್ಗ ಮತ್ತು ರಕ್ತಪಾತವು ಭಾರತೀಯರಿಗೆ ಒಪ್ಪಿತವಲ್ಲ. ನಮ್ಮ ಧರ್ಮವು ಪ್ರೀತಿಯ ಮೇಲೆ ನೆಲೆಯಾಗಿದೆ. ಇಂಗ್ಲೆಂಡ್ ದೇಶವು ೨೫೦,೦೦,೦೦೦ ಏಷಿಯನ್ನರ ಕತ್ತಿನ ಮೇಲೆ ತನ್ನ ಕಾಲನ್ನು ಮೆಟ್ಟಿ ಶ್ರೀಮಂತವಾಗಿದೆ. ಇನ್ನು ಯೂರೋಪಿನ ಇತಿಹಾಸವನ್ನು ಗಮನಿಸಿದಾಗ ಯೂರೋಪ್ ಸ್ಪೇನನ್ನು ವಶ ಪಡಿಸಿಕೊಂಡು ಸಂಪದ್ಭರಿತವಾಯಿತು. ಸ್ಪೇನ್ ದೇಶವು ಮೆಕ್ಸಿಕೋ ಮೇಲೆ ಆಕ್ರಮಣ ಮಾಡಿ ಶ್ರೀಮಂತವಾಯಿತು. ಈ ರೀತಿಯಾಗಿ ಶ್ರೀಮಂತರಾಗಲು ಭಾರತವು ಇಚ್ಛಿಸುವುದಿಲ್ಲ. ಅಲ್ಲದೆ ಜಗತ್ತಿನಲ್ಲಿ ಇತರ ದೇಶಗಳ ಮೇಲೆ ಆಕ್ರಮಣ ಮಾಡದೆ ಇರುವ ಏಕೈಕ ರಾಷ್ಟ್ರವೆಂದರೆ, ಅದು ನನ್ನ ದೇಶ ಭಾರತ ಎಂದು ಹೆಮ್ಮೆಯಿಂದ ಹೇಳುತ್ತೇನೆ'' ಎಂದರು ಸ್ವಾಮಿ ವಿವೇಕಾನಂದರು. ಈ ರೀತಿಯ ಪರ ಮತ್ತು ವಿರೋಧದ ವಿಚಾರಗಳು ವ್ಯಕ್ತವಾಗಿದ್ದರೂ, ಸರ್ವಧರ್ಮ ಸಮ್ಮೇಳನ ಸಭೆ ಹಲವಾರು ಉತ್ತಮ ಹಾಗೂ ಉದಾತ್ತ ವಿಚಾರಗಳಿಗೂ ಸಾಕ್ಷಿಯಾಗಿತ್ತು. ಸ್ವಾಮಿ ವಿವೇಕಾನಂದರು ವಿಶಾಲವಾದ ಅರ್ಥದಲ್ಲಿ ಹಾಗೂ ವಾಸ್ತವಿಕವಾದ ಮಾತನ್ನು ನುಡಿದರು. ಎಲ್ಲ ಧರ್ಮಗಳೂ ಸತ್ಯ, ಅವುಗಳು ಉದಯಿಸಿದ್ದೇ ಸತ್ಯಾನ್ವೇಷಣೆಗೆಂದು. ಪ್ರತಿಯೊಂದು ಧರ್ಮದಲ್ಲೂ ಅನೇಕ ದಿವ್ಯಾತ್ಮರು ಹುಟ್ಟಿದ್ದಾರೆ. ಎಲ್ಲ ಧರ್ಮಗಳಲ್ಲೂ ಪಾವಿತ್ರ್ಯ, ಅನುಕಂಪ, ದಯೆ ಮುಂತಾದ ವಿಶಿಷ್ಟ ಗುಣಗಳನ್ನು ಕಾಣಬಹುದು. ಇವು ಯಾವುದೇ ಒಂದು ಧರ್ಮದ ಸ್ವತ್ತಲ್ಲ ; ಒಂದೇ ಒಂದು ಧರ್ಮಕ್ಕೆ ಮೀಸಲಾಗಿಲ್ಲ ಎಂದು ಹೇಳಿದರು.

''ಇಷ್ಟೆಲ್ಲ ಸಾಕ್ಷ್ಯಾಧಾರಗಳು ಇರುವಾಗ ಯಾರಾದರೂ ತನ್ನ ಧರ್ಮವೊಂದೇ ಉಳಿಯತಕ್ಕದ್ದು, ಇತರ ಧರ್ಮಗಳು ನಾಶ ಹೊಂದತಕ್ಕವು ಎಂಬ ಭ್ರಾಂತಿಯಲ್ಲಿದ್ದರೆ ಅವನ ವಿಷಯದಲ್ಲಿ ನನಗೆ ಅಪಾರವಾದ ಮರುಕವಿದೆ. ಅವನಿಗೆ ನಾನು ಹೇಳುವುದಿಷ್ಟೆ — ಯಾರು ಎಷ್ಟೇ ವಿರೋಧಿಸಿದರೂ, ಪ್ರತಿಯೊಂದು ಧರ್ಮದ ಧ್ವಜದ ಮೇಲೂ ಬಹುಬೇಗ ಈ ಮಾತುಗಳು ಬರೆಯಲ್ಪಡುತ್ತವೆ. ಹೋರಾಟವಲ್ಲ, ಸೌಹಾರ್ದ, ವಿನಾಶವಲ್ಲ, ಸ್ವೀಕಾರ, ವೈಮನಸ್ಯವಲ್ಲ, ಸಾಮರಸ್ಯ ಮತ್ತು ಶಾಂತಿ.''

ಆಗಸ್ಟ್ ೧೮೯೩ರಲ್ಲಿ ಮುಂಬಯಿ ಹಾಗೂ ಇತರ ಪ್ರದೇಶಗಳಲ್ಲಿ ಇಸ್ಲಾಂ ಮತಕ್ಕೆ ಸೇರಿದ ಕೆಲವು ವ್ಯಕ್ತಿಗಳು ಹಿಂದುಗಳ ಮೇಲೆ ಎರಗಿದರು. ಆಗ ಇದರಿಂದ ಪ್ರಾರಂಭಗೊಂಡ ಜಗಳವು ಭಾರತದ ಅನೇಕ ಪ್ರದೇಶಗಳಿಗೆ ಹಬ್ಬಿತು. ಅಮೇರಿಕದ ಪ್ರತಿಷ್ಠಿತ ದಿನಪತ್ರಿಕೆಗಳಲ್ಲಿ ಒಂದಾದ ನ್ಯೂಯಾರ್ಕ್ ಟೈಮ್ಸ್ ದಿನಪತ್ರಿಕೆಯು, ''ಭಾರತದಲ್ಲಿ ಹಿಂದು ಮತ್ತು ಮುಸ್ಲಿಮರ ನಡುವೆ ಜಗಳವಾಯಿತು. ಬ್ರಿಟಿಷರು ಅದನ್ನು ಸಮರ್ಥವಾಗಿ ನಿಭಾಯಿಸಿದ್ದಾರೆ. ಬ್ರಿಟಿಷರು ಭಾರತದಲ್ಲಿ ಇಲ್ಲದಿದ್ದರೆ, ಭಾರತದ ಗತಿಯೇನಾಗುತ್ತಿತ್ತೊ?'' ಎಂದು ಮುದ್ರಿಸಿತ್ತು. ಇದನ್ನು ಓದಿದ ಸ್ವಾಮಿ ವಿವೇಕಾನಂದರು, ಅಮೇರಿಕ ಹಾಗು ಅನ್ಯ ದೇಶಗಳಲ್ಲಿ ಭಾರತದ ಕುರಿತು ಯಾವ ರೀತಿಯಲ್ಲಿ ಅಪಪ್ರಚಾರ ಮಾಡುತ್ತಿದ್ದಾರೆ ಎಂದು ತುಂಬಾ ವಿಚಲಿತರಾಗಿದ್ದರು.

ರೋಮನ್ ಸಂಸ್ಕೃತಿಯು ಇತರ ಯೂರೋಪ್ ದೇಶಗಳ ಮೇಲೆ ತನ್ನ ಸ್ವಾಮಿತ್ವವನ್ನು ಸ್ಥಾಪಿಸಲು ಪ್ರಯತ್ನಿಸಿತ್ತು. ಈಗ ಅದು ಭೂಗರ್ಭವನ್ನು ಸೇರಿದೆ. ಗ್ರೀಕ್ ನಾಗರಿಕತೆಯೂ ಕೂಡ ಇತಿಹಾಸವಾಗಿದೆ. ಸೂರ್ಯ ಮುಳುಗದ ಸಾಮ್ರಾಜ್ಯ ಎಂದೇ ಬೀಗುತ್ತಿದ್ದ ಬ್ರಿಟಿಷರು ಇಂದು ಮೂಲೆಗುಂಪಾಗಿದ್ದಾರೆ. ಆದರೆ ಭಾರತ ಮತ್ತು ಅದರ ಸಂಸ್ಕೃತಿಯು ಎಲ್ಲವನ್ನೂ ತನ್ನೊಳಗೆ ಸೇರಿಸಿಕೊಳ್ಳುವ, ಸ್ವೀಕರಿಸುವ ಗುಣವನ್ನು ಹೊಂದಿದೆ. ನಾಸ್ತಿಕವಾದ, ಚಾರ್ವಾಕ ಮತಗಳೂ ಒಳಗೊಂಡಂತೆ ಪರಮ ಶ್ರೇಷ್ಠವಾದ ವೇದಾಂತದವರೆಗೂ ಭಾರತೀಯರು ಎಲ್ಲ ಬಗೆಯ ಚಿಂತನಾ ಕ್ರಮಗಳಿಗೂ ಅವಕಾಶಗಳನ್ನು ನೀಡಿದ್ದಾರೆ. ಇಡೀ ವಿಶ್ವವೇ ಯಹೂದಿಗಳಿಗೆ ಆಶ್ರಯವನ್ನು ನಿರಾಕರಿಸಿದಾಗ, ಭಾರತವು ಅವರಿಗೆ ಜಾಗವನ್ನು ನೀಡಿ, ಎಲ್ಲ ರೀತಿಯ ಸ್ವಾತಂತ್ರ್ಯವನ್ನು ಕೊಟ್ಟಿತ್ತು. ಪಾರಸೀಗಳು ತಮ್ಮ ಮಾತೃಭೂಮಿಯಿಂದ ಹೊರದೂಡಲ್ಪಟ್ಟಾಗ ಭಾರತವು ಅವರಿಗೆ ಆಶ್ರಯ ನೀಡಿತು. ಅವರ ಆಚಾರ-ವಿಚಾರಕ್ಕೆ ತಕ್ಕಂತೆ ಜೀವಿಸಲು, ದೇವಸ್ಥಾನಗಳನ್ನು ಕಟ್ಟಿಕೊಳ್ಳಲು ಮುಕ್ತವಾಗಿ ಅವಕಾಶ ನೀಡಿತ್ತು. ಗ್ರೀಕರು ನಮ್ಮ ದೇಶದ ಮೇಲೆ ದಂಡೆತ್ತಿ ಬಂದಾಗ, ಸೂಕ್ತ ಪ್ರತ್ಯುತ್ತರವನ್ನು ನೀಡಿದೆವು. ಆದರೆ ಅವರು ಸೋತು ತಮ್ಮ ದೇಶವನ್ನು ಬಿಟ್ಟು ನಮ್ಮಲ್ಲಿ

ಶರಣಾಗತರಾಗಿ ಬಂದಾಗ ಪ್ರೀತಿಯಿಂದ ಅಪ್ಪಿಕೊಂಡೆವು. ಮುಕ್ತ ವಾಗಿ ಬದುಕಲು ನಮ್ಮ ನಾಡಿನಲ್ಲಿ ಸ್ವಾತಂತ್ರ್ಯವನ್ನು ನೀಡಿದೆವು. ಆದ್ದರಿಂದ ನಮ್ಮ ದೇಶದ ಸಂಸ್ಕೃತಿಯು ದೀರ್ಘ ಇತಿಹಾಸವನ್ನು ಹೊಂದಿದೆ. ಆದರೆ ಕಾಲಕಾಲಕ್ಕೆ ಆವಶ್ಯಕತೆಗೆ ತಕ್ಕಂತೆ ಅನೇಕ ಮಾರ್ಪಾಡುಗಳನ್ನೂ ಮಾಡಿಕೊಂಡಿದೆ. ಆದ್ದರಿಂದಲೇ ನಮ್ಮ ಧರ್ಮ-ಸಂಸ್ಕೃತಿ ಇನ್ನೂ ಜೀವಂತವಾಗಿ ಶಕ್ತಿಯುತವಾಗಿ ನಿಂತಿದೆ. ಆದರೆ ವಿಶ್ವದ ಪುರಾತನ ನಾಗರಿಕತೆಗಳು ಮತ್ತು ಅಲ್ಲಿನ ಧರ್ಮಗಳು ಸಂಗ್ರಹಾಲಯವನ್ನು ಸೇರಿವೆ. ಇದಕ್ಕೆ ಮೂಲ ಕಾರಣ ಇತರರ ಜೊತೆಗೆ ನಮ್ಮ ಸನಾತನ ಸಂಸ್ಕೃತಿ ಮತ್ತು ಧರ್ಮ ದಲ್ಲಿರುವ ಸ್ವೀಕಾರ ಮತ್ತು ಸೌಹಾರ್ದ ಮನೋಭಾವ; ನಾವೂ ನೀವೂ ಇಬ್ಬರೂ ಕೂಡಿ ಉತ್ತಮ ಬಾಳ್ವೆ ನಡೆಸೋಣ ಎಂಬ ಹೃದಯ ವೈಶಾಲ್ಯತೆ ಮತ್ತು ಶಾಂತಿಪ್ರಿಯತೆಯು ನಮ್ಮನ್ನು ರಕ್ಷಿಸಿ, ಪೋಷಿಸುತ್ತಾ ಬಂದಿದೆ. ''ಸೆಮಿಟಿಕ್ ಧರ್ಮಗಳು ತಮ್ಮ ಮನೋಭಾವವನ್ನು ಬದಲಿಸಿಕೊಂಡರೆ ಒಳಿತು. ಆದ್ದರಿಂದ ಅವರು ಮತ್ತು ಇತರರು ಶಾಂತಿ ಸಮೃದ್ಧಿಯಿಂದ ಬಾಳಬಹುದು. ಅಲ್ಲದೆ ಅವರ ಧರ್ಮಕ್ಕೂ ಕುಂದು ಬರುವುದಿಲ್ಲ. 'Live & let live'. ನಾನು ಚೆನ್ನಾಗಿ ಬದುಕುತ್ತೇನೆ, ನೀನು ಚೆನ್ನಾಗಿ ಬದುಕು ಎಂಬ ಸಿದ್ಧಾಂತವು ಮನುಕುಲದ ಧ್ಯೇಯ ವಾಕ್ಯವಾಗಬೇಕು'' ಎನ್ನು ತ್ತಾರೆ ಸ್ವಾಮಿ ವಿವೇಕಾನಂದರು. ''**ಲೋಕಾ ಸಮಸ್ತಾ ಸುಖಿನೋ ಭವಂತು**'' ಎಂದು ಹೇಳಿದ ಪುಣ್ಯಭೂಮಿ ನಮ್ಮದಲ್ಲವೆ?

## ಚಿಕಾಗೋ ಸಮ್ಮೇಳನದಲ್ಲಿ..

''ವೇದಿಕೆಯ ಮೇಲೆ ಜಗತ್ತಿನಲ್ಲಿರುವ ಎಲ್ಲ ರಾಷ್ಟ್ರಗಳ ವಿದ್ಯಾವಂತರು ನೆರೆದಿದ್ದಾರೆ. ಹುಟ್ಟಿದಾರಭ್ಯ ಬಹಿರಂಗ ಸಭೆ ಯಲ್ಲಿ ಮಾತನಾಡದ ನಾನು, ಈ ವಿದ್ವತ್ ಮಂಡಲಿಯ ಎದು ರಿಗೆ ಉಪನ್ಯಾಸ ಕೊಡುವುದೆಂದರೇನು!.. ನನ್ನ ಎದೆ ಕಂಪಿಸು ತ್ತಿತ್ತು. ನಾಲಿಗೆ ಒಣಗಿತು. ನನಗೇನೋ ಅಂಜಿಕೆಯಾಯಿತು. ಬೆಳಿಗ್ಗೆ ಮಾತನಾಡಲು ಧೈರ್ಯ ಬರಲಿಲ್ಲ. ಮಜುಂದಾರರು ಸೊಗಸಾಗಿ ಮಾತನಾಡಿದರು. ಚಕ್ರವರ್ತಿಯವರದು ಅದಕ್ಕಿಂತ ಸೊಗಸಾಗಿತ್ತು. ಶ್ರೋತೃಗಳು ಅವರನ್ನು ಕೊಂಡಾಡಿದರು. ಅವರೆಲ್ಲರೂ ಆಗಲೇ ಅಣಿಮಾಡಿದ ಭಾಷಣದೊಂದಿಗೆ ಬಂದಿ ದ್ದರು. ನಾನು ಮೂರ್ಖ, ನನ್ನ ಹತ್ತಿರ ಏನೂ ಇರಲಿಲ್ಲ. ಸರಸ್ವತಿಗೆ ನಮಿಸಿ ಮುಂದೆ ಬಂದೆ. ಡಾಕ್ಟರ್ ಬರೋಸರು ಸಭೆಗೆ ನನ್ನನ್ನು ಪರಿಚಯ ಮಾಡಿಕೊಟ್ಟರು. ನಾನು ಸಣ್ಣ ಭಾಷಣವನ್ನು ಮಾಡಿದೆ. ''**ಅಮೆರಿಕಾದ ಸಹೋದರಿಯರೇ, ಮತ್ತು ಸಹೋ ದರರೆ**'' ಎಂದು ನಾನು ಸಂಬೋಧಿಸಿದೆ. ಕಿವಿ ಕಿವುಡಾಗುವಂತೆ ಕರತಾಡನವಾಯಿತು. ಇದು ನಿಂತ ಮೇಲೆ ನನ್ನ ಭಾಷಣ ಮೊದ ಲಾಯಿತು. ಅದು ಮುಗಿದ ಮೇಲೆ ಉದ್ವೇಗದಿಂದ ಸುಸ್ತಾಗಿ ಕುಳಿತುಬಿಟ್ಟೆ. ಮಾರನೆಯ ದಿನ ಎಲ್ಲ ವೃತ್ತಪತ್ರಿಕೆಗಳೂ ನನ್ನ ಭಾಷಣವೇ ಎಲ್ಲಕ್ಕಿಂತಲೂ ಉತ್ತಮವಾದುದೆಂದು ಕೊಂಡಾ ಡಿದವು. ನಾನು ಇಡೀ ಅಮೆರಿಕ ದೇಶಕ್ಕೆ ಪರಿಚಿತನಾದೆ.''

— ಸ್ವಾಮಿ ವಿವೇಕಾನಂದ

# ಚಿಕಾಗೋ ಧರ್ಮ ಸಮ್ಮೇಳನದ ಮಹತ್ವ ಹಾಗೂ ಅದರ ಮೇಲೆ ವಿವೇಕಾನಂದರ ಪ್ರಭಾವ



**ಸ್ವಾಮಿ ರಾಘವೇಶಾನಂದ**

ಚಿಕಾಗೋ ಸರ್ವಧರ್ಮ ಸಮ್ಮೇಳನದ ನಂತರ ಸ್ವಾಮಿ ವಿವೇಕಾನಂದರಿಗೆ ದೊರೆತ ಮನ್ನಣೆ, ಕೀರ್ತಿ ಮತ್ತು ಯಶಸ್ಸು ಅಂತಿಂತಹುದಲ್ಲ. ತಮ್ಮ ಮುಂದಿನ ಕಾರ್ಯಗಳಿಗೆಲ್ಲ ಉತ್ತಮ ಚಾಲನೆ ದೊರಕಿದುದು ಇಲ್ಲೇ ಎಂಬುದು ನಿರ್ವಿವಾದ. ಈ ಕುರಿತು ವಿವರಿಸಿರುವ ಪೂಜ್ಯ ಸ್ವಾಮೀಜಿಯವರು ಉದಕಮಂಡಲ ರಾಮಕೃಷ್ಣ ಮಠದ ಮುಖ್ಯಸ್ಥರು. ಉತ್ತಮ ವಾಗ್ಮಿಗಳು ಮತ್ತು ಸಂಘಟಕರಾಗಿರುವ ಸ್ವಾಮೀಜಿಯವರು ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ.

ಸೆಪ್ಟೆಂಬರ್ ೧೧ನೇ ತಾರೀಖು, ೧೮೯೩ ಜಗತ್ತಿನಲ್ಲಿ ಎಲ್ಲರ ಮನಸ್ಸಿನಲ್ಲಿ ಎಲ್ಲ ಕಾಲಕ್ಕೂ ನಿರಂತರವಾಗಿ ಉಳಿಯುವ ದಿನ. ಧನ್ಯ ಅಮೆರಿಕ! ಈ ದಿನಕ್ಕೆ ಮೆರುಗನ್ನು ಕೊಟ್ಟ ನೀನು ನಿಜಕ್ಕೂ ಧನ್ಯ.

ಅದನ್ನು ಅಮೇರಿಕದ ೪೦೦ನೇ ಹುಟ್ಟಿದ ಹಬ್ಬವನ್ನು ಆಚರಿಸುವ ವರ್ಷ ಎಂದೂ ಹೇಳಬಹುದು. ಅತಿ ಸಂಭ್ರಮವಾಗಿಯೇ ಅದನ್ನು ಆಚರಿಸಿತು, ಅಮೆರಿಕ. ಚರಿತ್ರೆಯ ಕಾಲಗರ್ಭದಲ್ಲಿ ೪೦೦ ವರ್ಷ ಎನ್ನುವುದು ಬಹಳ ಸಣ್ಣದೇ ಆದರೂ, ಎಲ್ಲ ಕ್ಷೇತ್ರಗಳಲ್ಲಿ ಏನನ್ನೂ ಸಾಧಿಸದೆ ಕ್ಷುಲ್ಲಕ ಮಾನವನು ಪ್ರತಿವರ್ಷ ತನ್ನ ಹುಟ್ಟು ಹಬ್ಬವನ್ನು ದುಂದುವೆಚ್ಚ ಮಾಡಿ ಆಚರಿಸುವುದಿಲ್ಲವೆ? ಅಮೆರಿಕ ತನ್ನ ಪ್ರಗತಿಯನ್ನು ಪ್ರಪಂಚಕ್ಕೆ ಸಾರುವುದಕ್ಕೋಸ್ಕರ ಚಿಕಾಗೋ ನಗರದಲ್ಲಿ ಜಾಗತಿಕ ಮೇಳವೊಂದನ್ನು ಭಾರೀ ಪ್ರಮಾಣದಲ್ಲಿ ನಡೆಸಲು ನಿಶ್ಚಯಿಸಿತು. ಮಾನವನ ಲೌಕಿಕ ಅಭಿವೃದ್ಧಿಯ ಸಾಧನೆಗಳೆಲ್ಲವನ್ನೂ ಪ್ರದರ್ಶಿಸುವುದೇ ಇದರ ಉದ್ದೇಶವಾಗಿತ್ತು. ಆದರೆ ಜಗತ್ತಿನ ಚಿಂತನೆಯನ್ನು ಇದರಲ್ಲಿ ಪ್ರತಿನಿಧಿಸದೆ ಪ್ರದರ್ಶನವು ಪೂರ್ಣವಾಗುವಂತಿರಲಿಲ್ಲ. ''ಮಾನವ ಕೋಟಿಗೆ ಸಂಬಂಧಿಸಿದಂತಹ ಅತಿಮುಖ್ಯ ವಿಷಯಗಳೆಲ್ಲದರ ಮೇಲೂ ಸಮ್ಮೇಳನಗಳು ನಡೆಯಬೇಕು. ಹಾಗೂ ಅದು ವ್ಯಾಪಕವಾಗಿದ್ದು, ಜಗತ್ತಿನ ಎಲ್ಲೆಡೆಗಳಿಂದಲೂ ಪ್ರತಿನಿಧಿಗಳು ಬರುವಂತಾಗಬೇಕು.''

— ಎಂದು ಚಾರ್ಲ್ಸ್ ಬಾನಿ ಎಂಬ ಸುಪ್ರಸಿದ್ಧ ವಕೀಲ-ಲೇಖಕ ೧೮೮೯ರಲ್ಲೇ ಸಲಹೆ ಮಾಡಿದ್ದ. ಈ ಸಲಹೆಗೆ ಭಾರೀ ಪ್ರಚಾರ ಸಿಕ್ಕಿ, ಬಹುತೇಕ ಜನರ ಪ್ರೋತ್ಸಾಹ ದೊರಕಿತು. ಕೊನೆಗೆ 'ಕೊಲಂಬಿಯನ್ ಮೇಳ'ಕ್ಕೆ ಪೂರಕವಾಗಿ ಜಾಗತಿಕ ಸಮ್ಮೇಳನಗಳಿಗೆ ಬಾನಿಯನ್ನೇ ಅಧ್ಯಕ್ಷನನ್ನಾಗಿ ನೇಮಿಸಲಾಯಿತು. ಮುಂದಿನ ಎರಡೂವರೆ ವರ್ಷಗಳಲ್ಲಿ ಅತ್ಯಂತ ವಿವರಪೂರ್ಣವೂ ಜಟಿಲವೂ ಆದ ಯೋಜನೆಗಳನ್ನು ಸಿದ್ಧಪಡಿಸಲಾಯಿತು. ಚಿಕಾಗೋದಲ್ಲಿ ನೆಲೆಸಿದ್ದ ಮತ್ತು ಅಮೆರಿಕಾದ ಅತ್ಯುತ್ತಮ ವಾಸ್ತುಶಿಲ್ಪಗಳಲ್ಲಿ ಒಬ್ಬನಾಗಿದ್ದ ಡೇನಿಯಲ್ ಬರ್ನ್‌ಹ್ಯಾಮ್‌ಗೆ ಮೇಳದ ನಿವೇಶನದ ಸಮಗ್ರ ನೋಟದ ಬಾಧ್ಯತೆಯನ್ನು ವಹಿಸಲಾಯಿತು.

ಮಿಚಿಗನ್ ಸರೋವರದ ತೀರದಲ್ಲಿ ೧೦೩೭ ಎಕರೆಗಳಷ್ಟು ವಿಸ್ತಾರವಾದ ಭೂಮಿಯಲ್ಲಿ ಮೇಳವನ್ನು ಆಯೋಜಿಸಲಾಯಿತು. ಒಟ್ಟು ನಿರ್ಮಿತ ಪ್ರದೇಶವೇ ೫೦ಲಕ್ಷ ಚದರಡಿಗಳು. ಮುಖ್ಯವಾದ ಕಟ್ಟಡಗಳಿಗೆ ೨೦ಸಾವಿರ ಮಣ ಕಬ್ಬಿಣ ಮತ್ತು ಉಕ್ಕನ್ನೂ, ಸಾವಿರಾರು ಮಣ ಗಾಜನ್ನೂ, ಮತ್ತು ಏಳು ಕೋಟಿ ಘನ ಅಡಿಗಳಷ್ಟು ಮರವನ್ನೂ ಬಳಸಲಾಗಿತ್ತು. ಸಂದರ್ಶಕರ ಅನುಕೂಲಕ್ಕಾಗಿ ೩,೦೦೦ ಶೌಚಾಲಯಗಳನ್ನು ನಿರ್ಮಿಸಲಾಗಿತ್ತು. ಒಟ್ಟು ೧೭೯ ದಿನಗಳ ಕಾಲ ಈ ಮೇಳವು ನಡೆಯಿತು. ಈ ಚಿಕಾಗೋ ಮೇಳಕ್ಕೆ ಒಟ್ಟು ಪ್ರಪಂಚದ ನಾನಾ ಭಾಗಗಳಿಂದ

ಎರಡು ಕೋಟಿ ಎಪ್ಪತ್ತೈದು ಲಕ್ಷ ಹತ್ತೊಂಬತ್ತು ಸಾವಿರದ ನಾಲ್ಕು ನೂರು ಜನ ಭೇಟಿ ನೀಡಿದರು.

ಆಗಿನ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷರಾಗಿದ್ದ ಬೆಂಜಮಿನ್ ಹ್ಯಾರಿಸನ್ ಹೀಗೆ ಘೋಷಿಸಿದ್ದರು. ''ವಿಶ್ವದಲ್ಲಿರುವ ಎಲ್ಲ ರಾಷ್ಟ್ರಗಳಿಗೂ ಆಹ್ವಾನ ನೀಡುತ್ತಿದ್ದೇನೆ: ಬನ್ನಿ, ಮಾನವ ಇತಿಹಾಸದಲ್ಲೇ ಸರ್ವೋತ್ಕೃಷ್ಟವಾದ ಸಂದರ್ಭದ ನೆನಪಿಗಾಗಿ ಮಾನವಕುಲದ ಶಾಶ್ವತ ಹಿತಾಸಕ್ತಿಗಳನ್ನು ಎತ್ತಿ ಹಿಡಿಯುವ ಈ ಮೇಳದಲ್ಲಿ ಭಾಗವಹಿಸಲು ನಿಮ್ಮ ಪ್ರತಿನಿಧಿಗಳನ್ನು ನಿಯೋಜಿಸಿ ಮತ್ತು ನಿಮ್ಮ ಸಂಪನ್ಮೂಲಗಳು, ಉದ್ಯಮಗಳು ಮತ್ತು ನಾಗರಿಕತೆಯ ಪ್ರಗತಿಯನ್ನು ಅತ್ಯಂತ ಸೂಕ್ತವಾಗಿ ಮತ್ತು ಸಮಗ್ರವಾಗಿ ಪ್ರತಿಬಿಂಬಿಸುವಂತಹ ವಸ್ತುಗಳನ್ನು ವಿಶ್ವ ಕೊಲಂಬಿಯನ್ ಮೇಳಕ್ಕೆ ಕಳುಹಿಸಿಕೊಡಿ.'' ಖ್ಯಾತ ವಿಜ್ಞಾನಿಗಳಾದ ಎಲಿಶಾ ಗ್ರೇ ಮತ್ತು ನಿಕೋಲಾ ಟೆಸ್ಲಾ ಕೂಡ ಮೇಳದಲ್ಲಿ ತಮ್ಮ ಆವಿಷ್ಕಾರಗಳನ್ನು ಪ್ರದರ್ಶಿಸಿದರು. ಸ್ವಾಮಿ ವಿವೇಕಾನಂದರು ಮೇಳಕ್ಕೆ ಭೇಟಿ ಕೊಟ್ಟಾಗ ಇದೆಲ್ಲವನ್ನೂ ನೋಡಿರಬಹುದು. ಮುಂದೆ ಸ್ವಾಮೀಜಿ ಮತ್ತು ನಿಕೋಲಾ ಟೆಸ್ಲಾ ಸ್ನೇಹಿತರಾದರು.

ಈ ಮೇಳವು ಮಾನವನ ಭೌತಿಕ ಸಾಧನೆಗಳ ಪ್ರದರ್ಶನಕ್ಕೆ ಮಾತ್ರ ಸೀಮಿತವಾಗಿರದೆ, ಮಾನವನ ಜೀವನದ ವಿವಿಧ ಆಯಾಮಗಳಲ್ಲಿ ಸಾಧ್ಯವಾದಷ್ಟು ಸೇರ್ಪಡೆಯಾಗಿದ್ದವು. ಸಂಗೀತ, ಸಾಹಿತ್ಯ, ಶಿಕ್ಷಣ, ವಾಸ್ತುಶಿಲ್ಪ, ಕಲೆ, ತತ್ತ್ವಶಾಸ್ತ್ರ, ವಿಜ್ಞಾನ, ಜಲ, ಆರೋಗ್ಯ, ಆಡಳಿತ, ಮಹಿಳೆಯರ ಪ್ರಗತಿ ಇತ್ಯಾದಿ ೨೦ ವಿಭಾಗಗಳಿದ್ದವು.

ಇವೆಲ್ಲದರ ಮಧ್ಯೆ, ಶ್ರೀ ಬಾನಿ, 'ವಿಶ್ವಧರ್ಮಗಳ ಸಮ್ಮೇಳನ ಒಂದನ್ನು ನಡೆಸೋಣ, ಪ್ರಮುಖ ಧರ್ಮಗಳ ಪ್ರತಿನಿಧಿಗಳನ್ನು ಆಹ್ವಾನಿಸೋಣ' ಎಂದು ಸೂಚಿಸಿದರು. ಈ ಸೂಚನೆ ಬಹಳಷ್ಟು ಸದಸ್ಯರಿಗೆ ಒಪ್ಪಿಗೆಯಾಯಿತು. ಆದರೆ ಕ್ರೈಸ್ತಮತದಲ್ಲಿ ಇದಕ್ಕೆ ಭಿನ್ನಾಭಿಪ್ರಾಯವಿದ್ದಿತು. ಕ್ರೈಸ್ತ ಸಂಸ್ಥೆಗಳಿಂದಲೂ, ಕ್ರೈಸ್ತಧರ್ಮ ಪ್ರಚಾರಕರಿಂದಲೂ ಪ್ರತಿಭಟನೆಯ ಗೋಣಗಾಟ ಕೇಳಿಬಂದಿತು. ಬರಬರುತ್ತಾ ಅದು ತೀವ್ರ ವಿರೋಧಕ್ಕೆ ತಿರುಗಿತು. ಕ್ಯಾಂಟರ್‌ಬರಿಯ ಆರ್ಚ್ ಬಿಷಪ್ ಸಮ್ಮೇಳನದ ಅಧಿಕಾರಿಗಳಿಗೆ ಬರೆದ ಪತ್ರದಲ್ಲಿ ಅದಕ್ಕೆ ಕಾರಣವನ್ನು ಹೀಗೆ ತಿಳಿಸಿದರು: ''ನಾನು ಬರದಿರುವುದಕ್ಕೆ ಕಾರಣವೆಂದರೆ — ಧರ್ಮವೆಂದರೆ ಕ್ರೈಸ್ತಧರ್ಮವೊಂದೇ. ಇಂತಹ ಒಂದು ಸಮ್ಮೇಳನವನ್ನು ನಡೆಸಿದರೆ, ಸರ್ವೋತ್ಕೃಷ್ಟವಾದ ನಮ್ಮ ಕ್ರೈಸ್ತಧರ್ಮವನ್ನು ಇತರ ಅನಾಗರಿಕ ಧರ್ಮಗಳ ಪಂಕ್ತಿಯಲ್ಲೇ ಕುಳ್ಳಿರಿಸಬೇಕಾಗುತ್ತದಲ್ಲ. ಇಂತಹ ಅನ್ಯಾಯ ಎಲ್ಲಾದರೂ ಉಂಟೆ?'' ಇನ್ನೊಬ್ಬ ಪಾದ್ರಿ, ಈ ಧರ್ಮ ಸಮ್ಮೇಳನದಲ್ಲಿ ಕ್ರೈಸ್ತ ಧರ್ಮವೇ ಪ್ರಪಂಚದ ಎಲ್ಲ ಧರ್ಮಗಳಿಗಿಂತ ಶ್ರೇಷ್ಠ ಎಂದು ಜಗತ್ತಿಗೆ ತೋರಲು ಸದವಕಾಶ ಎಂದು ವಾದಿಸಿದ. ಮತ್ತೊಬ್ಬ ಪಾದ್ರಿ ಬರೆದ, ''ನನ್ನ ನಿಶ್ಚಿತ ಅಭಿಪ್ರಾಯದಂತೆ ಕ್ರೈಸ್ತಧರ್ಮವು ಸರ್ವಶ್ರೇಷ್ಠ ಎಂಬುದನ್ನು ಮನದಟ್ಟು ಮಾಡುವುದಕ್ಕೆ ಅದನ್ನು ವೈಭವಯುತವಾಗಿ, ಸ್ಫೂರ್ತಿಯುತವಾಗಿ ಮಂಡಿಸಲು ಯಾವ ಕ್ರೈಸ್ತನೂ ಹಿಂಜರಿಯಬೇಕಾಗಿಲ್ಲ. ಸಮ್ಮೇಳನದಲ್ಲಿ ಪ್ರಚಂಡ ಜನಸಮೂಹ ನೆರೆಯುವಂತಾದಾಗ, ಆ ಸುವರ್ಣಾವಕಾಶವನ್ನು ಉಪಯೋಗಿಸಿಕೊಂಡು ಭಗವಂತ ಹೇಗೆ ತನ್ನ ಸತ್ವವನ್ನು ಮೊಳಗುತ್ತಾನೆ. ಮತ್ತು ಹೇಗೆ ಕ್ರೈಸ್ತನ ಹೆಸರಿನಲ್ಲಿ ಪ್ರತಿಯೊಬ್ಬನೂ ಮಂಡಿಯೂರಿ ತಲೆಬಾಗುವಂತೆ ಮಾಡುತ್ತಾನೆ ಎಂಬುದನ್ನು ಅವನಲ್ಲದೆ ಬೇರಾರು ಬಲ್ಲರು?''

ಸ್ವಾಮಿ ವಿವೇಕಾನಂದರೇ ಈ ಸಮ್ಮೇಳನದ ಉದ್ದೇಶವೇನಿತ್ತು ಎಂಬುದನ್ನು ತಮ್ಮ ಒಂದು ಪತ್ರದಲ್ಲಿ ಬರೆಯುತ್ತಾರೆ. ''ವಿಶ್ವಧರ್ಮ ಸಮ್ಮೇಳನವನ್ನು ಏರ್ಪಡಿಸಿದ್ದು ಕ್ರೈಸ್ತಧರ್ಮವು ಉಳಿದ ಎಲ್ಲಾ ಧರ್ಮಗಳಿಗಿಂತಲೂ ಶ್ರೇಷ್ಠ ಎಂಬುದನ್ನು ಜಗತ್ತಿಗೆ ತೋರಿಸುವುದಕ್ಕಾಗಿ, ಆದರೂ ತಾತ್ತ್ವಿಕ ನೆಲಗಟ್ಟನ್ನುಳ್ಳ ಹಿಂದೂಧರ್ಮವು ತನ್ನ ಸ್ಥಾನಮಾನಗಳನ್ನು ಕಾಪಾಡಿಕೊಂಡಿತು.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೪, ಪು. ೧೪೦)*

ಇಂತಹ ದುರಾಲೋಚನೆಯಿದ್ದರೂ ಅಮೇರಿಕಾಕ್ಕೆ ಜಗತ್ತು ಕೃತಜ್ಞತೆಯನ್ನು ಸಲ್ಲಿಸಬೇಕು. ಕಾರಣ ಪ್ರಪಂಚದಲ್ಲೇ ಮೊಟ್ಟಮೊದಲ ಬಾರಿಗೆ ಒಂದೇ ವೇದಿಕೆಯ ಮೇಲೆ ಪ್ರಪಂಚದ ಎಲ್ಲ ಧರ್ಮದವರನ್ನೂ ಒಂದೆಡೆ ಸೇರಿಸಿತ್ತು, ಮೊದಲನೆಯ ಬಾರಿಗೆ ಸರ್ವಧರ್ಮ ಸಮ್ಮೇಳನದ ಕಲ್ಪನೆಯನ್ನು ಜಗತ್ತಿಗೆ ನೀಡಿತ್ತು.

೧೮೯೩ರ ಸೆಪ್ಟೆಂಬರ್ ೧೧ರಂದು ಬೆಳಿಗ್ಗೆ ೧೦ಕ್ಕೆ ಸರಿಯಾಗಿ ವಿಶ್ವದ ಹತ್ತು ಪ್ರಮುಖ ಧರ್ಮಗಳಿಗೆ ಗೌರವ ಸೂಚಿಸುತ್ತಾ ಗಂಟೆಯನ್ನು ಹತ್ತು ಸಲ ಬಾರಿಸಲಾಯಿತು. ಸ್ವಾಮೀಜಿ ತಮ್ಮ ಪ್ರವಚನದಲ್ಲಿ ಹೇಳಿದರು, ''ಈ ಸಮ್ಮೇಳನದ ಪ್ರತಿನಿಧಿಗಳ ಗೌರವಾರ್ಥವಾಗಿ ಇಂದು ಬೆಳಿಗ್ಗೆ ಮೊಳಗಿದ ಘಂಟಾನಾದವು ಎಲ್ಲ ಮತಾಂಧತೆಗೆ ಮೃತ್ಯುಘಾತವನ್ನೀಯುವುದೆಂದು ಆಶಿಸುತ್ತೇನೆ. *(ಕರತಾಡನ)* ಮತ್ತು ಅದು ಖಡ್ಗ-ಲೇಖನಿಗಳ ಮೂಲಕ ಸಂಭವಿಸುವ ಹಿಂಸಾದ್ವೇಷಗಳಿಗೆ, ಹಾಗೂ ಒಂದೇ ಗುರಿಯೆಡೆಗೆ ಸಾಗುತ್ತಿರುವ ಪಥಿಕರೊಳಗಿನ ಅಸಹನೆ-ಮನಸ್ತಾಪಗಳಿಗೆ ಮೃತ್ಯುಘಾತವನ್ನೀಯುವುದೆಂದು ಹೃತ್ಪೂರ್ವಕವಾಗಿ ಆಶಿಸುತ್ತೇನೆ.'' ಜುದಾಯಿ, ಇಸ್ಲಾಂ, ಬೌದ್ಧ, ಹಿಂದು, ತಾವೋ, ಕನ್‌ಫ್ಯೂಷಿಯಸ್, ಶಿಂಟೋ, ಝುರತುಷ್ಟ್ರ, ಕ್ಯಾಥೋಲಿಕ್ ಕ್ರೈಸ್ತಧರ್ಮ ಮತ್ತು ಪ್ಯೂರಿಟನ್ ಇವೇ ಆ ಹತ್ತುಧರ್ಮಗಳು. ಭಾರತದಲ್ಲಿಯೂ ವಿಶ್ವ ಧರ್ಮ ಸಮ್ಮೇಳನದ ಒಂದು ವಿಶೇಷ ಸಮಿತಿಯನ್ನು ರಚಿಸಲಾಗಿತ್ತು. ಮದ್ರಾಸಿನ ಶಿಕ್ಷಣ ತಜ್ಞ ರೆವೆರೆಂಡ್ ಹೆನ್ರಿ ಮುಲ್ಲರ್, 'ಹಿಂದೂ' ವಾರ್ತಾಪತ್ರಿಕೆಯ ಸಂಪಾದಕ ಶ್ರೀ ಸುಬ್ರಹ್ಮಣ್ಯ ಅಯ್ಯರ್, ಬ್ರಹ್ಮಸಮಾಜದ ಪ್ರತಾಪಚಂದ್ರ ಮಜುಂದಾರ್ ಮತ್ತಿತರರು ಸಮಿತಿಯಲ್ಲಿದ್ದರು. ವಿಪರ್ಯಾಸವೆಂದರೆ ಹಿಂದೂಗಳಿಗೇ ಹಿಂದೂಧರ್ಮದ ಮೇಲೆ ನಂಬಿಕೆ ಹೋಗಿತ್ತು. ಕೆಲವು ಸಂಪ್ರದಾಯವಂತರು ಸಮುದ್ರವನ್ನು ದಾಟುವುದು ಮಹಾಪಾಪ ಎಂದಿದ್ದರು. ಸ್ವಾಮೀಜಿ ಅಮೇರಿಕಾದಿಂದ ಹಿಂದಿರುಗಿದ ಮೇಲೆ ತಮ್ಮ ಒಂದು ಪ್ರವಚನದಲ್ಲಿ ಹೇಳುತ್ತಾರೆ: ''ಧರ್ಮವನ್ನು

ಯಾವ ಸ್ಥಿತಿಗೆ ತಂದಿಟ್ಟಿದ್ದೀರಿ. ಇವತ್ತು ನೀವು ಘಂಟೆ ಬಾರಿಸುತ್ತೀರಿ. ನಾಳೆ ಬಂದು ಶಂಖ ಊದುತ್ತೀರಿ, ಮತ್ತು ನಾಳಿದ್ದು ಚಾಮರ ಸೇರಿಸುತ್ತೀರಿ, ಇತ್ಯಾದಿ ಇತ್ಯಾದಿ. ಇದೇ ಧರ್ಮ ಎನ್ನುತ್ತೀರಿ.'' ಧರ್ಮ ಇಷ್ಟು ಕೀಳು ಮಟ್ಟಕ್ಕಿಳಿದಿತ್ತು. ಹಿಂದೂ ಪತ್ರಿಕೆಯಲ್ಲಿ ಬರೆದಿತ್ತು, ''ಹಿಂದೂಧರ್ಮವು ಆಧುನಿಕ ಸಮಾಜದ ಜ್ವಲಂತ ಸಮಸ್ಯೆಗಳ ಬಗ್ಗೆ ಬೆಳಕನ್ನು ಚೆಲ್ಲಲು ಅಸಮರ್ಥವಾಗಿದೆ.'' ಇನ್ನೂ ಅನೇಕ ಲೇಖಕರ ಅಭಿಪ್ರಾಯ ಹೀಗಿತ್ತು, ''ಹಿಂದೂ ಧರ್ಮದ ಜೀವಶಕ್ತಿ ಬತ್ತಿದೆ. ಹಿಂದೂ ಸಮಾಜದಲ್ಲಿರುವ ವಿರೂಪಗಳಿಗೆಲ್ಲಾ ಹಿಂದೂ ಧರ್ಮವೇ ಕಾರಣ.'' ಇದಾವುದರ ಅರಿವೂ ಇಲ್ಲದೆ ಸ್ವಾಮಿ ವಿವೇಕಾನಂದರನ್ನು ಯಾವುದೋ ಅವ್ಯಕ್ತ ಶಕ್ತಿ ಈ ಸಮ್ಮೇಳನಕ್ಕೆ ಎಳೆದು ತಂದಿತ್ತು.

ಸ್ವಾಮಿ ವಿವೇಕಾನಂದರು ಕನ್ಯಾಕುಮಾರಿಯಲ್ಲಿ ಮೂರು ರಾತ್ರಿ ಮೂರು ಹಗಲು ಧ್ಯಾನಸ್ಥರಾಗಿದ್ದರು. ಧ್ಯಾನದಲ್ಲಿ ಅವರಿಗೆ ಭಾರತದ ಭೂತ, ವರ್ತಮಾನ ಮತ್ತು ಭವಿಷತ್ತುಗಳ ಸ್ಪಷ್ಟ ದರ್ಶನವಾಯಿತು. ಭಾರತದ ಗತವೈಭವ, ಮುಸಲ್ಮಾನರ ಮತ್ತು ಮೊಗಲರ ಕ್ರೂರ ಅತ್ಯಾಚಾರಗಳ ಜೊತೆಗೆ ಬ್ರಿಟಿಷರು ನಡೆಸುತ್ತಿದ್ದ ಅವ್ಯಾಹತ ಲೂಟಿ ಮತ್ತು ಹೇರುತ್ತಿದ್ದ ಕಷ್ಟಕಾರ್ಪಣ್ಯಗಳ ದೃಶ್ಯಗಳು ಅವರ ಸೂಕ್ಷ್ಮ ದೃಷ್ಟಿಪಟಲದ ಮೇಲೆ ಮೂಡಿದವು. ಭಾರತದ ಬಡತನವನ್ನು ನೀಗಲು ಪಾಶ್ಚಾತ್ಯ ದೇಶಕ್ಕೆ ಹೋಗಿ, ಧರ್ಮಪ್ರಚಾರ ಮಾಡಿ ಹಣ ಸಂಪಾದಿಸಿ ಬರಬೇಕು ಎಂಬ ಯೋಚನೆ ಅವರಲ್ಲಿ ಮೂಡಿತು. ಆದರೆ ಮದ್ರಾಸಿನಲ್ಲಿ ಅವರು ಅಮೆರಿಕೆಗೆ ಹೋಗಲು ಸಿದ್ಧತೆಯಾಗುತ್ತಿದ್ದಾಗ, ಇದು ಭಗವಂತನ ಸಂಕಲ್ಪವೇ ಅಥವಾ ನನ್ನ ಅಹಂಕಾರವೇ ಎಂಬ ಸಂಶಯ ಮೂಡಿತು. ಆಗ ಒಂದು ದಿನ ಅವರಿಗೆ ದಿವ್ಯದರ್ಶನ ವಾಯಿತು. ಶ್ರೀರಾಮಕೃಷ್ಣರು ಸಮುದ್ರದ ಮೇಲೆ ನಡೆದು ಹೋಗುತ್ತ ಸ್ವಾಮೀಜಿಯವರನ್ನು ಹಿಂಬಾಲಿಸುವಂತೆ ಕರೆಯುತ್ತಿದ್ದಾರೆ. ಅದೇ ಸಮಯದಲ್ಲಿ ಶ್ರೀಮಾತೆ ಶಾರದಾದೇವಿಯವರು ಸ್ವಾಮೀಜಿಯ ನಿರ್ಧಾರವನ್ನು ಬೆಂಬಲಿಸಿ ಆಶೀರ್ವಾದ ಪತ್ರ ಬರೆದಿದ್ದರು. ಹೊರಡುವ ಮುನ್ನ ರಾಜಾ ಅಜಿತ್ ಸಿಂಗ್ ಸ್ವಾಮೀಜಿಗೆ, 'ವಿವೇಕಾನಂದ' ಎಂದು ಹೊಸ ನಾಮಕರಣ ಮಾಡಿದರು. ಇದಕ್ಕೆ ಬಹಳ ದಿನಗಳ ನಂತರ ಅವರ ಗುರುಭಾಯಿಯೊಡನೆ ಪರಿವ್ರಾಜಕರಾಗಿ ಸುತ್ತಾಡುತ್ತಿದ್ದಾಗ ಈ ಸರ್ವಧರ್ಮ ಸಮ್ಮೇಳನದ ಬಗ್ಗೆ ಮಾತು ಬಂದಾಗ ಸ್ವಾಮೀಜಿ ಭವಿಷ್ಯ ನುಡಿದಿದ್ದರಂತೆ. ''ಹರಿಭಾಯಿ, (ಸ್ವಾಮಿ ತುರೀಯಾನಂದರು) ವಿಶ್ವಧರ್ಮ ಸಮ್ಮೇಳನಕ್ಕೆ ಏನೆಲ್ಲಾ ಏರ್ಪಾಡುಗಳಾಗುತ್ತಿದೆಯೋ ಅವೆಲ್ಲಾ 'ಇದಕ್ಕಾಗಿ' '' ಎಂದು ತಮ್ಮ ಎದೆಯನ್ನು ಮುಟ್ಟಿದ್ದರಂತೆ.

ನಂತರ ಸ್ವಾಮೀಜಿ ಹೇಗೆ ಹೋದರು? ಸಮ್ಮೇಳನಕ್ಕೆ ಮುಂಚೆ ಏನೆಲ್ಲಾ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದರು ಎಂಬುದೆಲ್ಲಾ ಚರಿತ್ರೆ. ಈ ಬಗ್ಗೆ ಈಗಾಗಲೇ ಅನೇಕ ಬರಹಗಳು ಪ್ರಕಟಗೊಂಡಿವೆ.

ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರನ್ನು ಮಾತನಾಡಲು ಕರೆದಾಗ ಸ್ವಲ್ಪ ಹಿಂಜರಿದರು. ನಾನು ಆಮೇಲೆ ಮಾತನಾಡುತ್ತೇನೆ ಎಂದರು. ಹೀಗೆ ಎರಡು ಮೂರು ಬಾರಿ ಆದ ಮೇಲೆ ಸಭೆಯ ಅಧ್ಯಕ್ಷರಿಗೆ ಇವರು ಮಾತನಾಡುವರೋ ಇಲ್ಲವೋ ಎಂಬ ಸಂದೇಹ ಬಂದಿತು. ಪ್ರತಿದಿನ ಮೂರು ಸೆಶನ್ ಇರುತ್ತಿತ್ತು. ಬೆಳಗಿನ ಸೆಶನ್ ಮುಗಿದೇ ಹೋಯಿತು. ಮಧ್ಯಾಹ್ನದ ಸೆಶನ್‌ನಲ್ಲೂ ಒಂದೆರಡು ಬಾರಿ ಮುಂದೂಡಿದರು. ಕೊನೆಗೆ ಮಾತನಾಡಲೇಬೇಕಾಯಿತು. ಸ್ವಾಮೀಜಿಯ ಪಕ್ಕದಲ್ಲಿ ಕುಳಿತಿದ್ದ ಬಾನೆಟ್ ಮಾರಿ ಎಂಬ ಫ್ರೆಂಚ್ ಪಾದ್ರಿಗಳು ಸ್ವಾಮೀಜಿಯನ್ನು ಪ್ರೋತ್ಸಾಹಿಸಿ ಧೈರ್ಯ ತುಂಬಿದರು. ಸ್ವಾಮೀಜಿ ಎದ್ದುನಿಂತರು. ಅದೇ ಗಾಂಭೀರ್ಯ, ಅದೇ ಪ್ರತಿಭೆ, ಅದೇ ಶಕ್ತಿ ಎಲ್ಲವೂ ಇದ್ದವು. ದಕ್ಷಿಣೇಶ್ವರದ ದೇವಮಾನವ ಶ್ರೀರಾಮಕೃಷ್ಣರ ದಿವ್ಯಶಕ್ತಿ ಅವರಲ್ಲಿ ಸಂಚರಿಸತೊಡಗಿತು, ಎದ್ದುನಿಂತ ಆ ಭವ್ಯ ವ್ಯಕ್ತಿತ್ವವನ್ನು ನೋಡಿದ ನಾಲ್ಕು ಸಹಸ್ರಕ್ಕೂ ಮಿಗಿಲಾದ ಪ್ರೇಕ್ಷಕರು ಉಸಿರಾಡುವುದನ್ನೂ ಮರೆತು ಅವರನ್ನೇ ದಿಟ್ಟಿಸಿದರು. ಅವರ ಮುಖಮಂಡಲ ಅಗ್ನಿಜ್ವಾಲೆಯಂತೆ ಬೆಳಗುತ್ತಿತ್ತು. ವರ್ಷಾಂತರಗಳಿಂದ ಅವರಲ್ಲಿ ಒತ್ತಿ ಹಿಡಿಯಲ್ಪಟ್ಟಿದ್ದ ಪ್ರಚಂಡ ಶಕ್ತಿಯ ಜ್ವಾಲಾಮುಖಿ ಸ್ಫೋಟಿಸಿತು. ಈಗ ಸ್ವಾಮೀಜಿ ವಾಗ್ದೇವಿಯನ್ನು ಸ್ಮರಿಸಿ, ತಮ್ಮ ಮೇಘನಾದ ಸದೃಶವಾಣಿಯಲ್ಲಿ ''ಅಮೆರಿಕದ ಸಹೋದರ ಸಹೋದರಿಯರೇ'' ಎಂದು ಸಭಿಕರನ್ನು ಸಂಬೋಧಿಸಿದರು. ಅಷ್ಟೇ! ಆಗಲೇ ಸಮಸ್ತ ಸಭಿಕರಲ್ಲಿ ಒಂದು ನವಸ್ಫೂರ್ತಿ ಸಂಚಾರವಾಯಿತು. ಈ ಸಂದರ್ಭದಲ್ಲಿ ೧೨೫ನೆಯ ಉತ್ಸವದ ಆ ಮೂರು ಶಬ್ದಗಳನ್ನು ಇಂದು ಇಡೀ ಜಗತ್ತು ಕೊಂಡಾಡುತ್ತಿದೆ. ಬಹುಶಃ ಇನ್ನೂ ನೂರಾರು ವರ್ಷ ಅದು ಕೊಂಡಾಡಲ್ಪಡುತ್ತದೆ. ಅವರು ಈ ಮೂರು ಪದಗಳನ್ನು ಸಂಬೋಧಿಸಿದುದೇ ತಡ, ಅವು ಸಮಸ್ತ ಸಭಿಕರಲ್ಲಿ ಒಂದು ನವಸ್ಫೂರ್ತಿ ಸಂಚಾರವಾಗುವಂತೆ ಮಾಡಿದವು. ಎಲ್ಲರೂ ಎದ್ದುನಿಂತು ಎರಡು ನಿಮಿಷಗಳ ಕಾಲ ಕರತಾಡನ ಮಾಡಿದರು. ಯಾಕೆ ಹಾಗೆ ಮಾಡಿದರು ಎಂಬುದು ಯಾರಿಗೂ ಗೊತ್ತಿಲ್ಲ. ತಮಗರಿಯದೆಯೇ ಭಾವೋದ್ರೇಕದಿಂದ ತಮ್ಮ ಸಂತೋಷ ಸೂಚಿಸುತ್ತಿದ್ದರು. ಕೆಲವರಂತೂ ಮುಂದೆ ಮುಂದೆ ಬರಲು ಯತ್ನಿಸುತ್ತಿದ್ದರು. ಅದು ಶಾಂತವಾಗಲು ಕೆಲವು ನಿಮಿಷಗಳೇ ಹಿಡಿದವು. ಮುಂದೆ ಶ್ರೀಮತಿ ಎ.ಎಸ್.ಕೆ. ಬ್ಲಾಜೆಟ್ ನೆನಪಿಸಿಕೊಳ್ಳುತ್ತಾರೆ: ''ಆ ಯುವಕ ಎದ್ದು ನಿಂತು 'ಅಮೆರಿಕದ ಸೋದರ ಸೋದರಿಯರೇ' ಎಂದು ನುಡಿದಾಗ ಏಳು ಸಾವಿರ (?) ಜನರು ತಮಗೇ ಅರಿವಿಲ್ಲದಂತೆ ಎದ್ದು ನಿಂತು ಅಭಿನಂದಿಸಿದರು.''

''ಹಲವಾರು ನಿಮಿಷಗಳವರೆಗೆ ಕರತಾಡನದ ಧ್ವನಿ ಅನುರಣಿಸುತ್ತಿತ್ತು'' ಎಂದು ಬರೋಸ್ ಮತ್ತು ಹಾಟನ್ ಕೂಡ ದೃಢಪಡಿಸಿದ್ದಾರೆ. ಆಳಸಿಂಗ ಪೆರುಮಾಳರಿಗೆ ಬರೆದ ಪತ್ರದಲ್ಲಿ ವಿವೇಕಾನಂದರು, ''ಇಡೀ ಸಭಾಂಗಣ ಕೆಲವಾರು ನಿಮಿಷಗಳವರೆಗೆ



ಕರತಾಡನಗಳ ತರಂಗದಿಂದ ಪ್ರತಿಧ್ವನಿಸುತ್ತಿತ್ತು'' ಎಂದು ಬರೆದಿದ್ದಾರೆ.

ಇಂತಹ ಕರತಾಡನ ಸ್ವಾಮೀಜಿಗೆ ಮಾತ್ರ ದೊರೆತಿತ್ತೇ ಎಂದರೆ ಅವರಿಗೆ ಮುನ್ನ ಜಾಂಟಿ ದ್ವೀಪದ ಪ್ರಧಾನ ಬಿಷಪರ ಭಾಷಣಕ್ಕೂ ಅದು ದೊರೆತಿತ್ತು, ಬಹುಶಃ ಎರಡನೇ ಅಧಿವೇಶನದ ಪ್ರಥಮ ಭಾಷಣಕಾರರು ಎಂಬ ಕಾರಣಕ್ಕಿರಬಹುದು. ಬ್ರಹ್ಮಸಮಾಜದ ಪ್ರತಾಪ ಮಜುಂದಾರರಿಗೂ, ಬಹುಶಃ ಅವರು ಅಮೆರಿಕಾಕ್ಕೆ ಹಲವಾರು ಬಾರಿ ಭೇಟಿಯಿತ್ತು ಪರಿಚಯ ವ್ಯಕ್ತಿಯಾಗಿದ್ದರೆಂಬ ಕಾರಣಕ್ಕಿರಬಹುದು, ಅಥವಾ ಕ್ರೈಸ್ತಧರ್ಮವನ್ನು ಹೊಗಳುವ, 'ದಿ ಓರಿಯಂಟಲ್ ಕ್ರೈಸ್ತ್' ಎಂಬ ಪುಸ್ತಕ ಬರೆದಿದ್ದ ಕಾರಣಕ್ಕಿರಬಹುದು. ಚೀನಾದ ಪಂಗ್ ಕ್ವಾಂಗ್ ಮಾತನಾಡಲು ಎದ್ದು ನಿಂತಾಗಲೂ ಕರತಾಡನವಾಗಿತ್ತು. ಬಹುಶಃ ಅದಕ್ಕೆ ಕಾರಣ ರಾಷ್ಟ್ರೀಯ, ಧಾರ್ಮಿಕ ಮತ್ತು ರಾಜಕೀಯ ವಿಷಯಗಳಲ್ಲಿ ಅಮೆರಿಕಾವು ಚೀನಾ ಜೊತೆ ಒರಟಾಗಿಯೇ ನಡೆದುಕೊಂಡಿತ್ತು. ಅದಕ್ಕೆ ಪ್ರಾಯಶ್ಚಿತ್ತವೋ ಎಂಬಂತೆ ಪಂಗ್‌ಗೆ ಅಂತಹ ಸ್ವಾಗತ ನೀಡಿತ್ತು.

ಆದರೆ ಸ್ವಾಮೀಜಿಯ ವಿಷಯದಲ್ಲಿ ಇಂತಹ ಯಾವುದೇ ಕಾರಣಗಳಿರಲಿಲ್ಲ. ಹೋಗಲಿ, ಆಧ್ಯಾತ್ಮಿಕ ಕಾರಣವಿರಬಹುದೆ? ಅಲ್ಲಿದ್ದ ಸಭಿಕರಲ್ಲಿ ಆಧ್ಯಾತ್ಮಿಕತೆಗಿಂತ ಪ್ರಾಪಂಚಿಕತೆಯೇ ಹೆಚ್ಚಾಗಿತ್ತು. ಹಾಗಾದರೆ ಏನು ಕಾರಣವಾಗಿರಬಹುದು?

ಜಗನ್ಮಾತೆ ಸ್ವಾಮೀಜಿಯ ಮೂಲಕ ಮಾತನಾಡಿರಬಹುದು. ಶ್ರೀರಾಮಕೃಷ್ಣರು ಈ ಒಂದು ಆಧ್ಯಾತ್ಮಿಕ ಸಂದರ್ಭಕ್ಕಾಗಿ ಅತ್ಯಂತ ಕಠಿಣ ತಪಸ್ಸುಗಳನ್ನು ಮಾಡುವುದರ ಜೊತೆಗೆ ಸ್ವಾಮೀಜಿಯವರಿಂದಲೂ ಮಾಡಿಸಿದ್ದರು. ಆ ಕ್ಷಣದಲ್ಲಿ ಸ್ವಾಮೀಜಿ ತಮ್ಮೊಳಗೆ ಸುಪ್ತವಾಗಿದ್ದ ಅನಂತ ಶಕ್ತಿಯನ್ನು ಜಾಗೃತಗೊಳಿಸಿ ಮಾತನಾಡಲು ಎದ್ದುನಿಂತರು. ಇದು ಮುಖ್ಯ ಕಾರಣ. ಆದುದರಿಂದಲೇ ಆ ಘಟನೆ ನಡೆದು ೧೨೫ ವರ್ಷಗಳಾದರೂ ಇನ್ನೂ ಹಚ್ಚ ಹಸುರಾಗಿ ಎಲ್ಲರ ಮನಸ್ಸಿನಲ್ಲಿ ನಿಂತಿದೆ. ಅದ್ಭುತವಾದ, ಅಮೋಘವಾದ ಮೇಳ ಎಲ್ಲರ ಮನಸ್ಸಿನಿಂದ ಮರೆಯಾಗಿದ್ದರೂ, ಇದು ಮಾತ್ರ ಸ್ಥಿರವಾಗಿ ಉಳಿದಿದೆ. ಇನ್ನೂ ನೂರಾರು ವರ್ಷಗಳು ಉಳಿಯುವ ಸಂಭವವಿದೆ.

ಜನ ಹುಚ್ಚೆದ್ದು ಕರತಾಡನ ಮಾಡಿರುವುದಕ್ಕೆ ಕಾರಣ ಅವರಿಗೇ ಗೊತ್ತಿರಲಿಲ್ಲ. ಅವರ ಭಾಷಣ ಮುಗಿದುದೇ ಸಾವಿರಾರು ಜನ ಸ್ವಾಮೀಜಿಯ ಕೈಕುಲುಕಲು, ಇಲ್ಲವೇ ಅವರ ಬಟ್ಟೆಯ ಅಂಚನ್ನು ಮುಟ್ಟಲು, ಇಲ್ಲವೆ ಅವರನ್ನು ತಮ್ಮ ಮನೆಗೆ ಆಹ್ವಾನಿಸಲು ಸ್ಪರ್ಧಿಸಿದರು.

ಅವರೆಲ್ಲಾ ಹಾಗೆ ಸ್ಪಂದಿಸುವುದಕ್ಕೆ ಕಾರಣವನ್ನು ಸ್ವಾಮಿ ವಿವೇಕಾನಂದರೇ ಒಂದು ಪತ್ರದಲ್ಲಿ ಬರೆಯುತ್ತಾರೆ:

''ಈ ದೇಶದ ಚಿಕಾಗೋದಲ್ಲಿ ನಾನು ಮಾಡಿದ ಮೊಟ್ಟ ಮೊದಲನೆಯ ಭಾಷಣದಲ್ಲಿ ಸಭಿಕರನ್ನು ಕುರಿತು, 'ಅಮೆರಿಕದ ಸೋದರ ಸೋದರಿಯರೆ' ಎಂದು ಸಂಬೋಧಿಸಿದೆ; ಅವರೆಲ್ಲರೂ ಮೇಲೆದ್ದು ನಿಂತಿದ್ದುದು ನಿಮಗೆಲ್ಲಿ ಗೊತ್ತು? ಅವರು ಹಾಗೆ ಏಕೆ ಮಾಡಿದರು? ನನ್ನಲ್ಲಿ ಏನಾದರೂ ವಿಚಿತ್ರ ಶಕ್ತಿಯಿತ್ತೆ? ಎಂದು ನೀವು ಆಶ್ಚರ್ಯಪಟ್ಟಿರಬಹುದು. **ನನಗೆ ಒಂದು ಶಕ್ತಿಯಿದ್ದುದ್ದು ನಿಜ. ಅದೆಂದರೆ — ನನ್ನ ಜೀವನದಲ್ಲಿ ನಾನು ಒಂದೇ ಒಂದು ಬಾರಿಯೂ ಲೈಂಗಿಕ ಯೋಚನೆ ಮನಸ್ಸಿನಲ್ಲಿ ಮೂಡುವುದಕ್ಕೆ ಅವಕಾಶ ಕೊಡಲಿಲ್ಲ. ನಾನು ನನ್ನ ಮನಸ್ಸನ್ನು, ಚಿಂತಾಲಹರಿ**

**ಯನ್ನು ನಿಯಂತ್ರಿಸಿದೆ; ಮನುಷ್ಯನು ಸಾಮಾನ್ಯವಾಗಿ ಆ ದಿಶೆಯಲ್ಲಿ ಬಳಸುವ ಶಕ್ತಿ ಸಾಮರ್ಥ್ಯಗಳನ್ನು ನಾನು ಉನ್ನತ ಸ್ತರದಲ್ಲಿ ಇರಿಸಿದೆ; ಅದು ಎಷ್ಟು ಬಲವಾದ ಶಕ್ತಿಯಾಗಿ ಬೆಳೆಯಿತೆಂದರೆ ಯಾವುದೂ ಅದನ್ನು ಪ್ರತಿರೋಧಿಸಲಾರದಂತಾಯಿತು.** *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೯, ಪು. ೪೩೭)*

ಸರ್ವಧರ್ಮ ಸಮ್ಮೇಳನ ಅಮೇರಿಕಾ ಜನತೆಯ ಮೇಲೆ ಏನು ಪರಿಣಾಮ ಉಂಟು ಮಾಡಿತೆಂಬುದನ್ನು ವಿವೇಕಾನಂದರೇ ಹೀಗೆ ಬರೆಯುತ್ತಾರೆ: ''ವಿಶ್ವಧರ್ಮ ಸಮ್ಮೇಳನವು ನನಗೆ ಕಂಡಂತೆ ಅದು ಪ್ರಪಂಚಕ್ಕೆ ಕ್ರೈಸ್ತೇತರ ಧರ್ಮಗಳ ಹುಳುಕನ್ನು ತೋರುವುದಕ್ಕೆ ಕಟ್ಟಿದ ನಾಟಕ. ಆದರೆ ಕ್ರೈಸ್ತೇತರ ಧರ್ಮಗಳೇ ಪ್ರಬಲವಾಗಿ, ಅದೊಂದು ಕ್ರೈಸ್ತರ ದೃಷ್ಟಿಯಿಂದ ವಿಶ್ವಧರ್ಮ ಸಮ್ಮೇಳನ ನಿಷ್ಪ್ರಯೋಜಕವಾಯಿತು. ಆದರೆ ಭರತಖಂಡಕ್ಕೆ ಮತ್ತು ಭಾರತೀಯ ಚಿಂತನೆಯ ದೃಷ್ಟಿಯಿಂದ ಯಶಸ್ವಿಯಾಯಿತು. ಇದು ವೇದಾಂತದ ಭಾವನೆಗಳು ಜಗತ್ತಿನಲ್ಲೆಲ್ಲ ಹರಡುವಂತೆ ಮಾಡಿತು. *(ಸ್ವಾಮಿ ವಿವೇಕಾ ನಂದರ ಕೃತಿಶ್ರೇಣಿ, ಸಂ.೭, ಪು. ೪೩೪)*

ಚಿಕಾಗೋ ಪತ್ರಿಕೆಗಳೂ ಸ್ವಾಮೀಜಿಯನ್ನು ಸಾಕಷ್ಟು ಪ್ರಶಂಸೆ ಮಾಡಿದವು: ''ಅನೇಕ ಸಂಕ್ಷಿಪ್ತ ಭಾಷಣಗಳು ವಾಗ್ವೈಖರಿಯಿಂದ ತುಂಬಿದ್ದರೂ, ಧರ್ಮ ಸಮ್ಮೇಳನದ ನಿಜವಾದ ಇಂಗಿತ ಆಶಯವನ್ನು ಮತ್ತು ಅದರ ಪರಿಮಿತಿಯನ್ನೂ ಹಿಂದೂ ಸಂನ್ಯಾಸಿಯಷ್ಟು ಯಾರೂ ವ್ಯಕ್ತಪಡಿಸಲಿಲ್ಲ... ಅವನೊಬ್ಬ ದೇವದತ್ತವಾದ ಅಧಿಕಾರದಿಂದ ಬಂದ ವಾಗ್ಮಿ. ಗೈರಿಕ ಮತ್ತು ಕೇಸರ ವರ್ಣಗಳ ಆಕರ್ಷಕವಾದ ಹಿನ್ನೆಲೆಯಲ್ಲಿ ಬಲಿಷ್ಠ ಪ್ರಜ್ಞಾಶಾಲಿಯ ಮುಖ. ಅವನಾಡಿದ ಸ್ಫೂರ್ತಿದಾಯಕವಾದ ಮಾತುಗಳು, ಅವನು ಅವುಗಳಿಗೆ ಕೊಟ್ಟ ಸ್ನಿಗ್ಧ ಛಂದೋಗತಿಯ ಉಚ್ಚಾರಣೆಯಿಂದ ಹೆಚ್ಚು ಆಕರ್ಷಣೀಯವಾಗಿದ್ದವು.'' *('ನ್ಯೂ ಯಾರ್ಕ್ ಕ್ರಿಟಿಕ್')*

''ವಿವೇಕಾನಂದರೇ ನಿಸ್ಸಂದೇಹವಾಗಿ ಸರ್ವಧರ್ಮ ಸಮ್ಮೇಳನದ ಮಹೋನ್ನತ ವ್ಯಕ್ತಿ. ಅವರ ಭಾಷಣವನ್ನು ಕೇಳಿದ ಮೇಲೆ ಇಂತಹ ಘನಪಂಡಿತರಿರುವ ಜನಾಂಗಕ್ಕೆ ಪ್ರತಿನಿಧಿಗಳನ್ನು ಕಳುಹಿಸುವುದು ಎಂತಹ ಮೂರ್ಖತನ ಅವಿವೇಕ ಎಂದು ನಮಗೆ ಭಾಸವಾಗುತ್ತಿದೆ.'' *('ಹೆರಾಲ್ಡ್', ಇಲ್ಲಿಯ ಮುಖ್ಯ ಪತ್ರಿಕೆ)*

ಸ್ವಾಮಿ ವಿವೇಕಾನಂದರು ಧರ್ಮ ಸಮ್ಮೇಳನದಲ್ಲಿ ಒಟ್ಟು ೬ ಭಾಷಣಗಳನ್ನು ಮಾಡಿದರು. ಅದರಲ್ಲಿ ೫ ಪುಟ್ಟ ಭಾಷಣಗಳು. ಅವು ಯಾವ ಪೂರ್ವ ಸಿದ್ಧತೆಯೂ ಇಲ್ಲದ, ಆದರೆ ಬಹಳ ಅರ್ಥಪೂರ್ಣವಾದ ಭಾಷಣಗಳು. ಹಿಂದೂಧರ್ಮದ ಮೇಲೆ ಮಾಡಿದ ಒಂದೇ ಒಂದು ಭಾಷಣ ಬರೆದುಕೊಂಡು ಬಂದು ದಾಗಿತ್ತು. ಈ ಉಪನ್ಯಾಸ ಕುರಿತಾಗಿ ಸೋದರಿ ನಿವೇದಿತಾ ಹೇಳುತ್ತಾರೆ: ''ಸ್ವಾಮೀಜಿ ಮಾತನಾಡಲು ಪ್ರಾರಂಭಿಸಿದಾಗ ಅದು 'ಹಿಂದೂಗಳ ಕೆಲವು ಧಾರ್ಮಿಕ ಭಾವನೆಗಳು' ಎಂಬ ವಿಷಯವನ್ನು ಕುರಿತಾಗಿತ್ತು. ಆದರೆ ಅವರು ತಮ್ಮ ಮಾತನ್ನು ಮುಗಿಸಿದಾಗ ಹಿಂದೂಧರ್ಮವೇ ಸೃಷ್ಟಿಯಾಗಿತ್ತು.''

ಧರ್ಮಸಮ್ಮೇಳನದ ಕೊನೆಯ ದಿನ ಕೊನೆಯದಾಗಿ ಅಧ್ಯಕ್ಷ ಬಾನಿ ಸಮಾರೋಪ ಭಾಷಣ ಮಾಡಲು ಎದ್ದುನಿಂತರು. ಅದರಲ್ಲಿ ಅವರು ಒಂದು ಮಾತು ಹೇಳಿದರು, ''ಸಮ್ಮೇಳನದ ಇಪ್ಪತ್ತು ವಿಭಾಗಗಳಲ್ಲಿ ಧರ್ಮವೂ ಒಂದಾಗಿದೆ, ಈ ವಿಭಾಗದಲ್ಲಿ ಧರ್ಮಗಳ ಸಮ್ಮೇಳನದ ಹೊರತಾಗಿ ಇನ್ನೂ ಸುಮಾರು ಐವತ್ತು ಸಮ್ಮೇಳನಗಳಾಗಿವೆ. ಜೊತೆಗೆ ಪ್ರಮುಖ ವಿಷಯಗಳ ಬಗ್ಗೆ ಅನೇಕ ವಿಶೇಷ ಸಮ್ಮೇಳನಗಳೂ ಆಗಿವೆ. ಇದಕ್ಕೆ ಮುಂಚೆ ೧೪೧ ಸಮ್ಮೇಳನಗಳಲ್ಲಿ ೯೨೬ ಅಧಿವೇಶನಗಳು ನಡೆದಿವೆ. ಮತ್ತು ಮುಂದೆ ಇನ್ನೂ ೧೫ ಸಮ್ಮೇಳನಗಳು ನಡೆಯಲಿವೆ.''

ಈ ಸಮ್ಮೇಳನ ನಡೆದು ೧೨೫ ವರ್ಷಗಳಾದವು. ಆದರೆ ಎಲ್ಲರ ಮನಸ್ಸಿನಲ್ಲಿ ಉಳಿದಿರುವುದು ಒಂದೇ. ಅದೆಂದರೆ ಸ್ವಾಮಿ ವಿವೇಕಾನಂದರ, ''ಅಮೆರಿಕಾದ ಸೋದರ ಸೋದರಿಯರೆ'' ಎಂಬ ಸಂಬೋಧನೆ. ಇದು ಇಂದು ಪ್ರಪಂಚದಾದ್ಯಂತ ಕೊಂಡಾಡಲ್ಪಡುತ್ತಿದೆ. ಧನ್ಯ ಭಾರತ ಮಾತೆ, ಧನ್ಯ ಹಿಂದೂಧರ್ಮ.

## ಸ್ವಾಮೀಜಿ ಚಿತ್ರ

ಗೀತೆಯ ಮೇಲೆ ಭಾಷಣ ಮಾಡುವಾಗ ಸ್ವಾಮೀಜಿಯವರ ನಿಲುವು ಹೇಗಿತ್ತು ಎನ್ನುವುದನ್ನು ಸ್ವಾಮಿ ಶುದ್ಧಾನಂದರು ಹೀಗೆ ವರ್ಣಿಸಿದ್ದಾರೆ:

''ಪ್ರಿಯ ವಾಚಕರೆ, ನಾನು ಆ ದಿನ ಪರಿಭಾವಿಸಿಕೊಂಡಿದ್ದ ಆ ಮಹಾವ್ಯಕ್ತಿಯ ಆ ಚಿತ್ರ ಈಗಲೂ ನನ್ನ ಬಗೆಗಣ್ಣ ಮುಂದಿರುವ ಅದೇ ಚಿತ್ರ, ನನ್ನ ಈ ವಿನೀತ ಪ್ರಯತ್ನದ ಮೂಲಕ ನಿಮ್ಮ ಬಗೆಗಣ್ಣ ಮುಂದೆಯೂ ಬಂದು ನಿಲ್ಲಲಿ. ಆತನನ್ನು ಕುರಿತು ಚಿಂತಿಸುತ್ತ ಆ ಮಹಾವಿದ್ವಾಂಸನ, ಶಿಖರಪ್ರಾಯನಾದ ಆ ಮಹಾಶಕ್ತಿಯ ಅಪರಿಮಿತ ಪ್ರೇಮದಿಂದ ತುಂಬಿದ ಹೃದಯವುಳ್ಳ ಆತನ ನೆನಪು ನನ್ನನ್ನು ತುಂಬಿಕೊಳ್ಳುತ್ತದೆ. ಕಾಲದೇಶಗಳ ಪರಿಮಿತಿಯನ್ನು ಮೀರಿ ನೀವೂ ಕೂಡ ಸ್ವಾಮೀಜಿಯ ಆ ರೂಪವನ್ನು ಪರಿಭಾವಿಸಿಕೊಳ್ಳಲು ಯತ್ನಿಸಬೇಕು... 'ಇತರರಲ್ಲಿ ನೀವು ಪರಮಾತ್ಮನನ್ನು ಕಾಣುವ ಪ್ರಯತ್ನ ಮಾಡುವುದಾದರೆ, ಪರಮ ಪಾಪಿಯಾದವನನ್ನು ಸಹ ನೀವು ದ್ವೇಷಿಸಬಾರದು' ಎಂದು ನುಡಿಯುವಾಗ ಅವರ ಭಾವಾಭಿವ್ಯಕ್ತಿಯ ಶ್ರೀಮಂತಿಕೆಯನ್ನು ನನ್ನ ಹೃದಯದಲ್ಲಿ ನಾನು ಶಾಶ್ವತವಾಗಿ ಇರಿಸಿಕೊಂಡಿದ್ದೇನೆ. ಪ್ರೇಮವು ನೂರಾರು ಪ್ರವಾಹಗಳಾಗಿ ಅವರಿಂದ ಹೊರಗೆ ಹರಿದು ಬರುತ್ತಿರುವಂತೆ ಇತ್ತು. ಅವರ ವ್ಯಕ್ತಿತ್ವದಿಂದ ಪ್ರೇಮವು ಉಕ್ಕಿ ಹರಿಯುವಂತಿತ್ತು; ಅವರ ಪ್ರೇಮಾರ್ದ್ರ ಮುಖಕಮಲದಲ್ಲಿ ಕಾಠಿಣ್ಯದ ಲವಲೇಶವೂ ಸಹ ಕಂಡುಬರುತ್ತಿರಲಿಲ್ಲ.''

# ಸ್ವಾಮಿ ವಿವೇಕಾನಂದರ ಚಿಕಾಗೋ ಉಪನ್ಯಾಸಗಳ ಪ್ರಭಾವ

**ಸ್ವಾಮಿ ನಿತ್ಯಸ್ಥಾನಂದ**



ಸ್ವಾಮಿ ವಿವೇಕಾನಂದರು ಚಿಕಾಗೋದಲ್ಲಿ ನೀಡಿದ ಭಾಷಣಗಳ ಪ್ರಭಾವವೆಂತಹದು? ವಿಶೇಷವಾಗಿ ಬೌದ್ಧಿಕ ವಲಯದಲ್ಲಿ, ಪ್ರಪಂಚ ಚಿಂತಕರ ಮೇಲೆ ಅವುಗಳ ಪ್ರಭಾವ ಹೇಗೆ ಕಂಡುಬರುತ್ತದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ. ಲೇಖಕರು 'ವಿವೇಕಪ್ರಭ'ದ ಮೊದಲನೆಯ ಸಂಪಾದಕರಾಗಿದ್ದರು; ಹಾಗೂ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರಾಗಿದ್ದರು. ಪ್ರಸಿದ್ಧ ಪ್ರವಚನಕಾರರೂ, ಬರಹಗಾರರೂ, ಉತ್ತಮ ಚಿಂತಕರೂ ಆಗಿರುವ ಪೂಜ್ಯ ಸ್ವಾಮೀಜಿಯವರು ಅನೇಕ ಗ್ರಂಥಗಳನ್ನು ರಚಿಸಿದ್ದು, ಪ್ರಸ್ತುತ ದಾವಣಗೆರೆ ರಾಮಕೃಷ್ಣ ಮಿಷನ್ ಆಶ್ರಮದ ಅಧ್ಯಕ್ಷರಾಗಿದ್ದಾರೆ.

೧೮೯೩ರಲ್ಲಿ ಅಮೆರಿಕದ ಚಿಕಾಗೋ ನಗರದಲ್ಲಿ ಒಂದು ಬೃಹತ್ ಮೇಳವನ್ನು ಏರ್ಪಡಿಸಲಾಗಿತ್ತು. ಸುಮಾರು ಮೂರು ವರ್ಷಗಳಿಂದ ಇದಕ್ಕೆ ಸಿದ್ಧತೆ ನಡೆಯುತ್ತಿತ್ತು. ನೂರಾರು ಎಕರೆ ಜಾಗವನ್ನು ಆ ಮೇಳ ಆವರಿಸಿಕೊಂಡಿತ್ತು. ಭೌತಿಕ ವಿಜ್ಞಾನ ಮತ್ತು ತಾಂತ್ರಿಕತೆಯಲ್ಲಿ ಅದುವರೆಗೆ ಮಾನವನು ಸಾಧಿಸಿದ ಪ್ರಗತಿ, ಸಂಶೋಧನೆಗಳು, ಆವಿಷ್ಕಾರಗಳು ಇತ್ಯಾದಿಗಳನ್ನು ಜಗತ್ತಿಗೆ ತೋರಿಸಲು ಆಯೋಜಿಸಿದ ಒಂದು ಮಹತ್ವಪೂರ್ಣವಾದ ವಸ್ತು ಪ್ರದರ್ಶನವಾಗಿತ್ತು ಅದು. ಅದರ ಹೆಸರು 'ವರ್ಲ್ಡ್ ಕೊಲಂಬಿಯನ್ ಎಕ್ಸ್‌ಪೊಸಿಷನ್.' ಚಿಂತನಾಜಗತ್ತಿನಲ್ಲಿ ಏನೇನು ಬದಲಾವಣೆಗಳಾಗಿವೆ, ಎಷ್ಟೊಂದು ವಿಕಾಸವಾಗಿದೆ ಎಂಬುದನ್ನು ತೋರಿಸಲು, ಮತ್ತು ಅದರ ಬಗ್ಗೆ ವಿಶೇಷ ಮಾಹಿತಿಯನ್ನು ಸಂಗ್ರಹಿಸಲು, ಮೇಲೆ ಪ್ರಸ್ತಾಪಿಸಿದ ವಸ್ತು ಪ್ರದರ್ಶನದ ಅಂಗವಾಗಿ, ಒಂದು ವಿಶ್ವಧರ್ಮ ಸಮ್ಮೇಳನವನ್ನು ಆಯೋಜಿಸಲಾಯಿತು.

ಆದರೆ ಈ ವಿಶ್ವಧರ್ಮ ಸಮ್ಮೇಳನದ ನಿಜವಾದ ಉದ್ದೇಶ ಕ್ರೈಸ್ತಧರ್ಮದ ಹಿರಿಮೆಯನ್ನು ಜಗತ್ತಿಗೆ ತೋರಿಸುವುದೇ ಆಗಿತ್ತು. ಈ ವಿಷಯವನ್ನು ಸ್ವಾಮೀಜಿ ಸ್ಪಷ್ಟವಾಗಿ ವ್ಯಕ್ತಪಡಿಸಿರುವುದು ಮಾತ್ರವಲ್ಲದೆ, ಸಮ್ಮೇಳನದ ವರದಿಯೂ ಈ ವಿಷಯನ್ನು ಪ್ರಮಾಣೀಕರಿಸುತ್ತದೆಯಂತೆ. ಆದರೆ ಪರಿಣಾಮ ಇದರ ವಿರುದ್ಧವಾಯಿತು. ಸಮ್ಮೇಳನದ ವಿಜ್ಞಾನ ವಿಭಾಗದ ಅಧ್ಯಕ್ಷರಾದ ಮರ್ವಿನ್ ಮೇರಿ ಸ್ನೇಲ್ ಹೇಳುತ್ತಾರೆ: ''ಕ್ರೈಸ್ತ ಜಗತ್ತಿಗೆ, ಮುಖ್ಯವಾಗಿ ಅಮೆರಿಕನ್ನರಿಗೆ, ಇದು ಕಲಿಸಿದ ಮಹತ್ವದ ಪಾಠವೆಂದರೆ ಕ್ರೈಸ್ತಧರ್ಮಕ್ಕಿಂತ ಹೆಚ್ಚು ಪೂಜ್ಯವಾದ ಅನೇಕ ಧರ್ಮಗಳು ಜಗತ್ತಿನಲ್ಲಿವೆ ಎಂಬುದು.''

ವೈಜ್ಞಾನಿಕ ವಸ್ತುಪ್ರದರ್ಶನವೇ ಪ್ರಧಾನ ಘಟನೆಯಾದರೂ ಅದರ ಅಂಗವಾದ ವಿಶ್ವಧರ್ಮ ಸಮ್ಮೇಳನವು ಒಂದು ಐತಿಹಾಸಿಕ ಘಟನೆಯಾದದು ಆಶ್ಚರ್ಯ. ವಸ್ತುಪ್ರದರ್ಶನವನ್ನು ಈಗ ಯಾರೂ ನೆನೆಸಿಕೊಳ್ಳುವುದಿಲ್ಲ, ಆದರೆ ವಿಶ್ವಧರ್ಮ ಸಮ್ಮೇಳನವು ಮಾತ್ರ ಚಿಂತನಾ ಜಗತ್ತಿನ ವಿಶೇಷ ಗಮನವನ್ನು ಸೆಳೆದಿದೆ. ಇದೊಂದು ಐತಿಹಾಸಿಕ ಘಟನೆಯಾದುದಕ್ಕೆ ಯಾರು ಕಾರಣರು? ಅಲ್ಲಿ ನೆರದಿದ್ದ ಸಭಿಕರೂ ಅಲ್ಲ, ಸಭೆಯ ಆಯೋಜನೆಯ ವ್ಯವಸ್ಥೆಯೂ ಅಲ್ಲ, ವ್ಯವಸ್ಥಾಪಕರೂ ಅಲ್ಲ, ಸಭೆಯಲ್ಲಿ ಮಾತನಾಡಿದ ವಿವಿಧ ಪ್ರತಿಭಾನ್ವಿತ ವ್ಯಕ್ತಿಗಳೂ ಅಲ್ಲ, ಅದಕ್ಕೆ ನೀಡಿದ ಅತಿ ಪ್ರಚಾರವೂ ಅಲ್ಲ. ಒಬ್ಬ ವ್ಯಕ್ತಿ ಅದಕ್ಕೆ ಕಾರಣರಾದರು. ಅವರೇ ಸ್ವಾಮಿ ವಿವೇಕಾನಂದರು. ಆ ವ್ಯಕ್ತಿಯ ಹಿಂದೆ ಅಪಾರ ಆಧ್ಯಾತ್ಮಿಕ ಶಕ್ತಿಯಿತ್ತು; ಸನಾತನ ಭಾರತದ ಸಾಂಸ್ಕೃತಿಕ ವೈಭವದ ಹಮ್ಮೆ ಆ ವ್ಯಕ್ತಿಯಲ್ಲಿ ತುಂಬಿ ತುಳುಕುತ್ತಿತ್ತು; ವಿಚಾರ ಶಕ್ತಿ ಹೃದಯವಂತಿಕೆಗಳೆರಡೂ ಸೂರ್ಯಕಾಂತಿಯಂತೆ ಬೆಳಗುತ್ತಿದ್ದವು ಆ ವ್ಯಕ್ತಿಯಲ್ಲಿ. ಈ ಎಲ್ಲ ಶಕ್ತಿಗಳೂ, ಅಗಾಧ ಪ್ರತಿಭೆಯೂ ಅವರ ವಾಕ್‌ಶಕ್ತಿಯಲ್ಲಿ

ಮೇಳೈಸಿ ಅದೊಂದು ಮಹಾಪ್ರವಾಹವಾಗಿ ಆ ಬೃಹತ್ ಸಮ್ಮೇಳನವನ್ನು ಇತಿಹಾಸದುದ್ದಕ್ಕೂ ಮನ್ನಡೆಸಿಕೊಂಡು ಹೋಗುವಂತಾಯಿತು. ಇದು ಸ್ವಾಮಿ ವಿವೇಕಾನಂದರ ಅನುಯಾಯಿಯಾಗಿ ಹೇಳುವ ಉತ್ಪ್ರೇಕ್ಷೆಯ ಮಾತಲ್ಲ. ಇತ್ತೀಚೆಗೆ ಪ್ರಕಟವಾದ ''American Veda'' ಗ್ರಂಥದಲ್ಲಿ ಫಿಲಿಪ್ ಗೋಲ್ಡ್‌ಬರ್ಗ್ ಎಂಬುವವರು ಹೇಳುತ್ತಾರೆ: ''ವಿವೇಕಾನಂದರು ಕೂಡಲೆ ಸರ್ವಾಕರ್ಷಣೆಯ ವ್ಯಕ್ತಿಯಾಗಿ ಹೊರಹೊಮ್ಮಿದರು. ಅವರು ಅಂತಹ ಪರಮಾದ್ಭುತ ಪರಿಣಾಮವನ್ನು ಉಂಟುಮಾಡದೆ ಇದ್ದಿದ್ದರೆ ಆ ಸಮ್ಮೇಳನವನ್ನು ಇಂದು ಯಾರೂ ನೆನಪಿಸಿಕೊಳ್ಳುತ್ತಿರಲಿಲ್ಲ, ಅಷ್ಟೇ ಅಲ್ಲ, ಅದರ ಶತಮಾನೋತ್ಸವವನ್ನೂ ಆಚರಿಸುತ್ತಿರಲಿಲ್ಲ.'' ಶತಮಾನೋತ್ಸವ ಮಾತ್ರವಲ್ಲ ಅದರ ೧೨೫ನೇ ವರ್ಷವನ್ನೂ ನಾವೀಗ ಆಚರಿಸುತ್ತಿದ್ದೇವೆ. 'ಮೂಗಿಗಿಂತ ಮೂಗುತಿಯೇ ದೊಡ್ಡದು' ಎನ್ನುವಂತೆ, ಧರ್ಮಸಮ್ಮೇಳನವೇ ವಿಜ್ಞಾನ ಪ್ರದರ್ಶನಕ್ಕಿಂತ ದೊಡ್ಡದಾಯಿತು. ವಿಜ್ಞಾನ ಸಾಧನೆಯ ಪ್ರದರ್ಶನವನ್ನು ಜನ ಮರೆತಿರಬಹುದು, ಆದರೆ ವಿಶ್ವಧರ್ಮ ಸಮ್ಮೇಳನವನ್ನು ಮರೆಯುವಂತೆಯೇ ಇಲ್ಲ. ಈ ಸಮ್ಮೇಳನದ ನಂತರ ಧರ್ಮ ಸಮನ್ವಯದ ಭಾವನೆ, ವಿಶ್ವಭಾವೈಕ್ಯತೆ, ಅಂತರ ಧರ್ಮ ಸಂವಾದ (inter religious diologue) ಇತ್ಯಾದಿಗಳು ಪ್ರಪಂಚದಾದ್ಯಂತ ಸರ್ವೇಸಾಮಾನ್ಯವಾಗಿವೆ. ಈ ಎಲ್ಲ ಬದಲಾವಣೆಗೆ ಸ್ವಾಮಿ ವಿವೇಕಾನಂದರೇ ಕಾರಣರಾದರು ಎಂಬುದು ಒಂದು ಹೆಮ್ಮೆಯ ವಿಷಯ.

ಸ್ವಾಮಿ ವಿವೇಕಾನಂದರ ಚಿಕಾಗೋ ಉಪನ್ಯಾಸಗಳ ಬಗ್ಗೆ ಸೋದರಿ ನಿವೇದಿತಾ ಹೀಗೆ ಹೇಳುತ್ತಾರೆ: ''ಪ್ರಾರಂಭದಲ್ಲಿ ಹಿಂದೂಗಳ ಧಾರ್ಮಿಕ ಭಾವನೆಗಳನ್ನು ಕುರಿತು ಅವರು ಹೇಳಹೊರಟರು. ಆದರೆ ಅವರು ತಮ್ಮ ಉಪನ್ಯಾಸ ಮುಗಿಸಿದಾಗ ಹಿಂದೂಧರ್ಮ ಪುನಃ ಸೃಷ್ಟಿಗೊಂಡಿತ್ತು.'' ಈ ಅಂತರ್ದೃಷ್ಟಿಪೂರ್ಣವಾದ ಹೇಳಿಕೆ ವಿಶಿಷ್ಟಾರ್ಥದಿಂದ ಕೂಡಿದೆ. ಇದಕ್ಕೆ ಹಿಂದೆ ಹಿಂದೂಧರ್ಮವೆಂದರೆ ಅದೊಂದು ನಿಜವಾಗಿ ಧರ್ಮವೇ ಅಲ್ಲ, ಅದಕ್ಕೆ ತನ್ನದೇ ಆದ ವೈಶಿಷ್ಟ್ಯಗಳಾವುವೂ (Self-Identity) ಇಲ್ಲ, ಅದು ಕೇವಲ ವಿವಿಧ ಧರ್ಮಗಳ ಅಂದರೆ ಶೈವ, ವೈಷ್ಣವ, ಶಾಕ್ತ ಮತಗಳ ಒಂದು ಸಂಗ್ರಹ ಅಷ್ಟೆ — ಎಂಬುದು ಪಾಶ್ಚಾತ್ಯಚಿಂತಕರ ಕಲ್ಪನೆಯಾಗಿತ್ತು. ಸ್ವಾಮಿ ವಿವೇಕಾನಂದರು ಈ ತಪ್ಪು ಕಲ್ಪನೆಯನ್ನು ಹೋಗಲಾಡಿಸಿದರು. ಎಲ್ಲ ಮತ-ಪಂಥಗಳಿಗೂ ಸಮಾನವಾದ ವಿಚಾರಗಳನ್ನು ಪ್ರತಿಪಾದಿಸಿ, ಹಿಂದೂಧರ್ಮದ ಒಂದು ಸಮಗ್ರಚಿತ್ರವನ್ನು ನೀಡಿ, ಹಿಂದೂಧರ್ಮಕ್ಕೆ ತನ್ನದೇ ಆದ ವೈಶಿಷ್ಟ್ಯವಿದೆ ಎಂಬುದನ್ನು ಅವರು ಜಗತ್ತಿಗೆ ತೋರಿಸಿಕೊಟ್ಟರು.

ಸ್ವಾಮಿ ವಿವೇಕಾನಂದರ ಚಿಕಾಗೋ ಉಪನ್ಯಾಸಗಳು, ವಿಶೇಷವಾಗಿ ಹಿಂದೂಧರ್ಮದ ಮೇಲಿನ ಅವರ ಉಪನ್ಯಾಸ, ಜಗತ್ತಿನ ಚಿಂತನೆಯ ದಿಕ್ಕನ್ನೇ ಬದಲಾಯಿಸಿತು ಎಂಬುದು ಗಮನಾರ್ಹವಾದ ವಿಷಯ. ಮಾನವನು ಪಾಪಿಯಲ್ಲ, ಅವನು ಪವಿತ್ರ, ದಿವ್ಯ, ಅವನು ಸ್ವರೂಪತಃ ದಿವ್ಯ, ಅವನನ್ನು ಪಾಪಿ ಎಂದು ಕರೆಯುವುದೇ ಒಂದು ಮಹಾಪಾಪ ಎಂದು ಅವರು ಉಚ್ಚಕಂಠದಿಂದ ಸಾರಿದರು. ಕ್ರೈಸ್ತಧರ್ಮದ ಪ್ರಕಾರ, ಮಾನವನು ಹುಟ್ಟು ಪಾಪಿ, ಪ್ರತಿಮಾನವನೂ ಮೂಲ ಪಾಪ (Original Sin) ದೊಂದಿಗೆ ಹುಟ್ಟುತ್ತಾನೆ. ಇನ್ನೊಂದು ಕಡೆ, ಮನಶ್ಶಾಸ್ತ್ರದ ಪ್ರಕಾರ, ಮಾನವನಲ್ಲಿ ಪ್ರಾಣಿಸಹಜ ಪ್ರವೃತ್ತಿಗಳೇ ಪ್ರಧಾನ, ಆ ಪ್ರವೃತ್ತಿಗಳ ದಮನದಿಂದಲೇ ಅನೇಕ ಮಾನಸಿಕ ರೋಗಗಳು ತೋರಿಕೊಳ್ಳುತ್ತವೆ. ಹೀಗೆ ಮಾನವನ ಬಗ್ಗೆ ಒಂದು ಬಗೆಯ ಕೀಳು ಕಲ್ಪನೆ ಉಂಟಾಗಿತ್ತು. ಈ ಕಲ್ಪನೆ ಬದಲಾಗಿ ಅವನ ಬಗ್ಗೆ ಒಂದು ಉದಾತ್ತ ಭಾವನೆ ಮೂಡುವಂತೆ ಮಾಡಿದ ಕೀರ್ತಿ ವಿವೇಕಾನಂದರಿಗೆ ಸಲ್ಲುತ್ತದೆ. ಇದರ ಪರಿಣಾಮವಾಗಿ ಅನ್ವಯಾತ್ಮಕ ಮನಶ್ಶಾಸ್ತ್ರವು (Politic Psycology) ಪ್ರಚಾರಕ್ಕೆ ಬಂದಿತು. ಇತ್ತೀಚೆಗೆ ಪ್ರಕಟವಾಗುತ್ತಿರುವ ಮಾನವನ ಏಳ್ಗೆಗೆ, ಅವನ ಸಾರ್ಥಕ ಜೀವನಕ್ಕೆ, ಮಾನಸಿಕ ವ್ಯಾಧಿಗಳಿಂದ ಪಾರಾಗುವುದಕ್ಕೆ, ಅನ್ವಯಾತ್ಮಕ ಚಿಂತನೆಗಳಿಗೆ, ಸುಖಾನ್ವೇಷಣೆಗೆ ಸಂಬಂಧಿಸಿದ ಪುಸ್ತಕಗಳಲ್ಲಿ ಸ್ವಾಮಿ ವಿವೇಕಾನಂದರ ಚಿಂತನೆಗಳೇ ತುಂಬಿಕೊಂಡಿರುತ್ತವೆ. ನಿಷೇಧಾತ್ಮಕತೆ ಬಿಡಬೇಕು, ಆತ್ಮವಿಶ್ವಾಸವಿರಬೇಕು; ತನ್ನ ಅಂತರಂಗದ ದಿವ್ಯತೆಯಲ್ಲಿ ಎಲ್ಲ ಶಕ್ತಿಸಾಮರ್ಥ್ಯಗಳು ತನ್ನೊಳಗೆ ಇದೆ, ತಾನೇನ್ನಾದರೂ ಸಾಧಿಸಬಲ್ಲೆ — ಆಕಾಶವೇ ಮಿತಿ — ಎಂಬುದರಲ್ಲಿ ದೃಢ ವಾದ ಶ್ರದ್ಧೆ — ಇಂತಹ ವಿಚಾರಗಳೇ ಆ ಪುಸ್ತಕಗಳಲ್ಲಿ ತುಂಬಿ ಕೊಂಡಿರುತ್ತವೆ. ಅವೆಲ್ಲ ಅಂತರರಾಷ್ಟ್ರೀಯ ಅತಿ ಹೆಚ್ಚು ಮಾರಾಟವಾಗುವ ಪುಸ್ತಕಗಳು. ಸ್ವಾಮಿ ವಿವೇಕಾನಂದರೇ ಆ ಪುಸ್ತಕಗಳ ಮೂಲಕ ಮಾತನಾಡುತ್ತಿರುವಂತೆ ಅನಿಸುತ್ತದೆ. ಆದರೆ ಎಲ್ಲಿಯೂ ಅವರ ಹೆಸರು ಕಾಣಿಸಿಕೊಳ್ಳುವುದಿಲ್ಲ. ಅಂದರೆ ಸ್ವಾಮೀಜಿಯ ಚಿಂತನೆಗಳನ್ನು ಅವರು ಕದಿಯುತ್ತಿರುವರು ಎಂದರ್ಥವಲ್ಲ. ಅವರಿಗೆ ಆ ಚಿಂತನೆಗಳ ಮೂಲಕ ಅದೆಷ್ಟು ಪರಿಣಾಮಕಾರಿಯಾಗಿ ಕೆಲವು ವಿಚಾರಗಳನ್ನು ಜಗತ್ತಿನ ಚಿಂತನಾ ಕ್ಷೇತ್ರದಲ್ಲಿ ಬಿತ್ತರಿಸಿದರೆಂದರೆ ಅದು ಜಗತ್ತಿನ ಚಿಂತನೆಗೆ ಹೊಸ ತಿರುವನ್ನು ನೀಡಿತು, ವಿಚಾರವಂತರೆಲ್ಲರೂ ಅದೇ ರೀತಿ ಚಿಂತಿಸುವಂತೆ ಮಾಡಿತು; ಎಲ್ಲರೂ ತಮಗರಿವಿಲ್ಲದೆ ಅದನ್ನು ಸ್ವೀಕರಿಸುವಂತಾಯಿತು. ಇದು ಸ್ವಾಮಿ ವಿವೇಕಾನಂದರು ಚಿಂತನಾ ಜಗತ್ತಿಗೆ ನೀಡಿದ ಅಭೂತಪೂರ್ವ ಕೊಡುಗೆ.

ಸ್ವಾಮಿ ವಿವೇಕಾನಂದರು ಚಿಕಾಗೋ ವಿಶ್ವವೇದಿಕೆಯ ಮೇಲೆ ನಿಂತು ಮಾತನಾಡಿದ ಪರಿಣಾಮವನ್ನು ಕುರಿತು ಮೇಲೆ ಪ್ರಸ್ತಾಪಿಸಿದ ಫಿಲಿಪ್ ಗೋಲ್ಡ್‌ಬರ್ಗ್ ಮಾರ್ಮಿಕವಾಗಿ ಹೇಳುತ್ತಾರೆ: ''ಮಿಲಿಯಗಟ್ಟಲೆ ಅಮೆರಿಕನ್ನರು ಯೋಗ-ವೇದಾಂತದ ಭಾವನೆಗಳಿಂದ ಪ್ರಭಾವಿತರಾಗಿರುವರು, ಅವನ್ನು ಒಪ್ಪಿಕೊಂಡಿರುವರು. ಆದರೆ ಅವುಗಳ ಮೂಲ ಅನೇಕರಿಗೆ ತಿಳಿಯದು. ಚೀನಾದ ಪಸ್ತಾ ಎಂಬ ತಿಂಡಿಯನ್ನು ಅದರ ಮೂಲ ತಿಳಿಯದೆ ತಿನ್ನುವಂತೆ,

ಟಿ.ವಿ.ಯನ್ನು ಯಾರು ಕಂಡುಹಿಡಿದರು ಎಂಬುದನ್ನು ತಿಳಿಯದೆ ಅದನ್ನು ನೋಡುವಂತೆ ಜನರು ಯೋಗ-ವೇದಾಂತದ ಭಾವನೆಗಳನ್ನು ಸವಿಯುತ್ತಿರುವರು.'' (''American Veda''). ಸ್ವಾಮೀಜಿ ಕೂಡ ತಮ್ಮ ಹೆಸರನ್ನು ಪ್ರಸ್ತಾವಿಸಬೇಕೆಂದು ಎಂದೂ ಬಯಸಿದವರಲ್ಲ. ಅವರ ಜೀವಿತಕಾಲದಲ್ಲೇ ಅವರ ವಿಚಾರಗಳನ್ನು ಸ್ವೀಕರಿಸಿ ಅವು ತಮ್ಮದೇ ಎನ್ನುವ ರೀತಿಯಲ್ಲಿ ಪ್ರಚಾರ ಮಾಡುತ್ತಿದ್ದ ಕೆಲವರಿದ್ದರು ಅಮೆರಿಕದಲ್ಲಿ. ಅವರ ಬಗ್ಗೆ ಪ್ರಸ್ತಾಪಿಸಿದಾಗ ತುಂಬ ಉದಾಸೀನ ಭಾವವನ್ನು ವ್ಯಕ್ತಪಡಿಸುತ್ತಿದ್ದರು.

ಪ್ರಸಿದ್ಧ ಇತಿಹಾಸತಜ್ಞರಾದ ಅರ್ನಾಲ್ಡ್ ಟಾಯ್ನ್‌ಬಿ ಅವರು ಭಾರತ ಸ್ವತಂತ್ರವಾಗುವುದಕ್ಕೆ ಮುಂಚೆಯೇ ಹೀಗೆ ಹೇಳಿದ್ದಾರೆ: ''ಈಗ ಆಳಲ್ಪಡುತ್ತಿರುವ ಭಾರತವು ಮುಂದೆ ಆಳಲ್ಪಡುವವರನ್ನೇ ಆಳುತ್ತದೆ.'' ಚಿಂತನಾ ಜಗತ್ತಿನಲ್ಲಂತೂ ಇದು ಅಕ್ಷರಶಃ ಸತ್ಯವಾಗುತ್ತದೆ. ಹಿಂದೆ ರಾಜಕೀಯವಾಗಿ ಮಾತ್ರವಲ್ಲದೆ ವೈಚಾರಿಕವಾಗಿಯೂ ಭಾರತವು ಪಾಶ್ಚಾತ್ಯರಿಂದ ಆಳಲ್ಪಡುತ್ತಿತ್ತು. ಈಗ ಇದು ಬದಲಾಗುತ್ತದೆ. ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿಯೂ ಈ ಭಾರತ ಆಳುವವರ ಸ್ಥಾನವನ್ನು ಆಕ್ರಮಿಸುತ್ತಿದೆ. ಇದಕ್ಕೆ ಮೂಲ ಕಾರಣ ಸ್ವಾಮಿ ವಿವೇಕಾನಂದರು ಭಾರತೀಯರಲ್ಲಿ ಹೆಮ್ಮೆಯನ್ನೂ ಸ್ವಾಭಿಮಾನವನ್ನೂ ಹೆಚ್ಚಿಸಿದುದು ಎಂಬುದನ್ನು ಮರೆಯಬಾರದು. ಅಮೆರಿಕಾದ ಸೇಂಟ್ ಲೂಯಿಸ್ ನಗರದ ವೇದಾಂತ ಕೇಂದ್ರದ ಮುಖ್ಯಸ್ಥರಾಗಿದ್ದ ಸ್ವಾಮಿ ಸತ್ಪ್ರಕಾಶಾನಂದರನ್ನು, ''ವೇದಾಂತವು ಅಮೆರಿಕದಲ್ಲಿ ಬೇರೂರುವುದೆ?'' ಎಂದು ಯಾರೋ ಒಬ್ಬರು ಕೇಳಿದರಂತೆ. ಅದಕ್ಕೆ ಅವರು, ''ಹೌದು, ಆದರೆ ಅದರ ಮೂಲವನ್ನು ಯಾರೂ ಗುರುತಿಸುವುದಿಲ್ಲ'' ಎಂದು ಉತ್ತರಿಸಿದರು. ಜೆರಾಲ್ಡ್ ಹರ್ಡ್ ಅವರು ಹೇಳುತ್ತಾರೆ: ''ಒಂದು ಹೊಸ ಧರ್ಮವು ಇತಿಹಾಸವನ್ನು ಪ್ರವೇಶಿಸುತ್ತಿದೆ, ಅದೇ ಪಾಶ್ಚಾತ್ಯ ವೇದಾಂತ.'' ಬುದ್ಧನು ಪ್ರಾಚ್ಯಕ್ಕೆ ಒಂದು ಸಂದೇಶವನ್ನು ನೀಡಿರುವಂತೆ, ನಾನು ಪಾಶ್ಚಾತ್ಯಕ್ಕೆ ನೀಡುವ ಸಂದೇಶವೊಂದಿದೆ'' ಎಂದು ಸ್ವಾಮಿ ವಿವೇಕಾನಂದರು ಹೇಳಿರುವ ಮಾತು ಎಷ್ಟು ಸತ್ಯ ಎಂಬುದನ್ನು ನಾವು ಕಲ್ಪಿಸಿಕೊಳ್ಳಬಹುದು.

ಸ್ವಾಮಿ ವಿವೇಕಾನಂದರು ವಿಶ್ವವೇದಿಕೆಯನ್ನು ಪ್ರವೇಶಿಸಿದ ಮೇಲೆ ಧಾರ್ಮಿಕ ಚಿಂತನೆಗಳಲ್ಲಾದ ಕೆಲವು ಬದಲಾವಣೆಗಳನ್ನು ನಾವು ಗುರುತಿಸಬಹುದು:

### ೧) ಬಹುತ್ವವಾದದಲ್ಲಿ (Pluralism) ನಂಬಿಕೆ.

ಬಹುತ್ವವಾದವೆಂದರೆ, ಎಲ್ಲ ಧರ್ಮಗಳೂ ಸಮಾನ ಸತ್ಯ; ಅವೆಲ್ಲವೂ ಒಂದೇ ಆತ್ಯಂತಿಕ ಸತ್ಯದೆಡೆಗೆ ಕರೆದುಕೊಂಡು ಹೋಗುವ ವಿವಿಧ ಮಾರ್ಗಗಳು ಎಂಬ ನಂಬಿಕೆ. ಇದಕ್ಕೆ ವಿರುದ್ಧವಾದುದು exclusivisim, ಯಾವುದೋ ಒಂದು ಧರ್ಮ ಮಾತ್ರ ಸತ್ಯ; ಅದರಿಂದ ಮಾತ್ರ ಮುಕ್ತಿ; ಉಳಿದ ಧರ್ಮಾನುಯಾಯಿಗಳಿಗೆ ಶಾಶ್ವತ ನರಕಪ್ರಾಪ್ತಿ — ಎಂಬ ನಂಬಿಕೆ. ಸಾಮಾನ್ಯವಾಗಿ ಮೂಲಭೂತವಾದಿ ಕ್ರೈಸ್ತರೂ ಮುಸ್ಲಿಮರೂ ಈಗಲೂ ಇದನ್ನು ನಂಬುತ್ತಾರೆ. ಅಮೆರಿಕದಲ್ಲಿ ಅನೇಕರು, ಸಾಮಾನ್ಯರೂ ಕೂಡ, ಬಹುತ್ವವಾದವನ್ನು ನಂಬುತ್ತಾರೆ. ಏಕೆಂದರೆ ಅದು ವಿಚಾರಬುದ್ಧಿಗೆ ನಿಲುಕುವಂತಹದು. ತಮ್ಮನ್ನು ಹಿಂದೂ ಎಂದು ಗುರುತಿಸಿಕೊಳ್ಳದೆ ಜನರು ಬಹುತ್ವವಾದವನ್ನು ಸ್ವೀಕರಿಸುತ್ತಿರುವರು.

### ೨) ಮಾನವನು ಪಾಪಿಯಲ್ಲ, ಅವನು ದಿವ್ಯ

ಈ ಭಾವನೆಯನ್ನು ಸ್ವಾಮಿ ವಿವೇಕಾನಂದರಷ್ಟು ಪರಿಣಾಮಕಾರಿಯಾಗಿ ಮತ್ತಾರೂ ಬೋಧಿಸಲಿಲ್ಲ, ಅವರಷ್ಟು ಇದಕ್ಕೆ ಪ್ರಾಧಾನ್ಯತೆಯನ್ನು ಮತ್ತಾರೂ ನೀಡಲಿಲ್ಲ ಎನ್ನಬಹುದು. ಇದು ಜಗತ್ತಿನ ಚಿಂತನಾಧಾರೆಯನ್ನೇ ಹೇಗೆ ಬದಲಾಯಿಸಿರು ಎಂಬುದನ್ನೂ ನಾವು ನೋಡಿರುವೆವು. ಈ ಭಾವನೆಯನ್ನೇ ಆಧರಿಸಿ ಸ್ವಾಮೀಜಿ ಆತ್ಮಶ್ರದ್ಧೆಗೆ ಹೆಚ್ಚು ಒತ್ತನ್ನು ನೀಡುತ್ತಾರೆ. ಜೀನು (Jeans)ಗಳು ವಂಶಪಾರಂಪರ್ಯವಾಗಿ ಬಂದ ಸಂಸ್ಕಾರಗಳನ್ನೆಲ್ಲ ತಮ್ಮೊಳಗಿರಿಸಿಕೊಂಡು ಒಂದು ಪೀಳಿಗೆಯಿಂದ ಮುಂದಿನ ಪೀಳಿಗೆಗೆ ಒಯ್ಯುತ್ತವೆ; ಇವೇ ವ್ಯಕ್ತಿಯ ನಡೆ-ನುಡಿ ವರ್ತನೆಗಳಿಗೆಲ್ಲ ಕಾರಣ — ಎಂಬ ಕಲ್ಪನೆಯಿದೆ ವಿಜ್ಞಾನದಲ್ಲಿ. ನಾವೇನಾಗಿರುವೆವೋ ಅದಕ್ಕೆ ಜೀನುಗಳೇ ಕಾರಣ. ಇದಕ್ಕೆ genetic determination ಎಂದು ಕರೆಯುತ್ತಾರೆ. ಈಗ ಈ ಸಿದ್ಧಾಂತವು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಿದ್ದು, epigenetics ಎಂಬ ಸಿದ್ಧಾಂತವನ್ನು ವಿಜ್ಞಾನಿಗಳು ಪ್ರತಿಪಾದಿಸುತ್ತಾರೆ. ಅಂದರೆ ಜೀನುಗಳನ್ನು ಆಳುವ ಇನ್ನೊಂದು ಅಂಶವಿದೆಯಂತೆ. ವಾತಾವರಣಕ್ಕೆ ವ್ಯಕ್ತಿಯು ಯಾವ ರೀತಿ ಸ್ಪಂದಿಸುತ್ತಾನೆ ಎಂಬುದನ್ನು ಅವಲಂಬಿಸಿ ಜೀನುಗಳು ಬದಲಾಗುತ್ತವೆಯಂತೆ. ಈ ಪ್ರತಿಕ್ರಿಯೆಯು ವ್ಯಕ್ತಿಯ ಶ್ರದ್ಧೆಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಶ್ರದ್ಧೆಯೇ ನಮ್ಮ ಸ್ವರೂಪವನ್ನು ನಿರ್ಧರಿಸುವುದು, ಜೀನುಗಳಲ್ಲ ಎಂದಾಯಿತು. ''ನನ್ನ ನಂಬಿಕೆಗಳನ್ನು ಬದಲಾಯಿಸುವುದರ ಮೂಲಕ ನನ್ನ ಜೀವನದ ಸ್ವರೂಪವನ್ನು ಬದಲಾಯಿಸಬಹುದು,'' ಎನ್ನುತ್ತಾರೆ ಬ್ರೂಸ್ ಹೆಚ್.ಲಿಪ್ಟನ್ ಎಂಬುವವರು. *(ನೋಡಿ, 'The Biology of Belief').* ಸ್ವಾಮೀಜಿ ಶ್ರದ್ಧೆಗೆ ಏಕೆ ಅಷ್ಟೊಂದು ಮಹತ್ವವನ್ನು ಕೊಡುತ್ತಾರೆ ಎಬುದನ್ನು ಇದರಿಂದ ಅರ್ಥಮಾಡಿಕೊಳ್ಳಬಹುದು. ''ಮನುಷ್ಯನು ಶ್ರದ್ಧಾಮಯನು, ಅವನ ಶ್ರದ್ಧೆಯಂತೆ ಅವನಿರುತ್ತಾನೆ'' (**ಶ್ರದ್ಧಾಮಯೋಽಯಂ ಪುರುಷೋ, ಯೋ ಯಚ್ಛ್ರದ್ಧಃ ಸ ಏವ ಸಃ**) ಎಂಬ ಶ್ರೀಕೃಷ್ಣನ ಮಾತೂ ತುಂಬ ಅರ್ಥಪೂರ್ಣ.

### ೩) ಪುನರ್ಜನ್ಮ ದಲ್ಲಿ ನಂಬಿಕೆ

ಇದು ಭಾರತೀಯ ಎಲ್ಲ ಧರ್ಮಗಳ ಪ್ರಧಾನ ಸಿದ್ಧಾಂತ. ಸ್ವಾಮಿ ವಿವೇಕಾನಂದರು ಈ ಸಿದ್ಧಾಂತವನ್ನು ಚಿಕಾಗೋ ಉಪನ್ಯಾಸದಲ್ಲಿ, ಮುಂದೆಯೂ ಕೂಡ, ತುಂಬ ವಿಚಾರಪೂರ್ವಕವಾಗಿ, ತರ್ಕಬದ್ಧವಾಗಿ ಮಂಡಿಸುತ್ತಾರೆ. ಮುಂದೆ ಇದರ ಬಗ್ಗೆ ಅನೇಕ ಸಂಶೋಧನೆಗಳೂ ನಡೆದಿದೆ. ಇದರ ಪರಿಣಾಮವಾಗಿ

ಪಾಶ್ಚಾತ್ಯರಲ್ಲಿ ಹೆಚ್ಚು ಜನರು ಕರ್ಮಸಿದ್ಧಾಂತವನ್ನೂ ಪುನರ್ಜನ್ಮವನ್ನೂ ಒಪ್ಪಿಕೊಳ್ಳುವಂತಾಗಿದೆ. 'ಕರ್ಮ'ದ ಭಾವನೆ ಎಷ್ಟು ಸಾಮಾನ್ಯವಾಗಿದೆಯೆಂದರೆ "What to do, it is my Karma" ಎಂದು ಅಲ್ಲಿನವರು ಹೇಳುವುದು ವಾಡಿಕೆಯಾಗಿದೆಯಂತೆ.

### ೪) ಕೇವಲ ನಂಬಿಕೆಯಲ್ಲ, ಅನುಭವ

ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಆಧ್ಯಾತ್ಮಿಕ ಪ್ರಜ್ಞಾತೀತ ಅನುಭವಕ್ಕೆ ಪ್ರಾಧಾನ್ಯ ನೀಡುವುದಿಲ್ಲ. ಭಗವಂತನಲ್ಲಿ ಮತ್ತು ಧಾರ್ಮಿಕ ಸಿದ್ಧಾಂತಗಳಲ್ಲಿ ನಂಬಿಕೆ ಇದ್ದು, ಒಳ್ಳೆಯ ಜೀವನ ನಡೆಸಿದರೆ ಸಾಕು. ವ್ಯಕ್ತಿಯು ಸ್ವರ್ಗಕ್ಕೆ ಹೋಗುತ್ತಾನೆ. ಆದರೆ ಹಿಂದೂಧರ್ಮದ ಪ್ರಕಾರ ಮೋಕ್ಷಪ್ರಾಪ್ತಿಗೆ ಭಗವದನುಭವ ಅಥವಾ ಆತ್ಮನ ಅನುಭವ ಆಗಲೇಬೇಕು. ಈ ವಿಚಾರವನ್ನು ಸ್ವಾಮಿ ವಿವೇಕಾನಂದರು ತುಂಬ ಶಕ್ತಿಪೂರ್ಣವಾಗಿ ಚಿಕಾಗೋ ಉಪನ್ಯಾಸದಲ್ಲಿ ಪ್ರತಿಪಾದಿಸಿದ್ದಾರೆ. ಇದರ ಪರಿಣಾಮವಾಗಿ ಜನರು ಧರ್ಮದಲ್ಲಿ ಅನುಭವಕ್ಕೆ ಹೆಚ್ಚು ಪ್ರಾಧಾನ್ಯ ನೀಡುವಂತಾಯಿತು. ಈ ಅನುಭವವನ್ನು ಪಡೆಯುವುದಕ್ಕೆ ಇರುವ ಅನೇಕ ಪೌರ್ವಾತ್ಯ ಸಾಧನ ವಿಧಾನಗಳು ಈಗ ಪಶ್ಚಿಮ ದೇಶಗಳಲ್ಲಿ ತುಂಬ ಪ್ರಚಾರದಲ್ಲಿವೆ.

### ೫) ಸಗುಣ ದೇವರಿಗಿಂತ ನಿರ್ಗುಣ ದೇವರಲ್ಲಿ ನಂಬಿಕೆ

ದೇವರು ಎಲ್ಲೋ ಮೋಡಗಳಾಚೆ, ಯಾವುದೋ ಮೇಲಿನ ಲೋಕದಲ್ಲಿ ಕುಳಿತು ಜಗತ್ತನ್ನಾಳುತ್ತಿರುವ ಸಕಲ ಸದ್ಗುಣ ಸಂಪನ್ನನಾದ ಒಂದು ವ್ಯಕ್ತಿಯಲ್ಲ; ಅವನು ಸರ್ವವ್ಯಾಪಿಯಾದ ಒಂದು ಚೈತನ್ಯ ತತ್ತ್ವ ಎಂಬ ನಂಬಿಕೆ ಈಗ ಜನರಿಗೆ ಹೆಚ್ಚು ಆಪ್ಯಾಯಮಾನವಾಗುತ್ತಿದೆ. ಸ್ವರ್ಗದ ದೇವರಿಗಿಂತ (Father in heaven) ನಮ್ಮೊಳಗಿರುವ ದೇವಸಾಮ್ರಾಜ್ಯ (Kingdom of God within) ಅತ್ಯಂತ ಮುಖ್ಯ.

### ೬) ಸಂಸ್ಥಾಬದ್ಧ ಧಾರ್ಮಿಕತೆಗಿಂತ ಸ್ವತಂತ್ರ ಆಧ್ಯಾತ್ಮಿಕ ಅನ್ವೇಷಣೆ

ಇತ್ತೀಚೆಗೆ ಜನರು ಆಧ್ಯಾತ್ಮಿಕತೆಯನ್ನು ಬಯಸುತ್ತಾರೆ, ಆದರೆ ಯಾವುದೇ ಧರ್ಮದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಇಷ್ಟಪಡುವುದಿಲ್ಲ. ಸ್ವಾಮಿ ವಿವೇಕಾನಂದರು ಇದನ್ನೇ ಬಯಸಿದ್ದರು. ಅವರು ಒಂದು ಕಡೆ ಹೇಳುತ್ತಾರೆ: "ನಾವು ಮಾನವಕೋಟಿಯನ್ನು ವೇದ, ಬೈಬಲ್, ಕೊರಾನುಗಳಿಂದಾಚೆ ತೆಗೆದುಕೊಂಡು ಹೋಗಬೇಕು. ಆದರೆ ಇದನ್ನು ಅವುಗಳ ಸಮನ್ವಯದ ಮೂಲಕ ಮಾಡಬೇಕು." ಇನ್ನೊಂದು ಕಡೆ ಅವರು ಹೇಳುತ್ತಾರೆ: "ಒಂದು ಧಾರ್ಮಿಕ ಸಂಪ್ರದಾಯದಲ್ಲಿ ಹುಟ್ಟುವುದು ಒಳ್ಳೆಯದು, ಆದರೆ ಅದರೊಳಗೇ ಸಾಯಬಾರದು." ಅಂದರೆ ಅವುಗಳನ್ನು ಮೀರಿ ಹೋಗಬೇಕು ಎಂದರ್ಥ. "ನಾನು ಆಧ್ಯಾತ್ಮಿಕ, ಧಾರ್ಮಿಕನಲ್ಲ" ಎಂದು ಈಗ ಅನೇಕರು ಹೇಳಿಕೊಳ್ಳುತ್ತಾರೆ. ನಾವು ಅಂತರಂಗದಲ್ಲಿ ಭಗವಂತನನ್ನು ನೆನೆಯುವುದಕ್ಕೆ, ಧ್ಯಾನ ಪ್ರಾರ್ಥನೆ ಜಪಾದಿಗಳನ್ನು ಮಾಡುವುದಕ್ಕೆ ಹಿಂದೂವಾಗಲಿ, ಕ್ರೈಸ್ತರಾಗಲಿ, ಮುಸ್ಲಿಮರಾಗಲಿ ಬೌದ್ಧರಾಗಲಿ ಅಥವಾ ಇನ್ನಾವುದೊ ಧರ್ಮೀಯರಾಗಲಿ ಆಗಿರಬೇಕಾಗಿಲ್ಲ. ಈ ರೀತಿಯ ಪ್ರವೃತ್ತಿಗೆ ಸ್ವಾಮಿ ವಿವೇಕಾನಂದರೇ ಮೂಲ ಕಾರಣ.

ಹೀಗೆ ಸ್ವಾಮಿ ವಿವೇಕಾನಂದರು ಧಾರ್ಮಿಕ ಚಿಂತನೆಯಲ್ಲಿ ಅಭೂತಪೂರ್ವ ಬದಲಾವಣೆಯನ್ನು ಉಂಟುಮಾಡಿದರು. ಮೇರಿ ಲೂಯಿಸ್ ಬರ್ಕ್ ಅವರ ಮಾತಿನೊಂದಿಗೆ ಈ ಲೇಖನವನ್ನು ಸಮಾಪ್ತಿಗೊಳಿಸೋಣ:

"ಬಹುಶಃ ಆ ಸಂದರ್ಭದಲ್ಲಿ (ಚಿಕಾಗೋ ಉಪನ್ಯಾಸದ ಸಂದರ್ಭದಲ್ಲಿ) ಹಿಂದೂಧರ್ಮವು ಸೃಷ್ಟಿಯಾದುದು ಮಾತ್ರವಲ್ಲ, ಇಡೀ ಪ್ರಪಂಚಕ್ಕಾಗಿ ಪಶ್ಚಿಮದಲ್ಲಿ ಒಂದು ಹೊಸ ಧರ್ಮಕ್ಕೆ ಹುಟ್ಟುಹಾಕಿದಂತಾಯಿತು."

## ಸ್ವಾಮೀಜಿ ಬಗ್ಗೆ ಶ್ರೀಮಾತೆ



ನರೇನ್ ಜನನ ದಿವ್ಯವಾದದ್ದು. ಅವನು ಹುಟ್ಟಿನಿಂದಲೇ ಅತ್ಯಂತ ಪರಿಶುದ್ಧನಾದವನು. ಶ್ರೀರಾಮಕೃಷ್ಣರು ಅವನು ಋಷಿ ಎನ್ನುತ್ತಿದ್ದರು, ಮಹರ್ಷಿ ಎನ್ನುತ್ತಿದ್ದರು. ಅವನಲ್ಲಿ ತ್ಯಾಗ ತುಂಬಿ ತುಳುಕಾಡುತ್ತಿದ್ದರೂ, ಎಲ್ಲೆಡೆ ಹಬ್ಬುವಂತಹ ಪ್ರೇಮ ಅವನಲ್ಲಿದ್ದರೂ, ಅನಂತವಾದ ಆತ್ಮದಲ್ಲಿ ಒಂದಾಗಿ ದಿವ್ಯಾನಂದದಲ್ಲಿ ಮುಳುಗಿರುತ್ತಿದ್ದರೂ, ಅವನು ಇತರರ ಒಳಿತಿಗಾಗಿ ಮರುಗುತ್ತಿದ್ದ.. ಇತರರ ಸೇವೆ ಮಾಡುವುದಕ್ಕಾಗಿ ಅವನು ತನ್ನ ಪ್ರಾಣವನ್ನೇ ಸಮರ್ಪಿಸಿದ.. ಅವನನ್ನು ಶ್ರೀರಾಮಕೃಷ್ಣರು ವಿಶೇಷವಾಗಿ ಕರೆತಂದರು... ತಮ್ಮ ಅತ್ಯುನ್ನತ ಆದರ್ಶಗಳನ್ನು ಬೋಧಿಸುವುದಕ್ಕಾಗಿ, ಸಮಾಜವನ್ನು ಮೇಲೆತ್ತುವುದಕ್ಕಾಗಿ ಹಾಗೂ ಮನುಕುಲದ ಒಳಿತಿಗಾಗಿ.

* * *

ನರೇನ್ ಒರೆಯಿಂದ ಸೆಳೆದ ಖಡ್ಗದಂತೆ. ಅವನು ವಿದೇಶದಿಂದ ಹಿಂದಿರುಗಿದ ಮೇಲೆ ಹೇಳಿದ, "ಅಮ್ಮಾ, ನಿಮ್ಮ ಕೃಪೆಯಿಂದ ಈ ಯುಗದಲ್ಲಿ ನಾನು ಸಮುದ್ರವನ್ನು ಲಂಘಿಸಿ ಹೋಗಬೇಕಾಗಿ ಬರಲಿಲ್ಲ; ಅವರೇ ನಿರ್ಮಿಸಿದ ಹಡಗಿನಲ್ಲೇ ಹೋದೆ. ಅಲ್ಲೂ ನಾನು ಶ್ರೀರಾಮಕೃಷ್ಣರ ಮಹಿಮೆಯನ್ನು ನೋಡಿದೆ. ಅಲ್ಲಿ ನನ್ನಿಂದ ಎಷ್ಟೊಂದು ಜನ ಅವರ ಬಗ್ಗೆ ಕೇಳಿ ತಿಳಿದರು ಹಾಗೂ ಅತ್ಯಾಶ್ಚರ್ಯದಿಂದ ಅವರ ಭಾವವನ್ನು ಸ್ವೀಕರಿಸಿದರು!" ಎಂದು.

# ಚಿಕಾಗೋ ಸಮ್ಮೇಳನ ನಂತರ ಸ್ವಾಮೀಜಿ ಪ್ರಭಾವ

**ಎಸ್. ಎಸ್. ರಮೇಶ್**



ಸ್ವಾಮಿ ವಿವೇಕಾನಂದರು ಚಿಕಾಗೋದಲ್ಲಿ ನೀಡಿದ ಭಾಷಣದಿಂದ ಅಮೆರಿಕಾ, ಯೂರೋಪ್‌ಗಳಲ್ಲಿ ಪ್ರಸಿದ್ಧರಾದರು; ಅಂತೆಯೇ ಭಾರತದಲ್ಲೂ ಅವರ ಪ್ರಭಾವ ಅಸಾಧಾರಣವಾಗಿ ಉಂಟಾಯಿತು. ಮುಂದೆ ಭಾರತದ ಆಧ್ಯಾತ್ಮಿಕ ಪುನರುತ್ಥಾನದಲ್ಲಿ ಈ ಭಾಷಣಗಳ ಪಾತ್ರ ವಿಶೇಷ. ಈ ವಿಷಯವನ್ನು ಕುರಿತು ಬರೆದಿರುವ ಲೇಖಕರು ಮೈಸೂರು ರಾಮಕೃಷ್ಣ ವಿದ್ಯಾಶಾಲೆಯಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

ಗೀತಾಚಾರ್ಯನ ವಿಶ್ವರೂಪ ದರ್ಶನ ಮಾಡಲು ಸಾಮಾನ್ಯ ನಯನಗಳಿಗೆ ಸಾಧ್ಯವಾಗದು. ಭಗವಂತ ನುಡಿದ ಭಗವದ್ಗೀತೆ ಕೇಳಿ ಅರ್ಥ ಮಾಡಿಕೊಳ್ಳಲು ಸಂಸ್ಕಾರಬೇಕಾಗುತ್ತದೆ. ೧೮೯೩ನೇ ಸೆಪ್ಟೆಂಬರ್ ೧೧ರಂದು ಸೋಮವಾರ, ಸರ್ವಧರ್ಮ ಸಮ್ಮೇಳನದ ಬೃಹತ್ ವೇದಿಕೆಯ ಮೇಲೆ ವಿಶ್ವಮಾನವ ಸ್ವಾಮಿ ವಿವೇಕಾನಂದರು: ''ಅಮೆರಿಕದ ಸಹೋದರಿಯರೇ ಸಹೊದರರೇ'' ಎಂದು ವಾಕ್ಯ ಪೂರ್ಣಗೊಳಿಸುವ ಮುಂಚೆಯೇ, ಏಕಕಾಲದಲ್ಲಿ ವಿಭಿನ್ನ ಮನೋಧರ್ಮದ ಸುಮಾರು ನಾಲ್ಕುಸಾವಿರ ಮಂದಿ ಕರತಾಡನ ಮಾಡುತ್ತಾ ಅತ್ಯುತ್ಸಾಹದಿಂದ ಎದ್ದುನಿಂತರು. ಭೋಗವೇ ಜೀವನ ಎಂದು ನಂಬಿದ್ದ ಅಮೆರಿಕದ ಜನರ ಪ್ರತಿಕ್ರಿಯೆ ಸಹಜವಾಗಿ ಆಶ್ಚರ್ಯ ಉಂಟುಮಾಡುವುದು. ಅಮೆರಿಕದವರ ಮುಕ್ತ ಪ್ರಶಂಸೆ-ಉದಾರತೆ ನಿಜವಾಗಿಯೂ ಮೆಚ್ಚುವಂಥದ್ದೆ.

ಸ್ವಾಮಿ ವಿವೇಕಾನಂದರು ಪ್ರಚಂಡ ಯಶಸ್ಸು ಪಡೆದು ತಾಯಿನಾಡಿಗೆ ಮರಳಿದ ಸಂದರ್ಭದಲ್ಲಿ, ಕೊಲ್ಕತ್ತದ ಪ್ರಸಿದ್ಧ ದಿನ ಪತ್ರಿಕೆ 'ಇಂಡಿಯನ್ ಮಿರರ್'ನಲ್ಲಿ, ಸ್ವಾಮೀಜಿಯವರಿಗೆ ಅಭಿನಂದಿಸಬೇಕಾದ ಮಹತ್ವ ಕುರಿತು ಪ್ರಸ್ತಾವವಾಗಿತ್ತು. ೧೮೯೪ರ ಏಪ್ರಿಲ್ ೧೦ರಂದು. 'ಇಂಡಿಯನ್ ಮಿರರ್'ನಲ್ಲಿ ಪ್ರಕಟವಾಗಿದ್ದ, ಸಂಪಾದಕೀಯ ಗಮನಾರ್ಹವಾದುದು:

''ಪ್ರವಾದಿಯೊಬ್ಬನು ತನ್ನ ದೇಶದಲ್ಲೇ ಗೌರವಿಸಲ್ಪಡುವುದಿಲ್ಲ ಎಂಬ ಮಾತು, ನಮ್ಮ ಜೀವನದಲ್ಲೇ ಆಗಾಗ ಅನುಭವಕ್ಕೆ ಬರುವ ಸಾಮಾನ್ಯ ಸತ್ಯ. ಸ್ವಾಮಿ ವಿವೇಕಾನಂದರು ಅಮೆರಿಕಕ್ಕೆ ಭೇಟಿ ನೀಡಿರದಿದ್ದರೆ ಇಷ್ಟೊಂದು ಪ್ರಸಿದ್ಧರಾಗುತ್ತಿದ್ದರೋ ಇಲ್ಲವೋ ಅನುಮಾನ. ಶಿಕಾಗೋದ ಸರ್ವಧರ್ಮ ಸಮ್ಮೇಳನದಲ್ಲಿ ಹಿಂದೂ ಧರ್ಮದ ವ್ಯಾಖ್ಯಾನಕ್ಕಾಗಿ ಅವರಿಗೆ ಏನೇನು ಯಶಸ್ಸು ದೊರಕಿತೋ ಅದೆಲ್ಲಕ್ಕೂ ವಿಶಾಲಹೃದಯದ ಅಮೆರಿಕರನ್ನು ಅಭಿನಂದಿಸಬೇಕು...'' ಈ ಮಾತುಗಳು ಯಾಕೆ ಮುಖ್ಯವಾಗುವುದು ಎನ್ನುವುದಕ್ಕೆ, ಸಮಕಾಲೀನ ಸಂದರ್ಭದಲ್ಲಿ ಘನವಾದ ಯೋಜನೆಗಳಿಗೆ ಸಿಗುವ ನಮ್ಮವರ ಪ್ರತಿಕ್ರಿಯೆಗಳನ್ನು ಗಮನಿಸುವುದು ಸೂಕ್ತ. ದೂರದೃಷ್ಟಿಯಿಂದ ವಿಶಾಲಮನೋಭಾವದಿಂದ ಹಮ್ಮಿಕೊಂಡ ಧಾರ್ಮಿಕ ಕಾರ್ಯಕ್ರಮಗಳಿಗೆ ರಾಜಕೀಯ, ಜಾತಿ-ಭಾಷೆಗಳ ಲೇಪ ಕೊಟ್ಟು ಪ್ರಾರಂಭದಲ್ಲೇ ಮುರಟಿ ಹೋಗುವಂತೆ ಮಾಡುತ್ತಿರುವುದು ವಿಪರ್ಯಾಸವೇ ಸರಿ.

ಮಾತು ಮತ್ತು ಅದರ ಪರಿಣಾಮದ ಬಗ್ಗೆ ಪ್ರಜ್ಞಾವಂತರೆಲ್ಲಾ ಯೋಚಿಸುತ್ತಲೇ ಇರುತ್ತಾರೆ. ನಮ್ಮ ದೈನಂದಿನ ಜೀವನದಲ್ಲಿ, ಎಲೆಕ್ಟ್ರಾನಿಕ್ ಮಾಧ್ಯಮಗಳ ಮೂಲಕ ಸುರಿಯುತ್ತಿರುವ ರಾಶಿರಾಶಿ ಮಾಹಿತಿಗಳು, ಸಂದೇಶಗಳು ನಮ್ಮ ಮನದಲ್ಲೇ ಸ್ಥಿರವಾಗಿ ಉಳಿಯುವದಿಲ್ಲ. ಕೆಲವೇ ಕ್ಷಣಗಳಲ್ಲಿ ಅಳಿಸಿ ಹೋಗುತ್ತವೆ. ಆದರೆ ೧೨೫ ವರ್ಷಗಳ ಹಿಂದೆ ವಿಶ್ವವಿಜೇತ ಸ್ವಾಮಿ ವಿವೇಕಾನಂದರು ಆಡಿದ ಸಿಂಹವಾಣಿ ವಿವೇಕ ವಿಚಾರಗಳ ಚಿಂತನ-ಮಂಥನ ನಡೆಯುತ್ತಿರಲು ಕಾರಣವೇನಿರಬಹುದು? ಕಳೆದ ಒಂದು ಕಾಲು ಶತಮಾನದಿಂದ ನಿರಂತರವಾಗಿ ಪ್ರಭಾವ ಬೀರುತ್ತಿರಲು, ಆ ಭಾಷಣದಲ್ಲಿ ಅಂತಹ ಸಂಗತಿ ಏನಿದೆ ಎಂಬ ದೊಡ್ಡ ಪ್ರಶ್ನೆ ಎದುರಾಗುತ್ತದೆ. ಈ ಮಾತುಗಳಿಗೆ ಸ್ಪಷ್ಟ ಉತ್ತರಕ್ಕೆ ನಾವು, ಸ್ವಾಮಿ ವಿವೇಕಾನಂದರು ಅವರ ಸ್ಫೂರ್ತಿಯಾಗಿದ್ದ ಗುರು ಶ್ರೀ ರಾಮಕೃಷ್ಣರ ಬಗ್ಗೆ ಭಕ್ತಿ-ಗೌರವಗಳಿಂದ ಬರೆದ, 'ನನ್ನ ಗುರು

ದೇವ' ಲೇಖನದಲ್ಲಿನ ಕೆಲವು ಮಾತುಗಳನ್ನು ಗಮನಿಸಬೇಕು. ''ಅವರು ಆಡಿದ ಪ್ರತಿನುಡಿಯಲ್ಲಿಯೂ ಕಿಡಿಯಿತ್ತು. ಅದು ನೇರವಾಗಿ ಕೇಳುವವರ ಎದೆಯನ್ನು ಸೇರುತ್ತಿತ್ತು . ನಾವು ಮಾತ ನಾಡುವ ವಿಷಯವಲ್ಲ ಮುಖ್ಯ, ರೀತಿಯಲ್ಲ ಮುಖ್ಯ, ಹೇಳುವ ಮನುಷ್ಯನ ವ್ಯಕ್ತಿತ್ವ. ಅವನಾಡುವ ಪ್ರತಿಯೊಂದು ಮಾತಿಗೂ ಶಕ್ತಿಯನ್ನು ನೀಡುವುದು. ಯಾರು ತಮ್ಮ ಮಾತಿನಲ್ಲಿ ವ್ಯಕ್ತಿತ್ವವನ್ನು ತುಂಬಬಲ್ಲರೋ ಆ ನುಡಿಯು ಪರಿಣಾಮಕಾರಿ ಯಾಗುವುದು. ಆದರೆ ಅಲ್ಲಿ.... ಮಹಿಮಾತಿಶಯವಿರಬೇಕು. ಬೋಧನೆಯೆಲ್ಲ ದಾನದ ಮತ್ತು ಸ್ವೀಕಾರದ ಮೇಲೆ ನಿಂತಿದೆ. *(ಕೃತಿಶ್ರೇಣಿ, ಸಂ. ೭, ಪು.ಸಂ. ೧೪೦-೧೪೧).*

ಸ್ವಾಮಿ ವಿವೇಕಾನಂದರ ಘನವಾದ ವ್ಯಕ್ತಿತ್ವ ಮುಖ್ಯವಾಗಿ ಅವರ ಶುದ್ಧಚಾರಿತ್ರ್ಯ ಅವರಾಡಿದ ಮಾತುಗಳ ಹಿಂದೆ ದೊಡ್ಡ ಚೈತನ್ಯವಾಗಿದೆ. ಸ್ವಾರ್ಥ ಅಸೂಯೆ ಸಂಕುಚಿತ ಮನೋಭಾವ ದಿಂದ ದೂರವಾಗಿದ್ದ ಆ ಸಭೆಯ ಸಹೃದಯರು ವಿವೇಕವಾಣಿಗೆ ಮುಕ್ತವಾಗಿ ಸ್ಪಂದಿಸಿದರು. ಉತ್ತಮವಾದ ಬೀಜ-ಯೋಗ್ಯ ಪರಿ ಸರ, ಸಹಜವಾಗಿಯೇ ಬೃಹತ್ ವೃಕ್ಷ ಬೆಳೆಯಿತು.

ಚಿಕಾಗೋ ಭಾಷಣ ತಾಯಿನಾಡಿನಲ್ಲಿ ಹಾಗೂ ವಿದೇಶಗಳಲ್ಲಿ ದೊಡ್ಡ ಪ್ರಮಾಣದ ಪ್ರಭಾವ ಬೀರುತ್ತಿರುವ ಹಿಂದಿನ ಅತಿಮುಖ್ಯ ಕಾರಣದ ಬಗ್ಗೆ ಚರ್ಚಿಸಿದೆ. ದಾನ-ಸ್ವೀಕಾರ ಎರಡೂ ಘನ ವಾದ್ದು.

ವಿಶ್ವದ ಇತಿಹಾಸದಲ್ಲೇ ಸುವರ್ಣ ಅಕ್ಷರಗಳಲ್ಲಿ ಬರೆದಿಡ ಬೇಕಾದ ದಿನಾಂಕ, ೧೧ ಸೆಪ್ಟೆಂಬರ್ ೧೮೯೩. ಇಡೀ ವಿಶ್ವ ನಿಬ್ಬೆರ ಗಾಗಿ ಹಿಂದೂಧರ್ಮದ ಕಡೆ ನೋಡುವಂತೆ ಮಾಡಿದ ದಿನ. ಪ್ರಚಂಡ ಯಶಸ್ಸು ಪಡೆದ ವೇದಾಂತ ಕೇಸರಿ ವಿವೇಕಾನಂದರು ೧೮೯೭ನೇ ಇಸವಿಯ ಜನವರಿ ೨೬ರಂದು ತಮ್ಮ ಪವಿತ್ರ ತಾಯಿ ನಾಡಿಗೆ ಮರಳಿದ ಶುಭದಿನ. ಸುಮಾರು ಮೂರು ಕಾಲು ವರ್ಷ ಸ್ವಾಮೀಜಿಯವರು ಅಮೆರಿಕಾದ ಹಲವಾರು ಪ್ರದೇಶಗಳಲ್ಲಿ, ಇಂಗ್ಲೆಂಡಿನಲ್ಲಿ, ಭಾರತೀಯ ಆಧ್ಯಾತ್ಮಿಕ ಶ್ರೀಮಂತ ಪರಂಪರೆಯ ಬಗ್ಗೆ ಹಲವಾರು ಮೌಲಿಕವಾದ ಉಪನ್ಯಾಸಗಳನ್ನು ಕೊಟ್ಟರು. ಲಕ್ಷಾಂತರ ಜನ ಹಿಂದೂಧರ್ಮದ ಉದಾತ್ತ ಚಿಂತನೆಗಳನ್ನು ತಿಳಿಯುವಂತೆ ಮಾಡಿದರು. ಹಿಂದೂಧರ್ಮ ನಿಜವಾಗಿಯೂ ವಿಶ್ವಧರ್ಮ ಎಂಬುದನ್ನು ವಿರೋಧಿಗಳು ಒಪ್ಪುವಂತೆ ಮಾಡಿದ್ದು ವಿವೇಕಾನಂದರ ದೊಡ್ಡಸಾಧನೆ.

ಸರ್ವಧರ್ಮ ಸಮ್ಮೇಳನ ಮುಕ್ತಾಯ ಸಮಾರಂಭದಲ್ಲಿ ಸ್ವಾಮಿ ವಿವೇಕಾನಂದರು ಆಡಿದ ಮಾತುಗಳು ಎಲ್ಲಾ ಕಾಲಕ್ಕೂ ಎಲ್ಲ ದೇಶಗಳಿಗೂ ಶಾಶ್ವತವಾಗಿ ಅನ್ವಯವಾಗುವಂತವು. ಆ ಮಹಾನ್ ಮಾನವತಾವಾದಿ ಆಡಿದ ವಿವೇಕ ನುಡಿಗಳು: ''ಕ್ರೈಸ್ತ ನಾದವನು ಹಿಂದುವೋ ಬೌದ್ಧನೋ ಆಗಿ ಮತಾಂತರಗೊಳ್ಳ ಬೇಕಾಗಿಲ್ಲ; ಆದರೆ, ಪ್ರತಿಯೊಬ್ಬನೂ ಉಳಿದವರ ಉನ್ನತ ಭಾವನೆಗಳನ್ನು ಮೈಗೂಡಿಸಿಕೊಂಡು, ತನ್ನ ವೈಯಕ್ತಿಕತೆಯನ್ನು ಕಳೆದುಕೊಳ್ಳದೆ, ತನ್ನದೇ ಆದ ಬೆಳವಣಿಗೆಯ ನಿಯಮಾನುಸಾರ ವಾಗಿ ಬೆಳೆಯಬೇಕು. ಯಾರೆಷ್ಟೇ ವಿರೋಧಿಸಿದರೂ ಬಹು ಶೀಘ್ರದಲ್ಲೇ ಪ್ರತಿಯೊಂದು ಧರ್ಮದ ಧ್ವಜದ ಮೇಲೂ 'ಯುದ್ಧ ವಲ್ಲ ಸಹಕಾರ', 'ನಾಶವಲ್ಲ ಸ್ವೀಕಾರ', 'ವೈಮನಸ್ಯವಲ್ಲ, ಶಾಂತಿ-ಸಮನ್ವಯ ಎಂದು ಬರೆಯಲಾಗುತ್ತದೆ.'' ಶ್ರೀರಾಮಕೃಷ್ಣ ಪರಮಹಂಸರು ನೀಡಿದ ಧರ್ಮ ಸಮನ್ವಯತೆಯ ಸಂದೇಶ ವನ್ನು ಅವರ ಹೆಮ್ಮೆಯ ಶಿಷ್ಯ ವಿಶ್ವವೇದಿಕೆಯ ಮೇಲೆ ಎಷ್ಟು ಪರಿ ಣಾಮಕಾರಿಯಾಗಿ ಮಂಡಿಸಿದರು! ಹೆಮ್ಮೆ ಎನಿಸುವುದು.

ಚಿಕಾಗೋದ ಅದ್ಭುತ ಯಶಸ್ಸಿನ ವರದಿಗಳು ಭಾರತದ ಪತ್ರಿಕೆ ಗಳಲ್ಲಿಯೇ ಪ್ರಕಟವಾಗುತ್ತಿದ್ದವು. ಭಾರತದ ಯುವ ಸಂನ್ಯಾಸಿ ಸ್ವಾಮಿ ವಿವೇಕಾನಂದರು ವಿದೇಶಗಳಲ್ಲಿ ಹಿಂದೂಧರ್ಮದ ಉದಾತ್ತ ಚಿಂತನೆಗಳನ್ನು ಸಮರ್ಥವಾಗಿ ಮಂಡಿಸುತ್ತಿದ್ದಾರೆ ಹಾಗೂ ವಿದೇಶೀ ಯರು ಸ್ವಾಮೀಜಿಯವರಿಗೆ, ಅವರು ಹೇಳಿದ ಮಾತುಗಳಿಗೆ ಅತ್ಯುತ್ತಮವಾದ ಗೌರವ ತೋರುತ್ತಿರುವುದು ನಮ್ಮವರಿಗೆ ಕ್ರಮೇಣ ತಿಳಿಯುತ್ತಾ ಬಂದಿತು.

ಸ್ವಾಮಿ ವಿವೇಕಾನಂದರು ೧೮೯೭ ಜನವರಿ ೧೫ರಂದು ಕೊಲೊಂಬೊಗೆ ಆಗಮಿಸಿದರು. ಅಂದಿನಿಂದ ಭಾರತಾಂಬೆಯ ಹೆಮ್ಮೆಯ ಸುಪುತ್ರನಿಗೆ ರಾಜೋಚಿತ ಸ್ವಾಗತ ಸಮಾರಂಭಗಳು, ಭವ್ಯ ಮೆರವಣಿಗೆಗಳು, ಅಭಿಮಾನದ ಗೌರವಗಳ ಬಿನ್ನವತ್ತಳೆಗಳ ಮಹಾಪೂರವೇ ಅರ್ಪಿತವಾಯಿತು. ಭಾರತೀಯರ ಆನಂದಕ್ಕೆ ಮೇರೆಯೇ ಇರಲಿಲ್ಲ. ಈ ಹಿಂದೆ ಕೆಲವೇ ವರ್ಷಗಳ ಹಿಂದೆ ವಿವೇಕಾನಂದರು ಕಷ್ಟಗಳಿಂದ ಒಂಟಿಯಾಗಿ ಕಾಲುನಡಿಗೆಯಿಂದ ದೇಶದ ಹಲವಾರು ಭಾಗಗಳನ್ನು ಸುತ್ತಿದ್ದರು. ಆಗ ಅವರು ಅನಾಮಿಕರು. 'ಸುಖ-ದುಃಖಗಳನ್ನು ಸಮಭಾವದಿಂದ ಸ್ವೀಕ ರಿಸು', ಎಂಬ ಶ್ರೀಕೃಷ್ಣನ ಸಂದೇಶಕ್ಕೆ ವಿವೇಕಾನಂದರು ಉತ್ತಮ ನಿದರ್ಶನ.

ಸ್ವಾಮೀಜಿಯವರು ಅಭಿಮಾನದ ಬಿನ್ನವತ್ತಳೆಗಳಿಗೆ ಪ್ರತಿ ಕ್ರಿಯೆ ನೀಡುವ ಎಲ್ಲಾ ಸಮಯದಲ್ಲೂ ಧರ್ಮಜಾಗೃತಿ, ನಾವು ಮಾಡಬೇಕಾದ ಕರ್ತವ್ಯಗಳು. ವೇದಾಂತದ ಮಹತ್ವಗಳನ್ನು ಹೇಳುವ ಜೊತೆ ಜೊತೆಗೆ ಭಾರತೀಯರಾದ ನಮ್ಮಲ್ಲಿನ ಸ್ವಾರ್ಥ, ಅಸೂಯೆ, ಸಣ್ಣತನಗಳ ಬಗ್ಗೆಯೂ ಯಾವ ಹಿಂಜರಿಕೆ ಇಲ್ಲದೆ ಸ್ಪಷ್ಟವಾದ ಮಾತುಗಳಲ್ಲಿ ಅವರು ಎಚ್ಚರಿಸುತ್ತಿದ್ದರು.

ಚಕ್ರವರ್ತಿ ರಾಜಗೋಪಾಲಾಚಾರಿಯವರು ಹೇಳಿದ 'ಸ್ವಾಮಿ ವಿವೇಕಾನಂದರು ಹಿಂದೂಧರ್ಮವನ್ನು ರಕ್ಷಿಸಿದರು. ಅವರು ಬರದೆ ಇದ್ದಿದ್ದರೆ ನಾವು ನಮ್ಮ ಧರ್ಮವನ್ನು ಕಳೆದು ಕೊಳ್ಳುತ್ತಿದ್ದವು. ಅಲ್ಲದೆ ನಮಗೆ ಸ್ವಾತಂತ್ರ್ಯವೂ ದೊರಕುತ್ತಿರಲಿಲ್ಲ' — ಈ ಮಾತು ಖಂಡಿತವಾಗಿಯೂ ಉತ್ಪ್ರೇಕ್ಷೆಯಲ್ಲ.

ಸ್ವಾಮಿ ವಿವೇಕಾನಂದರು ಅಮೆರಿಕೆಗೆ ಹೋಗಿದ್ದರ ಮುಖ್ಯ ಉದ್ದೇಶಗಳು: ಮೊದಲನೆಯದು ಭಾರತದ ಕೋಟ್ಯಂತರ ದೀನ ದರಿದ್ರರ ಸರ್ವತೋಮುಖ ಪ್ರಗತಿಗಾಗಿ ಸಂನ್ಯಾಸಿಗಳ ಸಂಘ

ವೊಂದನ್ನು ನಿರ್ಮಿಸಲು ಆರ್ಥಿಕನೆರವನ್ನು ಪಡೆಯುವುದು. ಮತ್ತೊಂದು ಉದ್ದೇಶ, ಹಿಂದೂಧರ್ಮದ ಅನರ್ಘ್ಯನಿಧಿಯಾದ ಆಧ್ಯಾತ್ಮಿಕತೆಯನ್ನು ಯಾವ ಭೇದಭಾವವಿಲ್ಲದೆ ಸಮಸ್ತರಿಗೂ ತಲುಪಿಸುವುದು.

ವಿವೇಕಾನಂದರಿಗೆ ವಿಸ್ತಾರವಾದ ಹಾಗೂ ಆಳವಾದ ಅಧ್ಯಯನದಿಂದ ಹಲವು ಶಾಸ್ತ್ರಗಳು ಕರಗತವಾಗಿದ್ದವು. ದೇಶವಿದೇಶಗಳಲ್ಲಿ ಸುದೀರ್ಘ ಪ್ರಯಾಣ ಮಾಡಿದ ನೈಜ ಲೋಕಾನುಭವವಿತ್ತು. ವೈಯಕ್ತಿಕ ಜೀವನದಲ್ಲಿ ಕಹಿ-ಸಿಹಿ ಘಟನೆಗಳಿಂದ ಮಾಗಿದ್ದರು. ಎಲ್ಲಕ್ಕಿಂತ ಪ್ರಮುಖವಾಗಿ ಮಾತೃಹೃದಯದ ಸ್ವಾಮೀಜಿಯವರಿಗೆ ಗುರುಮಹಾರಾಜರ ದಿವ್ಯಾನುಗ್ರಹವಿತ್ತು.

ಸ್ವಾಮೀಜಿಯವರು ಮದ್ರಾಸಿನಲ್ಲಿ ಮಾಡಿದ ಉಪನ್ಯಾಸ 'ಭಾರತೀಯ ಜೀವನದಲ್ಲಿ ವೇದಾಂತದ ಅನುಷ್ಠಾನದಲ್ಲಿ ಆಡಿರುವ ಸ್ಫೂರ್ತಿಯ ಕೆಲಕಿಡಿಗಳು ಹೀಗಿವೆ; ''ನಾವು ಶುದ್ಧ ಸೋಮಾರಿಗಳು, ಕೆಲಸ ಮಾಡುವುದಿಲ್ಲ. ನಮ್ಮಲ್ಲಿ ಒಗ್ಗಟ್ಟಿಲ್ಲ, ಅನ್ಯರನ್ನು ಪ್ರೀತಿಸುವುದಿಲ್ಲ; ನಾವು ಬರಿಯ ಸ್ವಾರ್ಥಿಗಳು. ಪರಸ್ಪರ ದ್ವೇಷಿಸದೆ, ಅಸೂಯೆ ಪಡದೆ ಮೂರು ಜನರು ಕೂಡ ಒಟ್ಟಿಗೆ ಕಲೆಯಲಾರೆವು. ಗಿಳಿಯಂತೆ ಮಾತನಾಡುವುದೊಂದು ನಮ್ಮ ಬಾಳಿನ ಚಾಳಿಯಾಗಿದೆ. ಏನನ್ನೂ ಅನುಷ್ಠಾನಕ್ಕೆ ತರುವುದಿಲ್ಲ. ಇದಕ್ಕೆ ಕಾರಣವೇನು? ಶಾರೀರಿಕ ದುರ್ಬಲತೆ. ಇಂತಹ ದುರ್ಬಲ ಮಿದುಳು ಏನನ್ನೂ ಸಾಧಿಸಲಾರದು.''

ಸ್ವಾಮಿ ವಿವೇಕಾನಂದರು ಆಡಿದ ಅಪಾರ ಕಾಳಜಿಯ ಮಾತುಗಳು ಇವು. ಮಾನವನ ಮತ್ತು ಆಧ್ಯಾತ್ಮಿಕತೆಯನ್ನು ತನ್ನ ಧ್ಯೇಯ ಮತ್ತು ಆದರ್ಶವಾಗಿಟ್ಟುಕೊಂಡು ರಾಮಕೃಷ್ಣ ಮಹಾಸಂಘವು ೧೮೯೭ ಮೇ ನಲ್ಲಿ ಸ್ವಾಮೀಜಿಯವರಿಂದ ಸ್ಥಾಪಿತವಾಯಿತು.

ಸ್ವಾಮೀಜಿಯವರು ಮೊದಲಿಗೆ ನಾಲ್ಕು ಬ್ರಹ್ಮಚಾರಿಗಳಿಗೆ ಸಂನ್ಯಾಸ ದೀಕ್ಷೆ ಕೊಟ್ಟರು. ಸೇವೆಯೇ ಜೀವನದ ಉಸಿರು ಎಂದು ದೃಢವಾಗಿ ನಂಬಿದ್ದ ವಿವೇಕಾನಂದರ ಮೊದಲ ನೇರ ನಾಲ್ಕು ಮಹಾನ್ ಶಿಷ್ಯರು ಸ್ವಾಮಿ ವಿರಜಾನಂದ, ಸ್ವಾಮಿ ನಿರ್ಭಯಾನಂದ, ಸ್ವಾಮಿ ಪ್ರಕಾಶಾನಂದ ಹಾಗೂ ಸ್ವಾಮಿ ನಿತ್ಯಾನಂದ.

ಶ್ರೀರಾಮಕೃಷ್ಣ ಆಶ್ರಮದ ಪರಮ ಪೂಜ್ಯ ಶ್ರೀ ಸ್ವಾಮಿ ಪುರುಷೋತ್ತಮಾನಂದ ಸ್ವಾಮೀಜಿಯವರ 'ವಿಶ್ವಮಾನವ ವಿವೇಕಾನಂದ' ಸ್ಫೂರ್ತಿ ಗ್ರಂಥದಲ್ಲಿ, 'ನಾಯಕತ್ವದ ದಾರಿ ನಯವಲ್ಲ', ಅಧ್ಯಾಯದಲ್ಲಿಬರುವಕೆಲವುಸಾಲುಗಳುಚಿಂತನಾರ್ಹವಾದವು:

''ಈ ಸಂನ್ಯಾಸ ದೀಕ್ಷೆ ಸಮಾರಂಭವು ಸ್ವಾಮೀಜಿಯವರ ಪಾಲಿಗೆ ತಮ್ಮ ಗೌರವಾರ್ಥವಾಗಿ ನಡೆದ ಎಲ್ಲ ಸಮಾರಂಭಗಳಿಗಿಂತಲೂ ಹೆಚ್ಚು ಸಂತೋಷಪ್ರದವಾಗಿತ್ತು. ಹೆಚ್ಚು ಹೃದಯಸ್ಪರ್ಶಿಯಾಗಿತ್ತು. ಏಕಿರಬಹುದು? ಇತರ ಸಮಾರಂಭಗಳಿಗೆ ಸಾವಿರಾರು ಜನ-ಲಕ್ಷಗಟ್ಟಲೆ ಜನ ಬಂದರು. ಗೌರವ ತೋರಿದರು ಚಪ್ಪಾಳೆ ತಟ್ಟಿದರು. ಬಿನ್ನವತ್ತಳೆಯನ್ನು ಓದಿದರು. ಹೊರಟುಬಿಟ್ಟರು. ಆದರೆ ಯಾರು ತಂದೆತಾಯಿ ಬಂಧುಬಳಗ ಇಷ್ಟಮಿತ್ರ, ಕಾಮ ಕಾಂಚನಗಳನ್ನು ತ್ಯಾಗ ಮಾಡಿ ಆತ್ಮಸಾಕ್ಷಾತ್ಕರಕ್ಕಾಗಿ, ಜಗತ್ತಿನ ಹಿತಕ್ಕಾಗಿ ಮುಂದೆ ಬಂದಿದ್ದಾರೋ ಅಂತಹ ಈ ನಾಲ್ಕು ಜನರೇ ಸರ್ವಶ್ರೇಷ್ಠರಲ್ಲವೆ? ಅಲ್ಲದೆ ಸ್ವಾಮೀಜಿಯವರ ಕೆಲಸ ವೇನಾದರೂ ಕೈಗೂಡಬೇಕಾದರೆ ತ್ಯಾಗಿಗಳಾದ ಜನರಿಂದ ಆಗ ಬೇಕಾಗಿದೆಯೇ ಹೊರತು ಹಾರ ಹಾಕಿ ಚಪ್ಪಾಳೆ ತಟ್ಟುವವರಿಂದಲ್ಲ.''

ಸ್ವಾಮಿ ವಿವೇಕಾನಂದರು ಇಡೀ ವಿಶ್ವಕ್ಕೆ ಕೊಟ್ಟು ಅನುಷ್ಠಾನಯೋಗ್ಯವಾದ ಆದರ್ಶ ಮಂತ್ರ: **''ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ''** - ಸ್ವತಃ ಮುಕ್ತಿಗಾಗಿ ಸಾಧನೆ ಮಾಡುವುದರ ಜೊತೆಜೊತೆಗೇ ಜಗತ್ತಿನ ಹಿತಕ್ಕಾಗಿಯೂ ದುಡಿಯಬೇಕು.'

ಭಾರತೀಯ ಸಮಾಜಕ್ಕೆ ಅಂಟಿಕೊಂಡಿರುವ ದೊಡ್ಡ ಜಾಡ್ಯ ಜಾತೀಯತೆ. ವಿವೇಕಾನಂದರಿಂದ ಸ್ಥಾಪಿತವಾದ 'ಶ್ರೀರಾಮಕೃಷ್ಣ ಆಶ್ರಮಕ್ಕೆ ಸಾಧುಗಳಾಗಿ ಸೇರಿ ತಮ್ಮ ಇಡೀ ಜೀವನ ಸೇವಾ ಕಾರ್ಯಕ್ಕೆ ಮುಡಿಪಾಗಿಸಲು-ಜಾತಿ-ವರ್ಗ ಭಾಷೆ-ಜನಾಂಗಗಳ ನಿರ್ಬಂಧವಿಲ್ಲ. ಇಡೀ ಭಾರತದೇಶದಲ್ಲಿ ಪ್ರಬಲ ಇಚ್ಛಾಶಕ್ತಿ ಇರುವ ಆಶ್ರಮದ ಸಾಧುಗಳು ನಿರಂತರವಾಗಿ ಮಾಡುತ್ತಿರುವ ದರಿದ್ರನಾರಾಯಯಣನ ಸೇವೆಯನ್ನು ಎಷ್ಟು ಪ್ರಶಂಸಿಸಿದರೂ ಕಡಿಮೆಯೇ ಆಗುತ್ತದೆ. ಸ್ವಾಮಿ ವಿವೇಕಾನಂದರು ಸ್ಥಾಪಿಸಿದ ಸಂಸ್ಥೆಗಳು ಹಾಗೂ ಅವರ ಮಾರ್ಗದರ್ಶನದಿಂದ ಪ್ರಾರಂಭವಾದ ಹಲವಾರು ಸಂಸ್ಥೆಗಳು ಶಿಕ್ಷಣ ಮತ್ತು ಆರೋಗ್ಯಕ್ಷೇತ್ರಗಳಲ್ಲಿ ಮಾಡುತ್ತಿರುವ ನಿಃಸ್ವಾರ್ಥಸೇವೆ ಸಮಾಜಕ್ಕೆ ದೊಡ್ಡಮಾದರಿಯಾಗಿದೆ.

ಸ್ವಾಮಿ ವಿವೇಕಾನಂದರಿಂದ ನೇರವಾಗಿ ಪ್ರಭಾವಕ್ಕೆ ಒಳಗಾಗಿ ತನ್ನ ದೇಶ ಬಿಟ್ಟು ಭಾರತೀಯರಿಗಾಗಿ ಜೀವನ ಮುಡಿಪಿಟ್ಟ ಸೋದರಿ ನಿವೇದಿತಾ ಹೆಣ್ಣುಮಕ್ಕಳಿಗೆ ನಿಜವಾದ ಆದರ್ಶವಾಗಿದ್ದಾರೆ.

ನಮ್ಮ ದೇಶದ ಅನರ್ಘ್ಯರತ್ನ ಆಧ್ಯಾತ್ಮಿಕತೆಯನ್ನು ಸಾಮಾನ್ಯರಲ್ಲಿಗೆ ತಲುಪಿಸಿದವರು ವಿವೇಕಾನಂದರು. ಕುವೆಂಪು ಅವರ ಮಾತೊಂದು ಚಿಂತನಾರ್ಹವಾದುದು: ''ಹಿಂದೂಧರ್ಮದ ವೈಶಾಲ್ಯದ ಮತ್ತು ವೇದಾಂತ ತತ್ತ್ವದ ಗಂಭೀರತೆಯ ಪರಿಚಯ ಸರ್ವಸಾಮಾನ್ಯವೂ ಸುಲಭಗ್ರಾಹ್ಯವಾಗಬೇಕಾದರೆ ಸ್ವಾಮೀಜಿಯವರ ಉಪನ್ಯಾಸಗಳನ್ನು ಬಿಟ್ಟರೆ ಬೇರಾವುದೂ ಇಲ್ಲ.'' ಆಧುನಿಕ ಭಾರತೀಯ ಸಾಹಿತ್ಯದ ಮೇಲೆ ದಿವ್ಯತ್ರಯರ ಪ್ರಭಾವ ಮಹತ್ತರವಾದುದು.

ಸ್ವಾಮಿ ವಿವೇಕಾನಂದರ ಭವ್ಯ ವ್ಯಕ್ತಿತ್ವ, ವಿಚಾರಧಾರೆಯ ಬಗ್ಗೆ ಎಷ್ಟು ಮಾತನಾಡಿದರೂ, ಈಗ ಪ್ರಾರಂಭಿಸುತ್ತಿದ್ದೇವೆ ಎಂಬ ಭಾವನೆ ಬರುತ್ತದೆ. ಆ ಎತ್ತರ-ವೈಶಾಲ್ಯತೆ ತಿಳಿಯುವ ಪ್ರಯತ್ನ ನಿರಂತರ ನಡೆಯುವಂಥದ್ದು. ದಿವ್ಯತ್ರಯರ ವಿಚಾರಗಳ ಅನುಸಂಧಾನವೇ ಸಾರ್ಥಕ ಬದುಕಿನ ಲಕ್ಷಣ. ಸ್ವಾಮಿ ವಿವೇಕಾನಂದರ ಸ್ಪಷ್ಟ ಭರವಸೆಯ ನುಡಿಗಳು ಇವು: ''ಎಲ್ಲೆಲ್ಲೂ ನಾನು ಮಾನವರಲ್ಲಿ ಚೈತನ್ಯ ತುಂಬುತ್ತ ಸಾಗುತ್ತೇನೆ; ಜನರನ್ನು ಸ್ಫೂರ್ತಿಗೊಳಿಸುತ್ತಲೇ ಇರುತ್ತೇನೆ! ಎಲ್ಲಿಯವರೆಗೆಂದರೆ ಸಮಸ್ತ ಜಗತ್ತೇ ತಾನು ಭಗವಂತನೊಂದಿಗೆ ಒಂದು ಎಂದು ಅರಿತುಕೊಳ್ಳುವವರೆಗೆ!''

# 125 ವರ್ಷಗಳಾದರೂ ಮರೆಯದ ಚಿಕಾಗೊ ಭಾಷಣ

**ಪ್ರೊ. ಕೆ.ಬಿ. ಪ್ರಭುಪ್ರಸಾದ್**

ಪ್ರಪಂಚದಲ್ಲಿ ಎಷ್ಟೋ ಮಂದಿ ಮಹಾಮಹಿಮರು ಆಗಿ ಹೋದರು; ಅವರೊಂದಿಗೆ ಅವರ ಕಾರ್ಯಗಳೂ ಮಸುಕಾಗುವುವು. ಆದರೆ ೧೨೫ ವರ್ಷಗಳ ನಂತರವೂ ಮರೆಯಲಾಗದ ಭಾಷಣ ಸ್ವಾಮಿ ವಿವೇಕಾನಂದರದು. ಅವರ ಚಿಕಾಗೋ ಭಾಷಣದ ಮಹಿಮೆಯನ್ನು ಕುರಿತು ಬರೆದಿರುವ ಲೇಖಕರು ನಿವೃತ್ತ ಪ್ರಾಧ್ಯಾಪಕರು. ಉತ್ತಮ ವಿದ್ವಾಂಸರೂ, ಲೇಖಕರೂ, ಗೀತರಚನಕಾರರೂ ಆಗಿರುವ ಅವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.



ಇತ್ತೀಚೆಗೆ ಸೆಪ್ಟೆಂಬರ್ ೧೧ನೇ ದಿನವನ್ನು ಸ್ವಾಮಿ ವಿವೇಕಾನಂದರು ಅಮೆರಿಕಾದ ಚಿಕಾಗೊದಲ್ಲಿ ನಡೆದ ವಿಶ್ವದ ಸರ್ವಧರ್ಮಗಳ ಪ್ರಪ್ರಥಮ ಸಮ್ಮೇಳನದಲ್ಲಿ ನೀಡಿದ ಭಾಷಣದ ೧೨೫ನೆ ವಾರ್ಷಿಕ ಸ್ಮರಣೆಯಾಗಿ ಲೋಕಾದ್ಯಂತ ಬಹು ಸಂಭ್ರಮದಿಂದ ಆಚರಿಸಲಾಯಿತು. ಸಾಮಾನ್ಯವಾಗಿ ಮಹಾಪುರುಷರ ಜಯಂತಿಯನ್ನು ಅವರ ಪುಣ್ಯಸ್ಮರಣೆಯಾಗಿ ಆಚರಿಸುವುದು ವಾಡಿಕೆ. ಆದರೆ ಒಂದು ಭಾಷಣದ, ಅದೂ ಕೇವಲ ಹತ್ತು ನಿಮಿಷ ಮಾತನಾಡಿದುದನ್ನು ಇಂದಿಗೂ ಮರೆಯದೆ, ಅದರ ೧೨೫ನೇ ವರ್ಷದ ಸಂಸ್ಮರಣೆಯಾಗಿ ಜಗತ್ತಿನ ಹಲವಾರು ಕಡೆ ಉತ್ಸಾಹದಿಂದ ಆಚರಿಸುತ್ತಿರುವುದು ಪರಮಾಶ್ಚರ್ಯಕರವಾದ ಸಂಗತಿ. ಪ್ರಾಯಶಃ ಇದೊಂದೇ ಭಾಷಣ ಇಂಥಾ ಹೆಗ್ಗಳಿಕೆಗೆ ಪಾತ್ರವಾಗಿರುವಂತಹದು. ಈ ಅತ್ಯಲ್ಪ ಅವಧಿಯ ಉಪನ್ಯಾಸವನ್ನು ಮಾಡಿದವರು ಅಂದು ಇನ್ನೂ ಹೆಸರು ಮಾಡಿರದ ಒಬ್ಬ ಭಾರತೀಯ ವ್ಯಕ್ತಿ . ಈ ಉಪನ್ಯಾಸವನ್ನು ಮಾಡಿದ ನಂತರ ಜಗತ್ಪ್ರಸಿದ್ಧರಾದರು. ಅವರು ಬೇರೆ ಯಾರೂ ಅಲ್ಲ. ಸರ್ವ ಧರ್ಮಸಮನ್ವಯಾಚಾರ್ಯರೂ ಅವತಾರ ವರಿಷ್ಠರೂ ಆದ ಶ್ರೀರಾಮಕೃಷ್ಣ ಪರಮಹಂಸರ ಪರಮ ಪ್ರಿಯಶಿಷ್ಯ ನರೇಂದ್ರನಾಥ ದತ್ತ, ಸ್ವಾಮಿ ವಿವೇಕಾನಂದರು ಎಂದು ಲೋಕ ತಿಳಿಯಿತು. ಅಂದಿನ ಅಮೆರಿಕಾದ ಪ್ರಮುಖ ಪತ್ರಿಕೆಗಳಲ್ಲೆಲ್ಲ ಸ್ವಾಮೀಜಿಯ ಭವ್ಯ ಭಾವಚಿತ್ರ ಮತ್ತು ಅವರ ಉಪನ್ಯಾಸದ ಬಗ್ಗೆ ಪ್ರಶಂಸೆಯೆ.

೧೮೯೩ನೇ ಸೆಪ್ಟೆಂಬರ್ ೧೧, ಸೋಮವಾರ ಬೆಳಿಗ್ಗೆ ೧೦ ಘಂಟೆಗೆ ಸರಿಯಾಗಿ ಜಗತ್ತಿನ ಎಲ್ಲ ಧರ್ಮಗಳ ಸಮ್ಮೇಳನ ಪ್ರಾರಂಭವಾಯಿತು. ಎಲ್ಲ ಧರ್ಮಗಳ ಅಧಿಕೃತ ಪ್ರತಿನಿಧಿಗಳು ವೇದಿಕೆಯ ಮೇಲೆ ಆಸೀನರಾಗಿದ್ದರು ಇವರೆಲ್ಲರ ನಡುವೆ, ಬಾಸ್ಟನ್ನಿನ ಹಾರ್ವರ್ಡ್ ಯೂನಿವರ್ಸಿಟಿಯ ಗ್ರೀಕ್ ಭಾಷಾ ಪ್ರೊಫೆಸರ್ ಡಾ. ರೈಟ್, ''ನಮ್ಮ ಎಲ್ಲ ವಿದ್ವಾಂಸ ಪ್ರಾಧ್ಯಾಪಕರನ್ನು ಒಟ್ಟುಗೂಡಿಸಿದರೂ ಅವರೆಲ್ಲರ ವಿದ್ವತ್ತಿಗಿಂತಲೂ ಹೆಚ್ಚು ವಿದ್ವತ್ ಇರುವ ಈ ವ್ಯಕ್ತಿಯನ್ನು ತಡವಾದರೂ ಈಗ ಸರ್ವಧರ್ಮ ಸಮ್ಮೇಳನದಲ್ಲಿ ಹಿಂದೂಧರ್ಮದ ಪ್ರತಿನಿಧಿಯಾಗಿ ಸೇರಿಸಿಕೊಳ್ಳಿ'' ಎಂದು ಸಮ್ಮೇಳನದ ಆಯ್ಕೆ ಸಮಿತಿಯ ಅಧ್ಯಕ್ಷ ಡಾ.ಬರೋಸ್‌ರಿಗೆ ಖಾಸಾ ಪತ್ರ ಬರೆದರು. ಹೀಗೆ ಸ್ವಾಮೀಜಿ ಮತ್ತೊಬ್ಬ ಹಿಂದೂಧರ್ಮದ ಪ್ರತಿನಿಧಿಯಾಗಿ ಆಯ್ಕೆಯಾದರು. ಸ್ವಾಮೀಜಿ ಚಿಕಾಗೋ ನಗರಕ್ಕೆ ಹೋದಾಗ ಅವರ ತೇಜಸ್ಸನ್ನು ಗುರುತಿಸಿ ಸರ್ವವಿಧದಲ್ಲಿ ಸಹಾಯ ಮಾಡಿದ, ಸಭಾಂಗಣಕ್ಕೆ ಕರೆದೊಯ್ದು, ಶ್ರೀಮಂತ ಜಾರ್ಜ್ ಹೇಲ್‌ರ ಪತ್ನಿ ಶ್ರೀಮತಿ ಎಲೆನ್ ಹೇಲ್‌ರನ್ನೂ ಇಲ್ಲಿ ಕೃತಜ್ಞತೆಯಿಂದ ನೆನೆಯಬೇಕು.



೧೭ ದಿನಗಳು ನಡೆದ ಈ ವೈಭವಪೂರ್ಣ ಸಮ್ಮೇಳನ ಮೊದಲು ಸುಮಾರು ನಾಲ್ಕು ಸಾವಿರ ಜನ ಕುಳಿತುಕೊಳ್ಳಲು ಅವಕಾಶವಿದ್ದ ''ಹಾಲ್ ಆಫ್ ಕೊಲಂಬಸ್'' ಸಭಾಭವನದಲ್ಲಿ, ಬರಬರುತ್ತ ಜನ ಹೆಚ್ಚಾದರೆಂದು ನಾಲ್ಕನೆ ದಿನ ಪಕ್ಕದ ''ಹಾಲ್ ಆಫ್ ವಾಷಿಂಗ್‌ಟನ್'' ಎಂಬ ಭವನದಲ್ಲಿ ನಡೆಯತೊಡಗಿತು. ಮಹಾಮಹಾಮೇಧಾವಿಗಳೂ, ವಿದ್ವಾಂಸರೂ, ತೀಕ್ಷ್ಣ ವಿಮರ್ಶನಾದೃಷ್ಟಿಯ ಪ್ರಾಜ್ಞರೂ ಆದ ಸಭಿಕರು ಕಿಕ್ಕಿರಿದಿದ್ದರು. ಸುಮಾರು ಏಳು ಸಾವಿರಕ್ಕೂ ಹೆಚ್ಚು. ಸ್ವಾಮೀಜಿಯಂತಹ ಧೀಮಂತ ಧೈರ್ಯಶಾಲಿಯೂ nervous ಆಗುವಂತೆ ಆಯಿತು. ಅಲ್ಲದೆ ಮೊದಮೊದಲು ಮಾತಾಡಿದವರ ವಾಗ್ವೈಖರಿಯೂ ಅದಕ್ಕೆ ಕಾರಣ. ತಮ್ಮ ಹೆಸರನ್ನು ಕೂಗಿದಾಗ ''ಈಗ ಬೇಡ, ಅನಂತರ, ಅನಂತರ ಮಾತನಾಡುತ್ತೇನೆ.'' ಎನ್ನುತ್ತಿದ್ದ ಸ್ವಾಮೀಜಿ ಕಡೆಗೆ ಮುಂದಕ್ಕೆ ಹಾಕುವುದು ಸಾಧ್ಯವಿಲ್ಲ ಎಂದಾಗ ಎದ್ದು ನಿಂತು, ಮನದೊಳಗೆ ಸರ್ವವಿದ್ಯಾದೇವಿ, ವಾಗ್ದೇವಿ, ತಾಯಿ ಸರಸ್ವತಿಯನ್ನು ಪ್ರಾರ್ಥಿಸಿ, ಗುರು ಮಹಾರಾಜರನ್ನು, ಶ್ರೀಶಾರದಾ ಮಾತೆಯವರನ್ನು ಸ್ಮರಿಸಿ, ''ಅಮೆರಿಕಾದ ಸೋದರಿ-ಸೋದರರೆ'' ಎಂದು ಮಾತನ್ನು ಶುರು ಮಾಡಿದಾಗ, ಇನ್ನೊಂದು ಶಬ್ದವನ್ನು ಉಚ್ಚರಿಸುವ ಮುನ್ನವೆ ಇಡೀ ಸಭೆಯಲ್ಲಿ ವಿದ್ಯುತ್‌ಸಂಚಾರವಾದಂತಾಗಿ, ನೆರೆದ ಎಲ್ಲ ಸ್ತ್ರೀ-ಪುರುಷರೂ ತಮಗರಿವಿಲ್ಲದಂತೆ ಎದ್ದು ನಿಂತು ಜೋರಾಗಿ ಮತ್ತೆ ಮತ್ತೆ ಚಪ್ಪಾಳೆ ತಟ್ಟತೊಡಗಿದರು. ಪೂರ್ತಿ ಎರಡು ನಿಮಿಷ ಕಾಲ ಚಪ್ಪಾಳೆಯ ಸದ್ದು ಮೊಳಗಿತು. ಸಾಮಾನ್ಯವಾಗಿ ಇಂಗ್ಲೀಷಿನಲ್ಲಿ, ''Ladies and Gentlemen'' (ಮಹಿಳೆಯರೆ ಮತ್ತು ಮಹಾನೀಯರೇ) ಎಂದು ಸಂಬೋಧಿಸುವುದು ವಾಡಿಕೆ. ಹಾಗೆ ಮಾಡದೆ, ''ಅಮೆರಿಕದ ಸೋದರಿ ಸೋದರರೇ'' ಎಂದು ಸಂಬೋಧಿಸಿದ್ದರು. ಅದು ಅವರ ಹೃದಯಾಳದಿಂದ ಸಹಜವಾಗಿ ಬಂದಿತ್ತು . ಪ್ರೀತಿಯಿಂದ ತುಂಬಿತ್ತು . ಹಾಗೆಂದೇ ಎಲ್ಲರ ಹೃದಯಗಳನ್ನೂ ಮುಟ್ಟಿತ್ತು. ವಿಶ್ವದ ಮಾನವರೆಲ್ಲ ಒಂದೇ ಕುಟುಂಬದವರು ಎಂದು ಹೇಳುವ, ಉಪನಿಷದ್ ವಾಣಿ ''ವಸುಧೈವ ಕುಟುಂಬಕಂ'' ಎಂಬ ಮಾತು, ಅತ್ಯಂತ ಸಹಜವಾಗಿ ಭಾವ ತುಂಬಿ ಹೊಮ್ಮಿತು. ಸಭಿಕರು ಅದ್ಭುತವಾಗಿ ಪ್ರತಿಸ್ಪಂದಿಸುವಂತೆ ಮಾಡಿತ್ತು.

ಸ್ವಾಮೀಜಿಯ ಕಂಚು ಕಂಠ ಮೊಳಗಿತು, ''ಜಗತ್ತಿನ ಅತ್ಯಂತ ಪ್ರಾಚೀನವಾದ ಸನ್ಯಾಸಿ ವೃಂದದ ಪರವಾಗಿ, ಜೈನ-ಬೌದ್ಧಧರ್ಮಗಳು ಶಾಖೆಗಳಾಗಿರುವ ಆ ಮಾತೃಧರ್ಮದ ಪರವಾಗಿ, ಪ್ರಪಂಚದ ಕಿರಿಯ ರಾಷ್ಟ್ರ ಅಮೆರಿಕಾದ ಜನತೆಗೆ ಇಂಥಾ ಪ್ರೀತಿಯ ಸ್ವಾಗತಕ್ಕಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಯಾವ ಧರ್ಮ ಉಳಿದೆಲ್ಲ ಧರ್ಮಗಳನ್ನೂ ಗೌರವಿಸಿ ಒಪ್ಪಿಕೊಳ್ಳುವಂತಹ ಸಹಿಷ್ಣುತೆಯನ್ನು ಸಾರಿತೊ, ಯಾವ ಧರ್ಮ ನುಡಿದಂತೆ ನಡೆಯುವುದೇ ಶ್ರೇಷ್ಠ ಎಂಬ ಆಚರಣೆಗೆ ಒತ್ತುಕೊಟ್ಟಿತ್ತೊ ಆ ಧರ್ಮದ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ.'' ಹೀಗೆ ''ಹಿಂದೂ'' ಎಂಬ ಹೆಸರನ್ನೇ ಹೇಳದೆ ಆ ಧರ್ಮ ಎಂತಹ ಶ್ರೇಷ್ಠವಾದ ಜೀವನ ಶೈಲಿಯನ್ನು ಅನುಸರಿಸಿತು ಎಂದು ಸೂಚಿಸಿ, ''ಆ ಧರ್ಮದ ಪರವಾಗಿ ನಿಮ್ಮೆಲ್ಲರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಎಲ್ಲರ ಭಕ್ತಿಯುತ ನಮಸ್ಕಾರಗಳೂ, ನದಿಗಳಂತೆ ಎಲ್ಲೆಲ್ಲಿಂದ ಹುಟ್ಟಿ ಹರಿಯಲಿ ಕಡೆಗೆ ಸಾಗರವನ್ನೆ ಸೇರುವಂತೆ, ನಾನಾ ನಾಮ, ರೂಪಗಳಲ್ಲಿ ಪೂಜಿಸಲ್ಪಡುವ ಏಕಮೇವಾದ್ವಿತೀಯವಾದ ಪರಮಾತ್ಮನ ಪಾದವನ್ನೇ ಸೇರುತ್ತವೆ... '' ಎಂದು ಹೇಳುತ್ತ ಸ್ವಾಮೀಜಿ ವಿಶ್ವಮಾನವ ಧರ್ಮದ ಲಕ್ಷಣಗಳನ್ನು ಮುಂದಿಟ್ಟರು.

ಎಲ್ಲ ಧರ್ಮಗಳೂ ಒಂದೇ ಪರಮಸತ್ಯದೆಡೆಗೆ ಕರೆದೊಯ್ಯುವ ವಿವಿಧ ಪಥಗಳು, ಎಷ್ಟು ಮತಗಳೋ ಅಷ್ಟು ಪಥಗಳು, ಎಂದು ತಾವೇ ಸ್ವತಃ ಒಂದೊಂದು ಧರ್ಮವನ್ನೂ ಸಾಧನೆ (ಪ್ರಯೋಗ) ಮಾಡಿ ವೈಜ್ಞಾನಿಕ ಜಗತ್ತಿಗೆ ತೋರಿಸಿದ, ಸರ್ವಧರ್ಮ ಸಮನ್ವಯದ ಸಂದೇಶವನ್ನು ನೀಡಿದ ಅವತಾರ ವರಿಷ್ಠರಾದ ಶ್ರೀರಾಮಕೃಷ್ಣ ಪರಮಹಂಸರ ಪರಮಶಿಷ್ಯರಲ್ಲವೇ, ನರೇಂದ್ರನಾಥ ದತ್ತ , ಸ್ವಾಮಿ ವಿವೇಕಾನಂದರೆಂದೇ ಪ್ರಸಿದ್ಧರಾದವರು? ಅದುವರೆಗೆ ಮಾತಾಡಿದ ಬೇರೆ ಬೇರೆ ಧರ್ಮಗಳ ಪ್ರತಿನಿಧಿಗಳು ತಮ್ಮ ತಮ್ಮ ಧರ್ಮವನ್ನೇ ಸರ್ವಶ್ರೇಷ್ಠವಾದ ಧರ್ಮ ಎಂದು ಬಹು ಚೆನ್ನಾಗಿ, ಮನವೊಪ್ಪುವಂತೆ ಪ್ರತಿಪಾದಿಸಿದ್ದರು.

ವಿಶ್ವಧರ್ಮ ಸಮ್ಮೇಳನದ ಏರ್ಪಾಟು ಮತ್ತು ಉದ್ದೇಶ ಹೊರನೋಟಕ್ಕೆ ''ವಿಶ್ವ ಭ್ರಾತೃತ್ವದ ನಿರ್ಮಾಣ'' ಎಂದು ಪ್ರಕಟವಾಗಿದ್ದರೂ, ಅದರ ಗುಪ್ತ ಉದ್ದೇಶ, ಜಗತ್ತಿನ ಎಲ್ಲ ಧರ್ಮಗಳಿಗಿಂತಲೂ ಕ್ರೈಸ್ತ ಧರ್ಮವೇ ಶ್ರೇಷ್ಠವೆಂಬುದನ್ನು ಸಿದ್ಧಮಾಡಿ ತೋರಿಸಲೆಂದೇ. ಕ್ರೈಸ್ತೇತರ ಅನಾಗರಿಕರನ್ನು ಪ್ರದರ್ಶನ ಮಾಡುವುದೇ ಸಮ್ಮೇಳನವನ್ನು ಯೋಜಿಸಿದವರ ಉದ್ದೇಶವಾಗಿತ್ತು .

ಆದರೆ ಸ್ವಾಮೀಜಿಯವರ ಕಿರುಭಾಷಣ ಇದನ್ನು ಬುಡ ಮೇಲು ಮಾಡಿತ್ತು. ಹಿಂದಿನ ದಿನದವರೆಗೂ ಅನಾಮಧೇಯ ರಾಗಿದ್ದ ಸ್ವಾಮೀಜಿ, ಈ ಭಾಷಣದ ನಂತರ, ಇದ್ದಕ್ಕಿದ್ದಂತೆ ಲೋಕ ಪ್ರಸಿದ್ಧರಾಗಿದ್ದರು. ಅಮೆರಿಕಾದ ಪ್ರಮುಖ ಪತ್ರಿಕೆಗಳು ಮೇಲ್ಪುಟ ದಲ್ಲೇ ದೊಡ್ಡ ದೊಡ್ಡ ಅಕ್ಷರಗಳಲ್ಲಿ ಸ್ವಾಮೀಜಿಯವರ ಭಾಷಣ ವನ್ನು ಅವರ ಭಾವಚಿತ್ರವನ್ನೂ ಮುದ್ರಿಸಿ ಸ್ವಾಮೀಜಿಯನ್ನು ಅವರ ಭಾಷಣವನ್ನು ಹಾಡಿ ಹೊಗಳಿದ್ದವು.

ಸ್ವಾಮೀಜಿ ಅನೇಕ ಕಡೆ ಆಮಂತ್ರಿತರಾಗಿ ಹಿಂದೂಧರ್ಮ ಹಾಗೂ ಸಂಸ್ಕೃತಿಗಳ ಬಗ್ಗೆ ಮಾತನಾಡಿ ಅಮೆರಿಕನ್ನರಲ್ಲಿದ್ದ ತಪ್ಪು ತಿಳಿವಳಿಕೆಗಳನ್ನು ಹೋಗಲಾಡಿಸಿದರು. ಹಾಗೆಯೆ ಸ್ವಾಮೀಜಿ ಭಾರತದ ಹೀನ ಸ್ಥಿತಿಯನ್ನೂ, ದಟ್ಟದಾರಿದ್ರ್ಯ, ಅವಿದ್ಯೆ, ಅಜ್ಞಾನ ಗಳಿಂದಾಗಿರುವ ಜನಸಾಮಾನ್ಯರ ದುಸ್ಥಿತಿಯನ್ನೂ ಮನಕರಗು ವಂತೆ ಹೇಳಿ, ಭಾರತಕ್ಕೆ ಅಮೆರಿಕೆ ಕಳಿಸಬೇಕಾದುದು ಕ್ರೈಸ್ತಧರ್ಮ ಬೋಧಕರನ್ನಲ್ಲ, ಮಾನವೀಯ ಆರ್ಥಿಕ ಸಹಾಯವನ್ನು, ಎಂದು ತಿಳಿಸಿದರು. ಇಷ್ಟಾದರೂ ಎಂಥಾ ಬಡವರಲ್ಲೂ, ಅವಿದ್ಯಾವಂತ ರಲ್ಲೂ ಧಮನಿಧಮನಿಗಳಲ್ಲಿ ಹರಿಯುತ್ತಿರುವುದು ಆಧ್ಯಾತ್ಮಿ ಕತೆಯೆ, ಭಾರತದ ಜೀವಾಳವೆ ಅಧ್ಯಾತ್ಮ ಎಂದು ಒತ್ತಿ ಹೇಳಿದರು.

ಇಷ್ಟುಹೊತ್ತಿಗಾಗಲೆ ''ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'' ಎಂಬ ಧ್ಯೇಯವಾಕ್ಯ, ಧ್ಯಾನ-ತಪಸ್ಸು-ಸಾಧನೆಗಳನ್ನು ಬದಿಗಿರಿಸಿ (ಇಲ್ಲವೆ ಅಂತರಂಗದಲ್ಲಿರಿಸಿ) ಹಸಿದ ಹೊಟ್ಟೆಗೆ ನೀಡ ಬೇಕಾದುದು ವೇದಾಂತವಲ್ಲ, ಮೊದಲು ಅನ್ನ, ವಸ್ತ್ರಗಳು, ಎಂಬ ಮಾನವೀಯ ಅಂತಃಕರಣ ಸ್ವಾಮೀಜಿಯವರೊಳಗೆ ಆಗಲೆ ಮೂಡಿತ್ತು. ಧರ್ಮದ ಮೂಲ, ದಯೆ, ಅನುಕಂಪೆ, ಮಾನವೀಯತೆ. ಮಾನವೀಯತೆ ಎಂದರೆ ಇತರರ ಬಗ್ಗೆ, ಅವರ ನೋವಿನ ಬಗ್ಗೆ ಕಾಳಜಿ. ನಿಸ್ವಾರ್ಥವಾದ ಸೇವೆಯೆ ಅದರ ಮಂತ್ರ. ಉಪಕಾರವಲ್ಲ, ಸಹಾಯವಲ್ಲ, ಸೇವೆ. ತನ್ನೊಳಗಿನ ದಿವ್ಯತ್ವವನ್ನೆ ಎಲ್ಲರಲ್ಲೂ ಗುರುತಿಸುವುದು. ಕಾಣುವುದು ಮೊದಲು ಅದನ್ನು ತನ್ನೊಳಗೇ ಗುರುತಿಸಿಕೊಳ್ಳವುದು. ಇತರರಿಗಾಗಿ ಬದುಕುವುದು. ಮೈಸೂರು ಮಹಾರಾಜರಾಗಿದ್ದ ಚಾಮರಾಜ ಒಡೆಯರಿಗೆ ಬರೆದ ಪತ್ರವೊಂದರಲ್ಲಿ ''The alone live who live for others, the rest are more than dead.''

ಪ್ರತಿಯೊಬ್ಬರಿಗೂ ತಮ್ಮೊಳಗಿನ ದೈವತ್ವವನ್ನು ಅರಿವು ಮಾಡಿ ಕೊಡುವವರೆಗೂ, ನೊಂದವರ ಕಣ್ಣೀರನ್ನೊರೆಸುವರೆಗೂ ನಾನು ಮುಕ್ತನಾಗಬಯಸುವುದಿಲ್ಲ ಎಂದು ಘೋಷಿಸಿದರು. ವೇದಾಂ ತದ ಸಾರವನ್ನು ಅರಗಿಸಿಕೊಂಡವರೆಲ್ಲ ಘೋಷಿಸುವ ಮಾತು ಇದು. ಇದೇ ಉಪನಿಷದ್‌ಸಾರದಿಂದ ಸ್ಫೂರ್ತಿತರಾದ ಕವಿ ರವೀಂದ್ರನಾಥ ಠಾಕೂರರು ವೈಜ್ಞಾನಿಕ ಹಾಗೂ ವೈಚಾರಿಕ ಜಗ ತ್ತಿನ ಪರವಾಗಿ ಒಂದು ಪ್ರಾರ್ಥನೆಯನ್ನು ಗೀತಾಂಜಲಿಯಲ್ಲಿ ಸೇರಿಸಿದರು:

Where the mind is without fear
and the head is held high;
Where knowledge is free;
Where the World has not been broken up
into fragments
By narrow domestic walls;
Where Words come out from the depth of truth
Where tireless striving stretchess its arms toward
perfection,
Where the clear stream of reason has not lost
its way
Into the dreary desert sand of dead habit
Where the mind is led froward by thee
Into ever-widening thought and action
Into that heaven of freedom, my Father,
let my country awake.

(ಎಲ್ಲಿ ಮನಸ್ಸು ನಿರ್ಭಯವಾಗಿರುತ, ತಲೆಯೆತ್ತಿ ಬಾಳಬಹುದೊ;
ಎಲ್ಲಿ ಜ್ಞಾನಕ್ಕೆ ಯಾವ ನಿರ್ಬಂಧವೂ ಇರದೊ,
ಎಲ್ಲಿ ಸಂಕುಚಿತ ಗೋಡೆಗಳ ಒಳಗೆ ಸಿಕ್ಕಿಕೊಂಡು ಜಗತ್ತು ತುಂಡು
ತುಂಡಾಗಿರದೊ,
ಎಲ್ಲಿ ಸತ್ಯದಾಳದಿಂದ ಮಾತು ಹೊರಹೊಮ್ಮುವುದೊ;
ಎಲ್ಲಿ ಪರಿಪೂರ್ಣತೆಯೆಡೆಗೆ ತೋಳು ಚಾಚಲು ದಣಿವಿಲ್ಲದ
ಹೋರಾಟ ನಿರಂತರವಾಗಿ ನಡೆಯುತಿಹುದೊ,
ಎಲ್ಲಿ ನಿರ್ಮಲವಾದ ವಿಚಾರವಾಹಿನಿ ದಾರಿತಪ್ಪಿ ಜಡ್ಡುಗಟ್ಟಿದ
ಸಂಪ್ರದಾಯಗಳ ಒಣ ಮರುಧರೆಯ ಮರಳಿನಲಿ
ಇಂಗಿ ಹೋಗದೊ,
ಎಲ್ಲಿ ಮನಸ್ಸು ನಿತ್ಯವಿಸ್ತಾರವಾಗುತ್ತಲೇ ಇರುವ ಆಲೋಚನೆ
ಮತ್ತು ಕ್ರಿಯಾಶೀಲತೆಗಳ ಕಡೆ ಮುನ್ನಡೆಸಲ್ಪಡುವುದೊ;
ಅಂಥ ಸ್ವಾತಂತ್ರ್ಯದ ಸ್ವರ್ಗದೊಳಗೆ ಓ ತಂದೆಯೆ,
ನನ್ನ ದೇಶ ಕಣ್ತೆರೆಯಲಿ !)

ವಿಜ್ಞಾನಮಯ ಕೋಶದಿಂದ ಹುಟ್ಟಿದ ಈ ಪ್ರಾರ್ಥನೆ ಒಬ್ಬ ದ್ರಷ್ಟಾರ ಕವಿಯದಷ್ಟೇ ಅಲ್ಲ, ಇದು ಪ್ರತಿಯೊಂದು ರಾಷ್ಟ್ರದ ಪ್ರಾರ್ಥನೆ. ಸಮಸ್ತ ಮಾನವ ಕುಲದ ಪ್ರಾರ್ಥನೆ. ಧರ್ಮ ಎಂದರೆ ಜಾತಿ ಅಲ್ಲ, ಮತ ಅಲ್ಲ, ಅರ್ಥಹೀನವಾದ ಪೂಜೆ, ಶಾಸ್ತ್ರ ವಿಧಿ ಗಳಲ್ಲ. ಮೂಢನಂಬಿಕೆಗಳೂ ಅಲ್ಲ. ಮೇಲು-ಕೀಳು ಎಂಬ ವರ್ಣ ಗಳಲ್ಲ. ಎಲ್ಲರ ಒಳಿತನ್ನೇ ಬಯಸುವ ಪ್ರೀತಿ. ತಮ್ಮೊಳಗಿನ ಆತ್ಮ ಮತ್ತು ಅದರ ಅಮೃತತ್ವವೊಂದೇ ಪರಮ ಸತ್ಯ ಎಂಬ ಅರಿವು. ಮಾನವ ಸ್ವಾರ್ಥಿಯಾಗದೆ ವಿಶ್ವಮಾನವನಾಗ ಬೇಕು. ಎಲ್ಲ ರಾಷ್ಟ್ರ ಗಳೂ ಭಗವತ್ಕೃಪೆಯಿಂದ ಪರಿವರ್ತಿತವಾಗಿ ಕವಿ ರವೀಂದ್ರರ ಪ್ರಾರ್ಥನೆಯನ್ನೀಡೇರಿಸುವ ಹಾಗೆ ಎಚ್ಚರವಾಗಬೇಕು.

''ಏಳಿ, ಎದ್ದೇಳಿ, ನಿಲ್ಲದಿರಿ ಗುರಿ ಮುಟ್ಟುವ ತನಕ'' **(ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ)** ಎಂಬ ಸ್ವಾಮಿ ವಿವೇಕಾ ನಂದರ ಕರೆಗೆ ಓಗೊಟ್ಟಾಗ ಮಾತ್ರ ಅವರ ಚಿಕಾಗೋ ಭಾಷಣದ ೧೨೫ನೆ ವರ್ಷದ ಸಂಭ್ರಮದ ಆಚರಣೆ ಅರ್ಥಪೂರ್ಣವಾಗುತ್ತದೆ. ❁

# ಚಿಕಾಗೋ ಉಪನ್ಯಾಸಗಳಲ್ಲಿ ಬಿಂಬಿಸಲ್ಪಟ್ಟ ವಿಶ್ವಧರ್ಮ ಸಾಮರಸ್ಯ

ಮಾತಾ ತ್ಯಾಗಮಯೀ

ಸ್ವಾಮೀಜಿ ಚಿಕಾಗೋ ಭಾಷಣಗಳಲ್ಲಿ ಪ್ರತಿಪಾದಿಸಿದ ಅನೇಕ ಅಂಶಗಳಲ್ಲಿ ಒಂದು ವಿಶ್ವಧರ್ಮ ಸಾಮರಸ್ಯ. ಈ ಕುರಿತು ಪ್ರಪಂಚದ ಇತಿಹಾಸದಲ್ಲೇ ಅಷ್ಟೊಂದು ವ್ಯಾಪಕವಾಗಿ ಚಿಂತಿಸಿದ ಮೊದಲ ದಾರ್ಶನಿಕರು ಸ್ವಾಮಿ ವಿವೇಕಾನಂದರು. ಈ ಕುರಿತು ಇಲ್ಲಿ ವಿವೇಚಿಸಿರುವ ಲೇಖಕಿ, ಚಳ್ಳಕೆರೆ ಶ್ರೀ ಶಾರದಾಶ್ರಮದ ಮುಖ್ಯಸ್ಥರು. ಉತ್ತಮ ಬರಹಗಾರರೂ, ಅನುವಾದಕರೂ, ವಾಗ್ಮಿಯೂ ಆಗಿರುವ ಅವರು ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ.




### ವಿಶ್ವಧರ್ಮ ಯಾವುದು?

''ಈ ಜಗತ್ತಿನಲ್ಲಿ ವಿಶ್ವಧರ್ಮ ಎನ್ನಿಸಿಕೊಳ್ಳುವಂಥದೇನಾದರೂ ಇದ್ದರೆ ಅದು ದೇಶಕಾಲಗಳ ಮಿತಿಯನ್ನು ಮೀರಿರಬೇಕು. ಅದು ತಾನು ಅನಂತವಾಗಿರಬೇಕಲ್ಲದೆ, ಅನಂತನಾದ ಭಗವಂತನನ್ನು ಸಾರಬೇಕು. ಆ ಧರ್ಮಭಾಸ್ಕರನ ಬೆಳಕು ಕೃಷ್ಣನ ಅನುಯಾಯಿಗಳ ಮೇಲೆ, ಕ್ರಿಸ್ತನ ಅನುಯಾಯಿಗಳ ಮೇಲೆ, ಪಾಪಿಗಳ ಮೇಲೆ, ಪುಣ್ಯವಂತರ ಮೇಲೆ — ಒಂದೇ ಸಮನಾಗಿ ಬೀಳಬೇಕು. ಅದು ವೈದಿಕವಾಗಲಿ, ಮಹಮ್ಮದೀಯವಾಗಲಿ, ಬೌದ್ಧವಾಗಲಿ ಅಥವಾ ಕ್ರೈಸ್ತವಾಗಲಿ ಆಗಿರದೆ ಇವೆಲ್ಲದರ ಸಮಗ್ರೀಕರಣವಾಗಿರಬೇಕು. ಅದು ಸುಧಾರಣೆ ಅಥವಾ ಅಭಿವೃದ್ಧಿಗೆ ಅಪಾರ ಅವಕಾಶವನ್ನು ಹೊಂದಿರಬೇಕು. ಅದು ಪಶುಸದೃಶ ಕಾಡು ಜನರಿಂದ ಹಿಡಿದು ಹೃದಯ ಬುದ್ಧಿಗಳ ತುತ್ತತುದಿಗೇರಿ ಸಾಮಾನ್ಯ ಮಾನವತೆಯ ಮೇರೆಯನ್ನೇ ಮೀರಿರುವ ಮಹಾ ಮಾನವನವರೆಗೆ ಸರ್ವರಿಗೂ ಆಶ್ರಯವನ್ನೀಯುವಂಥದಾಗಿರಬೇಕು. ವ್ಯಕ್ತಿ ತನ್ನ ನೈಜ ಸ್ವರೂಪವನ್ನು ಕಂಡುಕೊಳ್ಳುವಂತೆ ಮಾಡುವಲ್ಲಿ ಆ ಧರ್ಮದ ವಿಶಾಲ ಪಂಥಿಯು ಕೇಂದ್ರೀಕೃತವಾಗಿರಬೇಕು. ಅಂತಹ ಧರ್ಮವೊಂದನ್ನು ಕೊಡಿ. ಆಗ ಜಗತ್ತಿನ ರಾಷ್ಟ್ರಗಳೆಲ್ಲವೂ ಅದನ್ನು ಅನುಸರಿಸುವುವು.''

ಚಿಕಾಗೋದ ಸರ್ವಧರ್ಮ ಸಮ್ಮೇಳನದಲ್ಲಿ ವಿಶ್ವಧರ್ಮ ಸಾಮರಸ್ಯವನ್ನು ಕುರಿತು ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳಿವು.

### ವಿಶ್ವಧರ್ಮವನ್ನು ಮೊಳಗಿದ ಪ್ರವಾದಿ:

ಸರ್ವಧರ್ಮ ಸಮ್ಮೇಳನವು ಜಗತ್ತಿನ ಧರ್ಮಗಳ ಚರಿತ್ರೆಯಲ್ಲಿ ಜಗತ್ತು ಹಿಂದೆಂದೂ ಕಂಡಿರದ ಅಭೂತಪೂರ್ವ ಸಂಗತಿಯಾಗಿತ್ತು. ವಿವಿಧ ಧರ್ಮಪ್ರತಿನಿಧಿಗಳು ಒಟ್ಟಾಗಿ ಸೇರಿ ತಮ್ಮ ತಮ್ಮ ಧರ್ಮವನ್ನು ಕುರಿತು, ಸಹಸ್ರಾರು ಜನರೆದುರು ಮಾತನಾಡುವ ಅವಕಾಶ ಹಿಂದೆಂದೂ ಒದಗಿ ಬಂದಿರಲಿಲ್ಲ. ಅಂದಿನ ದಿನಗಳ ತೀವ್ರ ಅಸಹಿಷ್ಣುತೆಯ ಹಾಗೂ ಭೋಗವಾದದ ಉಚ್ಛ್ರಾಯ ದಿನಗಳಲ್ಲಿ ಇಂತಹ ಧರ್ಮಸಮ್ಮೇಳನವೊಂದು ನಡೆಯಬಹುದೆಂದು ಯಾರೂ ಊಹಿಸಲೂ ಸಾಧ್ಯವಿರಲಿಲ್ಲ. ಇನ್ನು ಸ್ವಾಮಿ ವಿವೇಕಾನಂದರು ಚಿಕಾಗೋ ಸಮ್ಮೇಳನಕ್ಕೆ ಹೋಗಿ 'ವಿಶ್ವಧರ್ಮ ಸಮನ್ವಯ' ದ ಮಾತುಗಳನ್ನು ಆಡದಿದ್ದಲ್ಲಿ ಆ ಸಮ್ಮೇಳನವು ಇತಿಹಾಸದ ಅಜ್ಞಾತ ಪುಟಗಳನ್ನು ಸೇರುತ್ತಿತ್ತೇ ಹೊರತು ಜನಮಾನಸದಲ್ಲಿ ಹಸಿರಾಗಿರಲು ಸಾಧ್ಯವಿರಲಿಲ್ಲ. ಸ್ವಾಮೀಜಿಯವರ ವಾಣಿಗಳಿಂದಲೇ ಆ ಸಮ್ಮೇಳನವು ಸರ್ವಧರ್ಮ ಸಮ್ಮೇಳನವಾಯಿತು. ಇಲ್ಲದಿದ್ದರೆ ಆ ಸಮ್ಮೇಳನವು ಆಯಾ ಧರ್ಮ ಪ್ರತಿನಿಧಿಗಳ 'ಸ್ವಧರ್ಮ ಪ್ರತಿಪಾದಕ ಸಭೆ' ಯಾಗುತ್ತಿತ್ತಷ್ಟೆ.

ಸರ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಿದ ಪ್ರತಿನಿಧಿಗಳು ಸಮನ್ವಯದ ಹೆಸರಿನಲ್ಲಿ ತಮ್ಮ ತಮ್ಮ ಮತಧರ್ಮವನ್ನೇ ಪ್ರತಿನಿಧಿಸಿದರು. ಸಮನ್ವಯದ ಮಾತೇ ಅವರಿಗೆ ನೆನಪಾಗಲಿಲ್ಲವೇ ಎಂಬುದು ಆಶ್ಚರ್ಯದ ಸಂಗತಿ. ಅವರು ತಮ್ಮ ತಮ್ಮ ಧರ್ಮವನ್ನು ಪರಿಚಯಿಸುವುದರ ಜೊತೆಗೆ ಹೆಚ್ಚೆಂದರೆ ಜಗತ್ತಿನಲ್ಲಿ ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಪರಸ್ಪರ ದೋಷಾರೋಪಣೆ, ಸ್ವಮತಾಭಿಮಾನ, ಹಾಗೂ ಮತಾಂಧತೆಗಾಗಿ ಬಹಳ ವ್ಯಥೆಪಟ್ಟರು. ಆದರೆ ತಮ್ಮ ಧರ್ಮದ ಬಾವಿಯನ್ನು ದಾಟಿ ಧರ್ಮಸಾಗರವನ್ನು ದರ್ಶಿಸಿ ಅದನ್ನು ಪ್ರತಿನಿಧಿಸುವ ಪ್ರಯತ್ನವನ್ನು ಸ್ವಾಮೀಜಿಯವರ ಹೊರತಾಗಿ ಬೇರೆ ಯಾರೂ ಮಾಡಲೇ ಇಲ್ಲ. ವಿಶ್ವದ ಘಟಾನುಘಟಿಗಳೆನ್ನಿಸಿದ, ಧರ್ಮಲೋಕದ ಶ್ರೇಷ್ಠ ಪ್ರತಿನಿಧಿಗಳೆನಿಸಿದ, ವಿಶ್ವವೇದಿಕೆಯ ಮಹಾವಾಗ್ಮಿಗಳಿಗೂ 'ವಿಶ್ವಧರ್ಮ' ಸಮನ್ವಯದ ಪರಿಕಲ್ಪನೆ ಇರಲಿಲ್ಲವೆಂದರೆ, ಅದೆಂತಹ ಅತ್ಯುನ್ನತ ತತ್ತ್ವವಾಗಿರಬೇಕು! ಆದ್ದರಿಂದ ಸ್ವಾಮೀಜಿ 'ವಿಶ್ವ ಧರ್ಮ ಸಮನ್ವಯ'ವನ್ನು ಮಾತನಾಡಿದಾಗ ಅವರಿಗೆ ಅದ್ಭುತ ಪ್ರತಿಕ್ರಿಯೆ ದೊರೆಯಿತು. ಆ ಅದ್ಭುತ ಪ್ರತಿಕ್ರಿಯೆಯು ಜಗತ್ತಿನಲ್ಲಿ ಆ ಪರಮೋದಾರವಾದ ತತ್ತ್ವಕ್ಕಾಗಿ ಹಸಿವು ಇದೆ ಎಂಬುದನ್ನು ಪ್ರಮಾಣೀಕರಿಸಿತು. ವೈಚಾರಿಕ ಸ್ವಾತಂತ್ರ್ಯದ ಯುಗದಲ್ಲಿ, ವೈಚಾರಿಕ ರಾಷ್ಟ್ರದಲ್ಲಿ ಸ್ವಾಮೀಜಿ ಈ ಸಮನ್ವಯದ ಸಂದೇಶವನ್ನು ಮೊಳಗಿದಾಗ ''ಸ್ವಾಮೀಜಿ, ನೀವು ಕೆಲವೇ ವರ್ಷಗಳ ಹಿಂದೆ ಬಂದು ಈ ಬೋಧನೆಗಳನ್ನು ಸಾರಿದ್ದರೂ ಜನರು ನಿಮ್ಮನ್ನು ಕಲ್ಲುಗಳಿಂದ ಹೊಡೆದುಬಿಡುತ್ತಿದ್ದರು. ಈಗಲಾದರೂ ಅಂತಹ ಒಳ್ಳೆಯ ಪರಿಸ್ಥಿತಿಯೇನೂ ಇಲ್ಲ'' ಎಂಬಂತಹ ಮಾತುಗಳನ್ನು ಕೇಳಬೇಕಾದರೆ ಜಗತ್ತು ಎಂತಹ ಮತಭೇದದ ವಿಷದಲ್ಲಿ ಬೇಯುತ್ತಿತ್ತು ಎಂಬುದನ್ನು ನಾವು ಕಲ್ಪಿಸಿಕೊಳ್ಳಬಹುದು.

### ಅಮೆರಿಕದ ಸಹೋದರ ಸಹೋದರಿಯರೆ

ಸ್ವಾಮೀಜಿ ಸಮ್ಮೇಳನದ ಪ್ರವೇಶದಿನದಂದು ಸ್ವಾಗತಕ್ಕೆ ಉತ್ತರವಾಗಿ ನೀಡಿದ ಐತಿಹಾಸಿಕ ಭಾಷಣದಲ್ಲಿ, ''ಅಮೆರಿಕದ ಸಹೋದರ ಸಹೋದರಿಯರೆ'' ಎಂದು ಸಂಬೋಧಿಸಿದುದು ಸಮನ್ವಯವನ್ನು ಸೂಚಿಸುತ್ತದೆ. ಮೇಲಾಗಿ ಅದು ಅವರ ವಿಶ್ವಾತ್ಮಭಾವದ ದ್ಯೋತಕ. ಅವರ ವ್ಯಕ್ತಿತ್ವದಲ್ಲೇ Solidarity of the Universe - ವಿಶ್ವದ ಏಕತೆಯ ಅರಿವು, ವಿಶ್ವಾತ್ಮಭಾವ, ತನ್ಮೂಲಕ ಅರಳಿದ ಸಮನ್ವಯ ದೃಷ್ಟಿ ಓತಪ್ರೋತವಾಗಿತ್ತು. ''ಸ್ವಾಮೀಜಿಯವರು ಸಮ್ಮೇಳನದ ವೇದಿಕೆಯ ಮೇಲೆ ಎದ್ದು ನಿಂತ ಆ ಕ್ಷಣದಲ್ಲಿ ಅವರ ಸ್ವಸ್ವರೂಪದಾಳದಲ್ಲಿದ್ದ ಮಹಾಶಕ್ತಿಯು ಪರಿಪೂರ್ಣವಾಗಿ ಜಾಗೃತವಾಗಿತ್ತು. ಮತ್ತು ಅಲ್ಲಿ ನೆರೆದಿದ್ದ ಸಮಸ್ತ ಸ್ತ್ರೀ–ಪುರುಷ ಸಮೂಹದೊಂದಿಗೆ ತಾವು ಆಧ್ಯಾತ್ಮಿಕವಾಗಿ ಅನನ್ಯರೆಂಬ ಭಾವ, ಅವರ ಸಮಸ್ತ ವ್ಯಕ್ತಿತ್ವವನ್ನೆ ಆವರಿಸಿ, ಅವರ ಧ್ವನಿಯಲ್ಲಿ ಸ್ಪಂದನಗೊಂಡಿತು. ಮತ್ತು ಶ್ರೋತೃಗಳೊಳಗೂ ಆ ಭಾವವು ರಭಸದಿಂದ ಪ್ರವೇಶ ಮಾಡಿಬಿಟ್ಟಿತು'' ಎಂದು ಸ್ವಾಮೀಜಿಯವರ ಜೀವನ ಸಂದೇಶಗಳನ್ನು ಸಂಶೋಧನೆಗೈದ ಮೇರಿ ಲೂಯಿ ಬರ್ಕ್ ಹೇಳುತ್ತಾಳೆ.

ಸ್ವಾಮೀಜಿ ದಕ್ಷಿಣೇಶ್ವರ ದೇವನಿಲಯದ ಪರಮ ಯೋಗೀಶ್ವರನ ಪದತಲದಲ್ಲಿ ಕುಳಿತು ಕಲಿತ ಪಾಠ ಅದೇ ಆಗಿತ್ತಲ್ಲವೆ?

**ಅಕ್ವಾ ವಾಟರ್ ವಾರಿ ಪಾನಿಗಳು ನೀರಿಗೊಂದೇ ಹೆಸರು।**
**ಅಲ್ಲಾ ಜೀಸಸ್ ಮೋಸಸ್ ತಿಳಿಯರು ಪರಬ್ರಹ್ಮನುಸಿರು ॥**

ದಕ್ಷಿಣೇಶ್ವರದ ಆ ಪುಟ್ಟ ಕೋಣೆಯಲ್ಲಿ ದಿನಬೆಳಗಾದರೆ ಬೇರೆ ಬೇರೆ ವಲಯಗಳ ಜನ ಕಿಕ್ಕಿರಿದು ಬಂದರು. ಅಲ್ಲಿ 'ತ್ಯಾಗ ವಿವೇಕದ ಚೀಲಗಳೆರಡನು ಹೆಗಲಲಿ ಹೊತ್ತಿಹ ನೂತನ ಮಾನವ'ನು ತಾನು ದೀರ್ಘಕಾಲದ ತಪದಿಂದ ಸಾಕ್ಷಾತ್ಕರಿಸಿಕೊಂಡ ಸಮನ್ವಯದ ವಾಣಿಗಳನ್ನೇ ಮೊಳಗಿದುದಲ್ಲವೆ?

### ಪ್ರಾಚೀನ ಋಷಿವಾಣಿ: ಸಮನ್ವಯ

ಸಹಸ್ರ ಸಹಸ್ರ ವರುಷಗಳ ಹಿಂದೆ ಸನಾತನ ಋಷಿ ಪರಂಪರೆಯ ಆರ್ಯವಾಣೀಯೂ ಸಮನ್ವಯದ ಸಂದೇಶಗಳನ್ನೆ ಚ್ಯುತಿಯಿಲ್ಲದಂತೆ ಮೊಳಗಿತ್ತು :

**ಏಕಂ ಸತ್ ವಿಪ್ರಾಃ ಬಹುಧಾ ವದಂತಿ ।**

'ಸತ್ಯ ಒಂದೇ; ಅದನ್ನು ಬಲ್ಲಿದರು ಬೇರೆ ಬೇರೆ ರೀತಿಯಲ್ಲಿ ಹೇಳುತ್ತಾರೆ.'



त्रयी सांख्यं योगः पशुपतिमतं वैष्णवमिति ।
प्रभिन्ने प्रस्थाने परमिदमदः पथ्यमिति च ॥
रुचीनां वैचित्र्यात् ऋजुकुटिल नाना पथजुषां ।
नृणामेको गम्यः त्वमसि पयसां अर्णव इव ॥

*(ಶಿವಮಹಿಮ್ನ ಸ್ತೋತ್ರ)*

ಎಂದರೆ ''ಭಿನ್ನ ಭಿನ್ನ ಸ್ಥಾನಗಳಿಂದುದಿಸಿದ ನದಿಗಳೆಲ್ಲ ಹರಿಯುತ್ತ ಹೋಗಿ ಕೊನೆಗೆ ಸಾಗರದೊಳಗೊಂದಾಗುವಂತೆ, ಮಾನವರು ತಮ್ಮ ತಮ್ಮ ವಿಭಿನ್ನ ಅಭಿರುಚಿಗಳಿಂದಾಗಿ ಅನುಸರಿಸುವ ಅಂಕುಡೊಂಕಿನ ದಾರಿಗಳೆಲ್ಲವೂ ಕೊನೆಗೆ ನಿನ್ನನ್ನೆ ಸೇರುತ್ತವೆ''.

ये यथा मां प्रपद्यन्ते तांस्तथैव भजाम्यहम्।
मम वर्त्मानुवर्तन्ते मनुष्याः पार्थ सर्वशः ॥

*(ಭಗವದ್ಗೀತೆ)*

''ಯಾರು ಯಾರು ನನ್ನಲ್ಲಿಗೆ ಯಾವ ಯಾವ ಮಾರ್ಗದಿಂದ ಬರುತ್ತಾರೋ ಅವರವರನ್ನು ನಾನು ಅದದೇ ಮಾರ್ಗದಿಂದ ತಲುಪುತ್ತೇನೆ. ಮಾನವರು ಅನುಸರಿಸುವ ಮಾರ್ಗಗಳೆಲ್ಲ ಕೊನೆಯಲ್ಲಿ ಬಂದು ನನ್ನನ್ನೇ ಸೇರುತ್ತವೆ.''

ಈ ಎರಡು ಉದಾಹರಣಪೂರ್ವಕ ತತ್ತ್ವಗಳನ್ನು ಸ್ವಾಮೀಜಿ ಸ್ವಾಗತ ಪರಿಚಯಕ್ಕೆ ನೀಡಿದ ಉತ್ತರದಲ್ಲಿ ಮನೋಜ್ಞವಾಗಿ ಹೇಳಿದರು.

## ವಿಶ್ವಧರ್ಮ :

ಸ್ವಾಮೀಜಿ ಅದೇ ಸನಾತನ ಆರ್ಯವಾಣಿಯನ್ನು ಆಧುನಿಕ ಯುಗಕ್ಕೆ, ತಮ್ಮ ವಿಚಾರಮತಿಯ ಸಾಣೆಯೊಂದಿಗೆ, ಸಂಶಯ ರಾಕ್ಷಸರು ಚಕಾರವೆತ್ತದಂತೆ ಮೊಳಗಿದರು. ಸ್ವಾಮೀಜಿಯವರ ಸಂದೇಶಗಳಲ್ಲಿ ಮೂರು ಮುಖ್ಯಾಂಶಗಳನ್ನು ಗಮನಿಸಬಹುದು:

**೧) ಎಲ್ಲಾ ಧರ್ಮಗಳೂ ಸತ್ಯ .**

**೨) ಧರ್ಮ ಮನುಷ್ಯನನ್ನು ದೇವನನ್ನಾಗಿಸುವ ಪ್ರಕ್ರಿಯೆ.**

*(ಸುಪ್ತ ದೈವರೆ ಏಳಿರೇಳಿ*
*ಲುಪ್ತ ಪದವಿಯ ಮರಳಿ ತಾಳಿ)*

**- ಇದೇ ಎಲ್ಲ ಧರ್ಮಗಳ ಗುರಿ.**

**೩) ಆ ಮಾರ್ಗದಲ್ಲಿ ಹೆಜ್ಜೆಯಿಡುವ ವ್ಯಕ್ತಿ ಕ್ಷುದ್ರ, ಸಂಕುಚಿತ, ಅಲ್ಪ ಭಾವನೆಗಳನ್ನು ತೊರೆದು ವಿಶಾಲನಾಗಬೇಕು.**

ಹಾಗೆಂದರೇನು? ನನ್ನ ಮಾರ್ಗವೊಂದೇ ಸರಿಯಾದುದು, ಉಳಿದವರೆಲ್ಲ ತಪ್ಪು ಎಂಬ ಧೋರಣೆಯನ್ನು ಬಿಡಬೇಕು. ಪ್ರತಿಯೊಬ್ಬ ಮನುಷ್ಯನ ಉದ್ದ, ಅಗಲ ಎತ್ತರ ಬೇರೆ ಬೇರೆ, ಒಂದೇ ಅಂಗಿಯನ್ನು ಎಲ್ಲರೂ ಹಾಕಿಕೊಳ್ಳಲು ಸಾಧ್ಯವಾಗುವುದಿಲ್ಲ. ಅದೇ ರೀತಿ ಆಯಾ ವ್ಯಕ್ತಿಯ ಸಾಮರ್ಥ್ಯ, ವಿಕಾಸದ ಸ್ತರ ಮತ್ತು ಇಷ್ಟಕ್ಕೆ ತಕ್ಕಂತೆ ಪ್ರತಿಯೊಬ್ಬನೂ ತನ್ನದೇ ಮಾರ್ಗವನ್ನು ಅನುಸರಿಸಲಿ. ಮಾರ್ಗ ಯಾವುದಾದರೂ ಅಂತಿಮ ಗುರಿ ಒಂದೇ ಎಂದರಿತು ಮತ ಭೇದದ ವಿಷವನ್ನು ಬಿಡಬೇಕು. ವೈಶಾಲ್ಯವೇ ಜೀವನ, ಸಂಕುಚಿತತೆಯೆಲ್ಲವೂ ಮರಣ.

ಎಲ್ಲ ಧರ್ಮಗಳ ಮೂಲ ಬೋಧನೆಗಳು ಇವು ಮೂರು. ಬೋಧನೆಯ ಪರಿ ಬೇರೆ. ಭಾಷೆ ಮತ್ತು ಹೇಳುವ ವಿಧಾನ ಬೇರೆಯಿರಬಹುದು. ಅದನ್ನು ಸಾಧಿಸುವ ಮಾರ್ಗ ಬೇರೆಬೇರೆಯಾಗಿರಬಹುದು. ವಿಗ್ರಹ, ದೇವಸ್ಥಾನ, ಚರ್ಚ್, ಧರ್ಮಗ್ರಂಥ, ವಿವಿಧ ಸಿದ್ಧಾಂತಗಳು ಆಧ್ಯಾತ್ಮಿಕ ಶೈಶವಾವಸ್ಥೆಯಲ್ಲಿರುವ ಸಾಧಕನಿಗೆ ಸಹಾಯಕಗಳು. ವ್ಯತ್ಯಾಸವಿರುವುದು ಮಾರ್ಗದಲ್ಲಿ, ಅಂತಿಮ ಗುರಿಯಲ್ಲಿ. ಸಾಕ್ಷಾತ್ಕಾರದಲ್ಲಿ ಅಲ್ಲ. ಸ್ವಾಮೀಜಿ ಹೇಳುವಂತೆ, ''ಬೇರೆ ಬೇರೆ ಬಣ್ಣಗಳ ಗಾಜುಗಳ ಮೂಲಕ ಬೆಳಕು ಹಾದು ಹೋಗುವಾಗ ಬೇರೆ ಬೇರೆ ವರ್ಣದ್ದಾಗಿ ಕಾಣುತ್ತದೆ. ಹಾಗೆಯೇ ಒಂದೇ ಸತ್ಯವು ಬೇರೆ ಬೇರೆ ಪರಿಸರಗಳಿಗೆ ಹೊಂದಿಕೊಳ್ಳುವಾಗ ಅಲ್ಪ ಸ್ವಲ್ಪ ಬದಲಾವಣೆಗೆ ಒಳಗಾಗುತ್ತದೆ. ಆದರೆ ಇವುಗಳ ಅಂತರಾಳದಲ್ಲಿರುವ ಸತ್ಯ ಮಾತ್ರ ಒಂದೇ.''

ಸ್ವಾಮೀಜಿ ಚಿಕಾಗೋ ಉಪನ್ಯಾಸಗಳಲ್ಲಿ ಹೇಳಿದಂತಹ ಕೆಳಗಿನ ಕೆಚ್ಚೆದೆಯ ಮಾತುಗಳನ್ನು ಬಹುಶಃ ಮತ್ತಾರೂ ಹೇಳಲಾರರು. ಏಕೆಂದರೆ ಅದನ್ನು ಅರ್ಥಮಾಡಿಕೊಳ್ಳುವ ಎತ್ತರವನ್ನು ಯಾರೂ ತಲುಪಿರಲಾರರು. ಸ್ವಾಮೀಜಿ ಹೇಳುತ್ತಾರೆ:

* ವಿಶ್ವಧರ್ಮ ಸಾಮರಸ್ಯ ಅಥವಾ ಧಾರ್ಮಿಕ ಐಕ್ಯತೆ ಎನ್ನುವಂಥದು ಒಂದು ಧರ್ಮದ ವಿಜಯದಿಂದ ಮತ್ತು ಇತರ ಧರ್ಮಗಳ ನಾಶದಿಂದ ಆಗುವಂಥದಲ್ಲ, ಎಂದು ಯಾರಾದರೂ ಭಾವಿಸಿದರೆ ನಾನು ಅವನಿಗೆ ಹೇಳುತ್ತೇನೆ, ಸೋದರನೇ, ನಿನ್ನ ಬಯಕೆ ನೆರವೇರುವುದು ಅಸಾಧ್ಯ .

* ಕ್ರೈಸ್ತನು ಹಿಂದೂ ಅಥವಾ ಬೌದ್ಧನಾಗಬೇಕಿಲ್ಲ. ಹಿಂದೂವಾಗಲಿ, ಬೌದ್ಧನಾಗಲಿ, ಕ್ರೈಸ್ತನಾಗಬೇಕಿಲ್ಲ. ಪ್ರತಿಯೊಬ್ಬನೂ ಇತರರ ಮನೋಭಾವವನ್ನು ಗ್ರಹಿಸಬೇಕು. ಆದರೆ ತನ್ನ ವೈಯಕ್ತಿಕತೆಯನ್ನು ಉಳಿಸಿಕೊಂಡು, ತನ್ನದೇ ಬೆಳವಣಿಗೆಯ ನಿಯಮಗಳಿಗೆ ಅನುಸಾರವಾಗಿ ಬೆಳೆಯಬೇಕು. ಬೀಜವೊಂದು ಮಣ್ಣು, ಗಾಳಿ, ನೀರು ಎಲ್ಲವನ್ನು ಹೀರಿಕೊಂಡು ನಾಳೆ ಗಾಳಿಯೂ ಆಗುವುದಿಲ್ಲ, ನೀರೂ ಆಗುವುದಿಲ್ಲ, ಮಣ್ಣೂ ಆಗುವುದಿಲ್ಲ ಬದಲಾಗಿ ತನ್ನದೇ ಬೆಳವಣಿಗೆಗೆ ತಕ್ಕಂತೆ ಬೆಳೆದು ವೃಕ್ಷವಾಗುತ್ತದೆಯೋ ಹಾಗೆ ವ್ಯಕ್ತಿಯೂ ತನ್ನ ಧರ್ಮಮಾರ್ಗದಲ್ಲಿ ಮುನ್ನಡೆಯತಕ್ಕದ್ದು .

* ಯಾರು ಎಷ್ಟೇ ವಿರೋಧಿಸಿದರೂ ಪ್ರತಿಯೊಂದು ಧರ್ಮದ ಧ್ವಜದ ಮೇಲೂ ಬಹುಬೇಗ ಈ ಮಾತುಗಳು ಬರೆಯಲ್ಪಡುತ್ತವೆ: ''ಹೋರಾಟವಲ್ಲ, ಸೌಹಾರ್ದ'' ''ವಿನಾಶವಲ್ಲ, ಸ್ವೀಕಾರ'', ''ವೈಮನಸ್ಯವಲ್ಲ, ಸಾಮರಸ್ಯ ಮತ್ತು ಶಾಂತಿ.''

ಒಂದು ದೇವಸ್ಥಾನದ ಗೋಪುರದಲ್ಲಿ ಒಂದು ಹಕ್ಕಿ ತನ್ನ ಮರಿ ಹಕ್ಕಿಯೊಂದಿಗೆ ಗೂಡು ಕಟ್ಟಿಕೊಂಡು ವಾಸವಾಗಿತ್ತು . ದೇವಸ್ಥಾನಕ್ಕೆ ಬಣ್ಣ ಬಳಿಯುವ ಸಂದರ್ಭದಲ್ಲಿ ಆ ಹಕ್ಕಿ ಅಲ್ಲಿಯೇ ಹತ್ತಿರದ ರಸ್ತೆಯಲ್ಲಿದ್ದ ಒಂದು ಚರ್ಚಿನ ಗೋಪುರದ ಮೇಲೆ ತನ್ನ ಗೂಡನ್ನು ಸ್ಥಳಾಂತರಿಸಿತು. ಮತ್ತೆ ನಾಲ್ಕು ತಿಂಗಳಿಗೆ ಚರ್ಚಿಗೆ ಬಣ್ಣ ಬಳಿಯಲು ಆರಂಭಿಸಿದರು. ಆಗ ಆ ಹಕ್ಕಿ ಅಲ್ಲಿ ಹತ್ತಿರದಲ್ಲಿರುವ ಒಂದು ಮಸೀದಿಯ ಗೋಪುರಕ್ಕೆ ತನ್ನ ಗೂಡನ್ನು ಬದಲಾಯಿಸಿತು. ಇನ್ನು ನಾಲ್ಕು ತಿಂಗಳು ಕಳೆಯುವ ವೇಳೆಗೆ ಮಸೀದಿಗೂ ಬಣ್ಣ ಬಳಿಯಲಿದ್ದಾರೆ ಎಂದು ಅದಕ್ಕೆ ಗೊತ್ತಾಯಿತು. ಈ ಹೊತ್ತಿಗೆ ದೇವಸ್ಥಾನ ಪುನರುತ್ಥಾನವಾಗಿತ್ತು . ಆದ್ದರಿಂದ ಹಕ್ಕಿ ಮರಳಿ ತನ್ನ ಗೂಡನ್ನು ದೇವಸ್ಥಾನದ ಗೋಪುರದ ಮೇಲೆ ಕಟ್ಟಿಕೊಂಡಿತು.

ಒಂದು ದಿನ ಮರಿ ಹಕ್ಕಿ ತನ್ನ ಗೂಡಿನಲ್ಲಿದ್ದಾಗ ದೇವಸ್ಥಾನದ ಹೊರಗೆ ಮೂವರು ವ್ಯಕ್ತಿಗಳು — ಒಬ್ಬ ಹಿಂದೂ, ಒಬ್ಬ ಮುಸಲ್ಮಾನ, ಒಬ್ಬ ಕ್ರೈಸ್ತ, ''ನನ್ನ ಧರ್ಮ ಸರಿ, ನಿನ್ನ ಧರ್ಮ ತಪ್ಪು''' – ಎಂದು ಜಗಳವಾಡುತ್ತಿದ್ದರು. ಮರಿ ಹಕ್ಕಿ ತನ್ನ ತಾಯಿ ಕಡೆಗೆ ಮುಖ ಮಾಡಿ, ''ಅವರು ಏಕೆ ಜಗಳವಾಡುತ್ತಿದ್ದಾರೆ?'' ಎಂದು ಪ್ರಶ್ನಿಸಿತು. ತಾಯಿ ಹಕ್ಕಿ, ''ಅವರು ನನ್ನ ಧರ್ಮ, ನಿನ್ನ ಧರ್ಮ ಎಂದು ಗುದ್ದಾಡುತ್ತಿದ್ದಾರೆ'' ಎಂದು ಹೇಳಿತು. ಮರಿ ಹಕ್ಕಿ, ''ಅಮ್ಮ, ನೀನು ಹೇಳಿದ್ದು ನನಗೆ ಅರ್ಥವಾಗುತ್ತಲೇ ಇಲ್ಲ. ನಾವು ಚರ್ಚಿನ ಗೋಪುರದ ಮೇಲೆ ವಾಸಿಸುತ್ತಿದ್ದಾಗ, ಮಸೀದಿಯ ಗೋಪುರದ ಮೇಲೆ ಇದ್ದಾಗ, ಈಗ ದೇವಸ್ಥಾನದ ಗೋಪುರದ ಗೂಡಿನಲ್ಲಿರುವಾಗಲೂ ಒಂದೇ ರೀತಿ ಇದ್ದೇವೆ. ಯಾವ ವ್ಯತ್ಯಾಸವೂ ಇಲ್ಲ'' ಎಂದು ಹೇಳಿತು. ತಾಯಿ ಹಕ್ಕಿ ''ಮಗೂ ನಿನಗೆ ಅರ್ಥವಾಗಿರುವಷ್ಟೂ ಈ ಮೂರ್ಖ ಮನುಷ್ಯನಿಗೆ ಅರ್ಥವಾಗಿಲ್ಲ. ಆದ್ದರಿಂದ ಅವರು ಯಾವಾಗಲೂ ಕಚ್ಚಾಡುತ್ತಲೇ ಇರುತ್ತಾರೆ'' ಎಂದಿತು. ಆದ್ದರಿಂದ ಎಲ್ಲ ಧರ್ಮಗಳೂ ಸತ್ಯ. ಎಲ್ಲ ಧರ್ಮಗಳಿಗೂ ಮಾನವನ ಅಂತರಾಳದ ದೈವತ್ವವನ್ನು ಅಭಿವ್ಯಕ್ತಿಗೊಳಿಸುವಲ್ಲಿ ಸಮಾನವಾಗಿ ಸಹಾಯಹಸ್ತವನ್ನು ನೀಡುತ್ತವೆ.

**ಉಪಸಂಹಾರ:** ಎಲ್ಲಿಯವರೆಗೆ ಸಾವು ಎಂಬುದು ಇದೆಯೋ, ಮಾನವ ಹೃದಯದಲ್ಲಿ ದೌರ್ಬಲ್ಯ ಎಂಬುದು ಇದೆಯೋ, ಎಲ್ಲಿಯವರೆಗೆ ದೌರ್ಬಲ್ಯದಿಂದಾಗಿ ಅವನ ಹೃದಯದಿಂದ ಆರ್ತನಾದ ಹೊರಹೊಮ್ಮುತ್ತದೆಯೋ, ಅಲ್ಲಿಯ ವರೆಗೆ ಭಗವಂತನಲ್ಲಿ ಶ್ರದ್ಧೆ, ಧರ್ಮಶ್ರದ್ಧೆ ಎಂಬುದು ಇದ್ದೇ ಇರುತ್ತದೆ. ಧರ್ಮ ಮನುಷ್ಯನ ಅತ್ಯಂತ ಸೂಕ್ಷ್ಮ ಸಂವೇದನೆಗಳಲ್ಲೊಂದು, ಲೋಕದ ಸಾವಿರ ಸಾವಿರ ಜನಸಮೂಹ ದಲ್ಲಿ ಯಾರೋ ಒಬ್ಬಿಬ್ಬರು ಧಾರ್ಮಿಕ ಚಿಂತನೆಗಳಿಗೆ, ತತ್ತ್ವಗಳಿಗೆ ತಮ್ಮ ಹೃದಯ ಕವಾಟವನ್ನು ತೆರೆದಿರುತ್ತಾರೆ. ಅಂತಹ ಸಹಸ್ರ ಜನರಲ್ಲಿ ಯಾರೋ ಒಬ್ಬಿಬ್ಬರು ನಿಜವಾದ ಅರ್ಥದಲ್ಲಿ ಧರ್ಮ ಸಮನ್ವಯ, ವಿಶ್ವಧರ್ಮ ಸಾಮರಸ್ಯ ಎಂಬ ಅತ್ಯುನ್ನತ, ಉದಾತ್ತ , ಸೂಕ್ಷ್ಮ ಮೌಲ್ಯಗಳನ್ನು ಗ್ರಹಿಸಬಲ್ಲರು. ಅಂತಹ ಕೆಲವು ವ್ಯಕ್ತಿಗಳಾದರೂ ಸಾಮರಸ್ಯದ ತಿರುಳನ್ನು ಗ್ರಹಿಸಿ ಬದುಕು ವುದಾದಲ್ಲಿ, ಈ ಧರೆಯು ನಾವು ವಾಸಿಸಲು ಹೆಚ್ಚು ಯೋಗ್ಯವಾದ ಸ್ಥಳವಾಗುತ್ತದೆ. ಸ್ವಾಮೀಜಿಯವರ ಸಮನ್ವಯದ ಸಂದೇಶಗಳನ್ನು ನಮ್ಮದಾಗಿಸಿಕೊಂಡು, ಸಿರಿವಂತ ಜಗವನ್ನು, ಸಮೃದ್ಧ ಯುಗವನ್ನು ಕಾಣುವ ಪ್ರಯತ್ನವನ್ನು ಮಾಡೋಣ. ಸ್ವಾಮೀಜಿಯವರ ಸಿರಿ ಮಾರ್ಗದರ್ಶನವು ಈ ದಿಸೆಯಲ್ಲಿ ನಮ್ಮನ್ನು ಸದಾ ಪ್ರಚೋದಿಸಲಿ ಎಂದು ಪ್ರಾರ್ಥಿಸೋಣ. 

## ಸ್ವಾಮೀಜಿ ನಮಗಿತ್ತ ನಿಧಿ

''ಸ್ವಾಮಿ ವಿವೇಕಾನಂದರು ಹಿಂದೂಧರ್ಮವನ್ನು ರಕ್ಷಿಸಿ ದರು ಹಾಗೂ ಭಾರತವನ್ನು ರಕ್ಷಿಸಿದರು. ಅವರಿಲ್ಲದೆ ಹೋಗಿದ್ದರೆ ನಾವು ನಮ್ಮ ಧರ್ಮವನ್ನು ಕಳೆದುಕೊಳ್ಳುತ್ತಿದ್ದೆವು, ನಾವು ನಮ್ಮ ಸ್ವಾತಂತ್ರ್ಯವನ್ನು ಗಳಿಸುತ್ತಿರಲಿಲ್ಲ. ಆದ್ದರಿಂದ ನಾವು ಪ್ರತಿಯೊಂದರಲ್ಲೂ ಸ್ವಾಮಿ ವಿವೇಕಾನಂದರಿಗೆ ಋಣಿಗಳಾಗಿರುವೆವು. ಅವರ ವಿಶ್ವಾಸ, ಅವರ ಧೈರ್ಯ ಹಾಗೂ ಅವರ ವಿವೇಕವು ನಮಗೆ ಎಂದೆಂದಿಗೂ ಸ್ಫೂರ್ತಿ ನೀಡಲಿ; ಆ ಮೂಲಕ ನಾವು ಅವರಿಂದ ಪಡೆದ ನಿಧಿಯನ್ನು ಸುರಕ್ಷಿತವಾಗಿ ಇಟ್ಟುಕೊಳ್ಳೋಣ!''

— ಸಿ. ರಾಜಗೋಪಾಲಾಚಾರಿ

# ಭಾರತೀಯ ಸಂಸ್ಕೃತಿಯ ಪರಂಪರೆಯಲ್ಲಿ ಚಿಕಾಗೊ ಉಪನ್ಯಾಸಗಳ ಮಹತ್ವ

**ಡಾ. ಕೆ. ಅನಂತರಾಮು**

ಭಾರತೀಯ ಸಂಸ್ಕೃತಿಯ ಪುನರುತ್ಥಾನ ನಡೆದುದು ೧೯ನೇ ಶತಮಾನದ ಅಂತ್ಯಭಾಗದಲ್ಲಿ; ಅದರಲ್ಲೂ ಸ್ವಾಮಿ ವಿವೇಕಾನಂದರ ಹಾಗೂ ಇತರ ಮಹಾವ್ಯಕ್ತಿಗಳ ಆಗಮನದೊಂದಿಗೆ. ಸ್ವಾಮೀಜಿ ಚಿಕಾಗೋದಲ್ಲಿ ನೀಡಿದ ಉಪನ್ಯಾಸಗಳು ಈ ದಿಕ್ಕಿನಲ್ಲಿ ಮಾಡಿದ ಕಾರ್ಯ ಅತ್ಯಮೋಘವಾದುದು. ಈ ಕುರಿತು ಇಲ್ಲಿ ವಿವೇಚನೆ ನಡೆಸಿರುವ ಲೇಖಕರು ಕನ್ನಡದ ಪ್ರಸಿದ್ಧ ಬರಹಗಾರರು. ನಿವೃತ್ತ ಪ್ರಾಧ್ಯಾಪಕರಾಗಿರುವ ಅವರು ತಮ್ಮ ಅನೇಕ ಗ್ರಂಥಗಳು ಹಾಗೂ ಲೇಖನಗಳಿಂದ ಈಗಾಗಲೇ ಕನ್ನಡ ಓದುಗರಿಗೆ ಚಿರಪರಿಚಿತರಾಗಿದ್ದಾರೆ. ಉತ್ತಮ ಭಾಷಣಕಾರರೂ ಆಗಿರುವ ಅವರು 'ವಿವೇಕಪ್ರಭ'ದಲ್ಲಿ ಹಲವು ಲೇಖನಗಳನ್ನೂ, ಸರಣಿ ಲೇಖನಗಳನ್ನೂ ಬರೆದಿದ್ದಾರೆ.



### ಸಂಸ್ಕಾರಗೊಳಿಸಿದ್ದು ಸಂಸ್ಕೃತಿ

**ಸ**ಂಸ್ಕೃತಿಯೆಂದರೆ ಸದ್ಗುಣಗಳನ್ನು ಜೋಡಿಸುವುದು, ದೋಷಗಳನ್ನು ತೊಡೆದು ಹಾಕುವುದು ಎಂದರ್ಥ. ಅದನ್ನೇ ಗುಣಾಧಾನ, ದೋಷವಿಸರ್ಜನ — ಎಂಬ ಮಾತುಗಳಿಂದ ನಿರ್ದೇಶಿಸಿದ್ದಾರೆ. ಭಾರತೀಯ ಸಂಸ್ಕೃತಿಯು ಗುಣಭರಿತವೂ ದೋಷರಹಿತವೂ ಆಗಿದೆ. ಅದು ಕಾಲದಿಂದ ಕಾಲಕ್ಕೆ ವಿಶೇಷ ಸಂಸ್ಕಾರಕ್ಕೆ ಒಳಗಾಗಿ ಉಜ್ವಲಗೊಂಡಿದೆ. ಭಾರತೀಯ ಸಂಸ್ಕೃತಿಯನ್ನೇ ಹಿಂದೂ ಸಂಸ್ಕೃತಿ, ಸನಾತನ ಸಂಸ್ಕೃತಿ ಎಂಬ ಹೆಸರುಗಳಿಂದಲೂ ಕರೆದಿದ್ದಾರೆ. ಯಾವ ಸಂಸ್ಕೃತಿಗೆ ಆದಿ ಅಂತ್ಯಗಳೆಂಬುದು ಇಲ್ಲವೋ ಅಂಥದನ್ನು ಸನಾತನ ಎನ್ನುತ್ತಾರೆ. ಈ ಸಂಸ್ಕೃತಿಯು ಯಾವಾಗ ಉದಯವಾಯಿತೋ ಯಾವ ಮಹಾತ್ಮರು ಅದರ ಸಂಸ್ಥಾಪಕರೋ ಯಾರಿಗೂ ತಿಳಿಯದು. ಕಾಲದಿಂದ ಕಾಲಕ್ಕೆ ಈ ಪುಣ್ಯಭೂಮಿಯಲ್ಲಿ ಅವತರಿಸಿದ ಪುಣ್ಯಪುರುಷರ ತಪಸ್ಸಿನ ಫಲವಾಗಿ ಇಂಥದೊಂದು ಸಂಸ್ಕೃತಿಯು ರೂಪು ತಳೆದಿದೆ. ಈ ಸಂಸ್ಕೃತಿಗೆ ಸಾವೆಂಬುದೂ ಇಲ್ಲ, ಅದು ಅಜರಾಮರವಾದುದು.

ನಮ್ಮ ಪೂರ್ವಿಕರು ಹೇಗೆ ಬಾಳಿ ಬದುಕಿದರು; ಯಾವ ನಂಬಿಕೆ, ಯಾವ ನಡೆವಳಿಕೆ ಅವರದಾಗಿತ್ತು; ಬದುಕಿನ ಸಾರ್ಥಕತೆ, ಧನ್ಯತೆ, ಕೃತಾರ್ಥತೆ ಯಾವುದರಲ್ಲಿದೆ ಎಂದು ಅವರು ಭಾವಿಸಿದ್ದರು; ಅವರು ತಮ್ಮ ಬದುಕಿಗೆ ಯಾವ ಜೀವನಮೌಲ್ಯಗಳನ್ನು ಆಳವಡಿಸಿಕೊಂಡಿದ್ದರು; ಅವರ ಬದುಕಿನ ಪರಮಗುರಿ ಏನಾಗಿತ್ತು; ಜೀವ-ಜಗತ್ತು-ಬ್ರಹ್ಮ ಎಂಬೀ ಸಂಗತಿಗಳ ಬಗ್ಗೆ ಅವರ ವಿಚಾರಧಾರೆ ಏನಾಗಿತ್ತು — ಇವೆಲ್ಲವುಗಳ ಒಟ್ಟು ಮೊತ್ತವನ್ನೇ ನಾವು ಸಂಸ್ಕೃತಿ ಎಂದು ಕರೆಯುತ್ತೇವೆ. ನಿಸರ್ಗವನ್ನು ಪಳಗಿಸಿಕೊಂಡು ಅದನ್ನು ದಿವ್ಯ ಸಂಗೀತವಾಗಿಸಿಕೊಂಡಿರುವ ಸಂಸ್ಕೃತಿಯ ಆ ಕೌಶಲ ಅನನ್ಯವಾಗಿದೆ.

### ಮಾತೆಯರಿಗೆ ಮೊದಲ ಗೌರವ

ಸ್ವಾಮಿ ವಿವೇಕಾನಂದರು ತಮ್ಮ ಚಿಕಾಗೋ ಉಪನ್ಯಾಸದಲ್ಲಿ ಭಾರತೀಯ ಸಂಸ್ಕೃತಿಯ ಗುಣ ವಿಶೇಷಗಳನ್ನೆಲ್ಲ, ಶಕ್ತಿಸಾಮರ್ಥ್ಯಗಳನ್ನೆಲ್ಲ ಸಾರಪೂರ್ಣವಾಗಿ ಸಾದರಪಡಿಸಿದ್ದಾರೆ. ನಮ್ಮ ಸಂಸ್ಕೃತಿಯಲ್ಲಿ ಮಾತೆಯರಿಗೆ ಅಗ್ರಸ್ಥಾನವೆಂಬುದು ಸರ್ವವಿದಿತವೇ ಆಗಿದೆ. ''ಮಾತೆಯರೆಂದರೆ ಸುಮ್ಮನಾಗಲಿಲ್ಲವಪ್ಪಾ, ಅವರು ಜಗನ್ಮಾತೆಯರು'' ಎಂಬ ಪರಮಹಂಸರ ವಾಣಿಯನ್ನು ನೆನೆಯಬೇಕು. 'ಅಮೆರಿಕದ ಸಹೋದರಿಯರೆ ಮತ್ತು ಸಹೋದರರೆ' ಎಂಬೊಂದು ಸಂಬೋಧನೆಯೇ ಆ ಜನರನ್ನು ರೋಮಾಂಚಿತರನ್ನಾಗಿ ಮಾಡಿ, ಸೂಜಿಗಲ್ಲಿನಂತೆ ಸೆಳೆದುಕೊಂಡುಬಿಟ್ಟಿತು ಎಂಬ

ಮಾತು ಪ್ರಸಿದ್ಧವೇ ಆಗಿದೆ. ವಿವೇಕಾನಂದರು ಮೊದಲಿಗೆ ಸೋದರಿಯರೆ ಎಂದು ಹೇಳಿ, ತರುವಾಯದಲ್ಲಿ ಸಹೋದರರೆ ಎಂದು ಹೇಳುವ ಮೂಲಕ ಸಂಬೋಧನೆಯ ಹೊತ್ತಿನಲ್ಲಿಯೇ ಅವರು ಮಾತೆಯರಿಗೆ ಪ್ರಥಮ ಪ್ರಾಶಸ್ತ್ಯ ನೀಡಿ, ಸನಾತನ ಸಂಸ್ಕೃತಿಗೆ ಗೌರವ ತಂದರು ಎಂದು ಹೇಳಬಹುದಾಗಿದೆ.

### ಕೃತಜ್ಞತೆಯ ಲಕ್ಷಣ

ನಮಗಾಗಲಿ, ಸಮಾಜಕ್ಕಾಗಲಿ, ಯಾರಿಂದಲಾದರೂ ಒಂದು ಉಪಕಾರವು ಸಂಭವಿಸಿತೆಂದರೆ ಅದನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕೆಂದು ನಮ್ಮ ಸಂಸ್ಕೃತಿಯು ತಿಳಿಸುತ್ತದೆ. ಮಹಾಭಾರತದ 'ಯಕ್ಷಪ್ರಶ್ನೆ'ಯೆಂಬ ಉಪಾಖ್ಯಾನದಲ್ಲಿ ಯಕ್ಷನು ಧರ್ಮಜನನ್ನು ಕುರಿತು, ''ನರಕಕ್ಕೆ ಹೋಗಲು ತಕ್ಕವನು ಯಾರು?'' ಎಂದು ಕೇಳಿದ್ದಕ್ಕೆ, ''ಮಾಡಿದ ಉಪಕಾರವನ್ನು ಸ್ಮರಿಸಿಕೊಳ್ಳದೆ ಹೋದವನಿಗೆ ನರಕದ ಬಾಗಿಲುಗಳು ವಿಸ್ತಾರವಾಗಿ ತೆರೆದಿರುತ್ತವೆ'' ಎಂದು ಉತ್ತರಿಸಿದ್ದನ್ನು ನೆನೆಯಬೇಕು. ವಿವೇಕಾನಂದರನ್ನು ಸಮ್ಮೇಳನದ ಸಂಘಟಕರು ಉಪನ್ಯಾಸ ನೀಡಲು ಸ್ವಾಗತಿಸಿದ ಬಳಿಕ, ವಿವೇಕಾನಂದರು ಎದ್ದುನಿಂತು ಸ್ವಾಗತಕ್ಕೆ ಉತ್ತರ ನೀಡುತ್ತ ''ಪ್ರಪಂಚದ ಅತ್ಯಂತ ಪ್ರಾಚೀನವಾದ ಸಂನ್ಯಾಸಿಗಳ ಸಂಘದ ಪರವಾಗಿ ನಿಮಗೆ ಕೃತಜ್ಞತೆಯನ್ನು ಅರ್ಪಿಸುತ್ತೇವೆ. ವಿವಿಧ ಧರ್ಮಗಳ **ಮಾತೆಯ** ಪರವಾಗಿ ನಿಮಗೆ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಹಿಂದೂ ಜನಾಗಕ್ಕೆ ಸೇರಿದ ಎಲ್ಲ ವರ್ಗಗಳ, ಎಲ್ಲ ಪಂಥಗಳ ಕೋಟ್ಯನುಕೋಟಿ ಜನರ ಪರವಾಗಿ ನಿಮಗೆ ಕೃತಜ್ಞತೆಯನ್ನು ಅರ್ಪಿಸುತ್ತೇನೆ'' ಎಂದು ಕೃತಜ್ಞತೆಯ ಮಹಾಪೂರವನ್ನೇ ಹರಿಸಿರುವುದನ್ನು ಗಮನಿಸಬೇಕು.

ಸಂನ್ಯಾಸವೆಂಬ ತ್ಯಾಗಜೀವನದ ಉಚ್ಚ ಆದರ್ಶಗಳನ್ನು ಆಚರಣೆಗೆ ತಂದವರಲ್ಲಿ ಭಾರತೀಯರೇ ಮೊತ್ತಮೊದಲಿಗರು ಎಂಬ ವೈಶಿಷ್ಟ್ಯವನ್ನು ಕೂಡ ವಿವೇಕಾನಂದರು ಕೃತಜ್ಞತೆಯನ್ನು ಸಮರ್ಪಿಸುವ ಮಾತುಗಳ ಹೂರಣದಲ್ಲಿಯೇ ಅಡಕಗೊಳಿಸಿದ್ದಾರೆ ಎಂಬುದನ್ನೂ ಗಮನಿಸಬೇಕು.

### ಪರಮತ ಸಹಿಷ್ಣುತೆ

ಪರಮತ ಸಹಿಷ್ಣುತೆಯೆಂಬುದು ನಮ್ಮ ಸಂಸ್ಕೃತಿಗೆ ಪ್ರಾಣಸ್ವರೂಪವಾಗಿದೆ. ''ಸತ್ತ ಬಳಿಕ ಸುಟ್ಟುಬೂದಿಯಾಗುವ ಈ ಶರೀರವು ಮತ್ತೆ ಹುಟ್ಟಿಬರುತ್ತದೆಯೆಂದರೆ ನಂಬಲುಂಟೇನಯ್ಯ! ಅದನ್ನೆಲ್ಲ ಕಟ್ಟಿಟ್ಟುಬಿಡಿ. ಇರುವುದು ಇದೊಂದೇ ಜನ್ಮ. ಸಾಲ ಮಾಡಿಯಾದರು ಸರಿಯೆ, ತುಪ್ಪವನ್ನುಂಡು ತೃಪ್ತರಾಗಿದ್ದು ಬಿಡಿ.'' ಎಂದು ಹೇಳಿದ ಚಾರ್ವಾಕರನ್ನೂ ತಿರಸ್ಕರಿಸದೆ, ''ಆಗಲಪ್ಪಾ, ನಿನ್ನದೂ ಒಂದು ಮತವೇ ಸರಿ'' ಎಂದು ಸಹಿಸಿಕೊಂಡು ಬಂದಿರುವುದು ಸಾಮಾನ್ಯ ವಿಷಯವಲ್ಲ. ಇಂದಿಗೂ ಚಾರ್ವಾಕರಿದ್ದಾರೆ, ಅವರ ಮಾತುಗಳನ್ನು ನಾವು ಈಗಲೂ ತಾಳ್ಮೆಯಿಂದ ಕೇಳಿಸಿಕೊಳ್ಳುತ್ತಲೇ ಇದ್ದೇವೆ. ರೋಮನ್ನರ ದೌರ್ಜನ್ಯದಿಂದ ಕಂಗೆಟ್ಟ ಯಹೂದಿಗಳಿಗೆ ಭಾರತವು ಆಶ್ರಯಸ್ಥಾನವಾದುದನ್ನೂ, ಝೊರತೂಷ್ಟ್ರ ರಾಷ್ಟ್ರದ ನಿರಾಶ್ರಿತರಿಗೆ ಆಶ್ರಯ ನೀಡಿ ಪೋಷಿಸುತ್ತಿರುವ ನಮ್ಮ ಪರಧರ್ಮ ಸಹಿಷ್ಣುತೆಯ ಗುಣವನ್ನೂ ವಿವೇಕಾನಂದರು ತಮ್ಮ ಉಪನ್ಯಾಸದಲ್ಲಿ ಪ್ರಶಂಸೆಮಾಡಿದ್ದಾರೆ. ಹೋದ ಶತಮಾನದಲ್ಲಿ ಕೂಡ ಭಾರತವು ಟಿಬೆಟ್ ನಿರಾಶ್ರಿತರಿಗೆ, ಬಾಂಗ್ಲಾ ನಿರಾಶ್ರಿತರಿಗೆ ಆಶ್ರಯ ನೀಡಿದ ಘಟನೆಗಳನ್ನು ಸ್ಮರಿಸಿಕೊಂಡರೆ, ಆ ಪರಧರ್ಮ ಸಹಿಷ್ಣುತೆಯ ಗುಣ ನಮ್ಮಲ್ಲಿ ಇನ್ನೂ ಅಚ್ಚಳಿಯದೆ ರಕ್ಷಣೆಗೊಂಡಿದೆ ಎಂಬುದರ ಅರಿವಾಗುತ್ತದೆ.

### ಧರ್ಮಾಂಧತೆ ಅಥವಾ ಸ್ವಮತಭ್ರಾಂತಿ

ನಾವು ಅಪ್ಪಿಕೊಂಡಿರುವ ಧರ್ಮವೇ ಸರ್ವಶ್ರೇಷ್ಠವಾದುದು, ಮಿಕ್ಕೆಲ್ಲವೂ ಕೆಳದರ್ಜೆಗೆ ಸೇರಿದವು ಎಂಬ ಕುರುಡುಭಾವನೆಯಿದೆಯಲ್ಲಾ, ಅದನ್ನೇ ಧರ್ಮಾಂಧತೆ ಅಥವಾ ಸ್ವಮತಭ್ರಾಂತಿ ಎಂದು ಕರೆಯಲಾಗಿದೆ. ಅಂತಹ ಕುರುಡು ಭಾವನೆಗಳಿಗೆ ಸನಾತನ ಸಂಸ್ಕೃತಿಯು ಎಂದಿಗೂ ಪಕ್ಕಾಗಲಿಲ್ಲ. ಅನ್ಯಧರ್ಮೀಯರ ಮತಾಂಧತೆಯಿಂದ ಉದ್ಭವಿಸಿದ ಕ್ರೌರ್ಯ, ಹಿಂಸೆ, ರಕ್ತಪಾತಗಳಿಗೆ ಭಾರತವು ಗುರಿಯಾದರೂ ಅದಕ್ಕೆ ಪ್ರತೀಕಾರ ಮಾಡುವ ಅನುದಾರ ವರ್ತನೆಗೆ ಮುಂದಾಗದೆ, ಎಲ್ಲರೂ ಆನಂದವಾಗಿರೋಣ, **ಸರ್ವೇಭವಂತು ಸುಖಿನಃ**, ಎಂಬ ದಿವ್ಯಮಂತ್ರವನ್ನೇ ಪಠಿಸಿತು. ಆ ಸಹನಶೀಲತೆಯೇ ಕಾರಣವಾಗಿ ಅದು ಅನಾದಿಕಾಲದಿಂದಲೂ ತನ್ನ ಮೇಲೆರಗಿದ ವಿಪತ್ತುಗಳನ್ನೆಲ್ಲ ಜೀರ್ಣಿಸಿಕೊಂಡು, ಜೀವಂತ ಸಂಸ್ಕೃತಿಯಾಗಿ, ವಿಶ್ವಮೋಹಿನಿಯಾಗಿ ಬೆಳಗುತ್ತಿದೆ.

ಧರ್ಮಗಳ ನಡುವೆ ನನ್ನದೇ ಶ್ರೇಷ್ಠ, ತನ್ನದೇ ಶ್ರೇಷ್ಠ ಎಂಬ ಸಂಘರ್ಷಕ್ಕೆ ಕಾರಣವೇನೆಂಬುದನ್ನು ವಿವೇಕಾನಂದರು 'ಕೂಪಮಂಡೂಕನ್ಯಾಯ'ವನ್ನೇ ಒಂದು ಸ್ವಾರಸ್ಯಕರವಾದ ಕಥೆಯಾಗಿಸಿ ಅಮೆರಿಕನ್ನರ ಮುಂದೆ ಇರಿಸಿದ್ದಾರೆ. ಒಂದಾನೊಂದು ಬಾವಿಯಲ್ಲಿ ಬಹುಕಾಲದಿಂದ ಒಂದು ಕಪ್ಪೆ ತನ್ನ ಪರಿವಾರದೊಂದಿಗೆ ವಾಸಮಾಡುತ್ತಿತ್ತು. ಹೀಗಿರುವಾಗ ಒಂದು ದಿನ ಸಮುದ್ರವಾಸಿಯಾಗಿದ್ದ ಕಪ್ಪೆಯೊಂದು ಹೇಗೋ ಆ ಬಾವಿಗೆ ಬಂದುಬಿತ್ತು. ತನ್ನ ಕುಲಕ್ಕೇ ಸೇರಿದ ಆ ಸಾಗರ ಕಪ್ಪೆಯನ್ನು ಕಂಡು ಬಾವಿಕಪ್ಪೆಯು 'ನೀನು ಎಲ್ಲಿಂದ ಬಂದೆ' ಎಂದು ಕೇಳಿತು. ಅದಕ್ಕೆ ಸಾಗರ ಕಪ್ಪೆಯು ''ನಾನು ಸಮುದ್ರವೆಂಬ ಜಲರಾಶಿಯಿಂದ ಬಂದೆ' ಎಂದು ಹೇಳಿತು. ಸಮುದ್ರವೆಂಬ ಜಲರಾಶಿಯ ವಿಸ್ತಾರವನ್ನು ಕಂಡರಿಯದಿದ್ದ ಬಾವಿಕಪ್ಪೆಯುತನ್ನ ಬಾವಿಗಿಂತ ಅದು ಚಿಕ್ಕದೆಂಬ ಭಾವನೆಯಿಂದ, ತನ್ನ ಬಾವಿಯಲ್ಲಿಯೇ ಒಂದು ಕಡೆಯಿಂದ ಇನ್ನೊಂದು ಕಡೆಗೆ ಕುಪ್ಪಳಿಸಿ 'ಇಷ್ಟು ದೊಡ್ಡದೋ ನಿನ್ನ ಸಮುದ್ರ' ಎಂದು ಕೇಳಿತು. ಅದಕ್ಕೆ ಸಾಗರ ಕಪ್ಪೆಯು 'ಸಮುದ್ರವೆಂದರೆ ಅನಂತವಾದ ಜಲರಾಶಿ, ಅದರ ವಿಸ್ತಾರವನ್ನು ಬಾಯಿಮಾತುಗಳಿಂದ ವರ್ಣಿಸುವುದು ಸಾಧ್ಯವಿಲ್ಲ. ಕಿರಿದಾದ ಈ ನಿನ್ನ ಬಾವಿಯೊಂದಿಗೆ ಅದನ್ನು ಹೋಲಿಸಲೇಬೇಡ' ಎಂದು ತಿಳಿಯ ಹೇಳಿತು.

ಆದರೂ ಬಾವಿಕಪ್ಪೆಯು ಸುಮ್ಮನಾಗದೆ 'ಹಾಗಾದರೆ ಇಷ್ಟು ದೊಡ್ಡದೋ' ಎಂದು ಈ ಹಿಂದೆ ಹಾರಿದ್ದಕ್ಕಿಂತ ಸ್ವಲ್ಪ ಹೆಚ್ಚು ದೂರಕ್ಕೆ ಹಾರುತ್ತ ಪ್ರಶ್ನೆ ಮಾಡಿತು. ಅದಕ್ಕೆ ಸಾಗರ ಕಪ್ಪೆಯು ''ನಿನ್ನ ಈ ಹುಚ್ಚುತನವನ್ನು ಬಿಟ್ಟುಬಿಡು, ಸಮುದ್ರವನ್ನು ನಿನ್ನ ಬಾವಿಯೊಂದಿಗೆ ಹೋಲಿಸಲೇಬೇಡ'' ಎಂದು ದಬಾಯಿಸಿ ಹೇಳಿತು. ತನ್ನ ಬಾವಿಗಿಂತ ದೊಡ್ಡ ಜಲಾಶಯವು ಇರುವುದು ಸಾಧ್ಯವೇ ಇಲ್ಲ ಎಂಬ ಹುಚ್ಚು ಕಲ್ಪನೆಯಲ್ಲಿದ್ದ ಬಾವಿಕಪ್ಪೆಗೆ ಸಾಗರ ಕಪ್ಪೆಯು ಮಾತಿನಿಂದ ಕೋಪವೇ ಉಕ್ಕಿ ಬಂದಿತು. ''ಇವನೊಬ್ಬ ಸುಳ್ಳುಗಾರ, ಇವನನ್ನು ನಮ್ಮ ಬಾವಿಯಿಂದ ಹೊರಕ್ಕೆ ನೂಕಿ'' ಎಂದು ತನ್ನ ಸಹಚರರಿಗೆ ಹೇಳಿತು. ಆ ಮಾತಿನಿಂದ ಜುಗುಪ್ಸೆಗೊಂಡ ಸಾಗರಕಪ್ಪೆಯು 'ನಾನು ನಿನ್ನ ಕೈಲಿ ನೂಕಿಸಿಕೊಂಡು ಹೋಗಲು ಬಂದಿಲ್ಲ' ಎಂದು ಹೇಳುತ್ತ ತಾನೇ ಅಲ್ಲಿಂದ ಹೊರಟುಹೋಯಿತು.

ಒಂದೊಂದು ಧರ್ಮದವರು ತಮ್ಮ ಪುಟ್ಟ ಬಾವಿಯಲ್ಲೇ ಕುಳಿತು 'ಪ್ರಪಂಚವೆಲ್ಲ ಇಷ್ಟೆ' ಎಂದು ತಿಳಿಯುವುದೇ ಭಿನ್ನಾಭಿಪ್ರಾಯಗಳಿಗೆ ಕಾರಣವೆಂದು ವಿವೇಕಾನಂದರು ಆ ಚಿಕಾಗೋ ಉಪನ್ಯಾಸದಲ್ಲಿ ತಿಳಿವಳಿಕೆ ನೀಡಿದ್ದಾರೆ. ನಮ್ಮ ಸನಾತನ ಸಂಸ್ಕೃತಿಯ ಋಷಿಮುನಿಗಳಾದರೋ ಋಗ್ವೇದಕಾಲದಲ್ಲಿಯೇ **'ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ'** ಎಂದು ಪಠಿಸುತ್ತ 'ಎಲ್ಲ ದಿಕ್ಕುಗಳಿಂದಲೂ ಸದ್ವಿಚಾರಗಳು ನಮ್ಮತ್ತ ಹರಿದುಬರಲಿ' ಎಂದು ಧರ್ಮದ ಬಾಗಿಲನ್ನು ತೆರೆದಿಟ್ಟು ಹೋಗಿದ್ದಾರೆ. ಅದು ಇಂದಿಗೂ ತೆರೆದ ಬಾಗಿಲೇ ಆಗಿದೆ. ಪುಟ್ಟ ಪ್ರಪಂಚದ ಅಡ್ಡಗೋಡೆಗಳನ್ನು ನಾವು ಎಂದೋ ಪುಡಿಗಟ್ಟಿದ್ದೇವೆ ಎಂದು ಹೇಳಿರುವ ವಿವೇಕಾನಂದರು, ಆ ಬಗೆಯ ಅಡ್ಡ ಗೋಡೆಗಳನ್ನು ಅಮೆರಿಕನ್ನರು ಕೂಡ ಒಡೆದು ಹಾಕಬೇಕೆಂದೂ, ಅದನ್ನು ಸಾಧಿಸಲು ಹೊರಟರೆ ಭಗವಂತನು ಅವರಿಗೆ ಸಹಾಯ ಮಾಡುತ್ತಾನೆಂದೂ ತಿಳಿಯಾದ ವ್ಯಂಗ್ಯದ ಮೂಲಕ ತಿಳಿಯಪಡಿಸಿದ್ದಾರೆ.

### ಪುರುಷಾರ್ಥ ಸಾಧನೆಯ ನೆಲೆಗಟ್ಟು

ಚತುರ್ವಿಧ ಪುರುಷಾರ್ಥಗಳನ್ನು ಎತ್ತಿಹಿಡಿದ ಸಂಸ್ಕೃತಿ ನಮ್ಮದು. ಧರ್ಮಮಾರ್ಗದ ಕಾಯಕವನ್ನು ಕೈಗೊಂಡು ಅರ್ಥ ಸಂಪಾದನೆ ಮಾಡಬೇಕು; ಆ ಸದ್ದ್ರವ್ಯದ ಮೂಲಕ ವಿಹಿತವಾದ ಕಾಮನೆಗಳನ್ನು ಪೂರೈಸಿಕೊಳ್ಳಬೇಕು; ನಾನು ಪಡೆಯಬೇಕಾದುದನ್ನೆಲ್ಲ ಪಡೆದಾಯಿತು, ಮಾಡಬೇಕಾದುದನ್ನೆಲ್ಲ ಮಾಡಿದ್ದಾಯಿತು, ಭಗವಂತನ ಇಚ್ಛೆಯಂತೆಯೇ ನನ್ನ ಬದುಕನ್ನು ಸಾಗಿಸಿದ್ದೇನೆ ಎಂಬ ಕೃತಕೃತ್ಯತೆಯ ಭಾವವು ಮೈದುಂಬಿದಾಗ ಹುಟ್ಟುಸಾವುಗಳನ್ನು ದಾಟುವ, ಭಗವಂತನಲ್ಲಿ ಬಿಚ್ಚಿಬೇರಿಲ್ಲದಂತೆ ಒಂದಾಗಿಬಿಡುವ ಮೋಕ್ಷವೆಂಬ ದಿವ್ಯಸ್ಥಿತಿಯನ್ನು ಸಂಪಾದಿಸಿಕೊಳ್ಳಬೇಕೆಂಬುದೇ ಚತುರ್ವಿಧ ಪುರುಷಾರ್ಥಗಳ ನೆಲೆಗಟ್ಟು. ಇಲ್ಲಿ ಮೋಕ್ಷವೆಂಬುದು 'ಪರಮಪುರುಷಾರ್ಥ'ವಾಗಿದೆ. ಎಲ್ಲೆಲ್ಲಿಯೋ ಹುಟ್ಟಿದ ನದಿಗಳು ಕೊನೆಗೆ ಸಾಗರದಲ್ಲಿಯೇ ಸಂಗಮಗೊಳ್ಳುವಂತೆ, ಎಲ್ಲೆಲ್ಲಿಯೋ ಹುಟ್ಟಿದ ಮಾನವರು ಅರಿತೋ ಅರಿಯದೆಯೋ, ನೇರವಾಗಿಯೋ ವಕ್ರವಾಗಿಯೋ ಭಗವಂತನನ್ನೇ ಕುರಿತು ಪ್ರಯಾಣ ಮಾಡಬೇಕಾಗಿದೆ ಎಂದು ವಿವೇಕಾನಂದರು ತಮ್ಮ ಉಪನ್ಯಾಸದಲ್ಲಿ ಸನಾತನ ಸಂಸ್ಕೃತಿಯು ಎತ್ತಿಹಿಡಿಯುವ ಆ ಮೋಕ್ಷತತ್ತ್ವದ ಗಟ್ಟಿತನವನ್ನು ಮನಗಾಣಿಸಿಕೊಟ್ಟಿದ್ದಾರೆ.

### ಪಂಗಡಗಳನ್ನು ಜೀರ್ಣಿಸಿಕೊಳ್ಳುವ ಶಕ್ತಿ

ಸನಾತನ ಹಿಂದೂ ಧರ್ಮದ ಗರ್ಭದಿಂದಲೇ ಉದಿಸಿದ ಬೌದ್ಧಧರ್ಮ – ಜೈನಧರ್ಮಗಳನ್ನೂ ಸನಾತನ ಧರ್ಮವು ತನ್ನ ಸಹಿಷ್ಣುತೆಯ ಗುಣದ ಬಲದಿಂದ ತನ್ನಲ್ಲೇ ಅಡಕಮಾಡಿಕೊಂಡಿತು. ತನ್ನ ಒಡಲಿನಿಂದಲೇ ಮೇಲೆದ್ದ ಸಾಕಾರೋಪಾಸನೆ, ನಿರಾಕಾರೋಪಾಸನೆ, ವಿವಿಧತೆಯನ್ನು ಸಾರುವ ಪುರಾಣಗಳ ರಾಶಿ; ಶೈವ, ವೈಷ್ಣವ, ಶಾಕ್ತ , ಸೌರ, ಗಾಣಪತ್ಯ , ದ್ವೈತ ವಿಶಿಷ್ಟಾದ್ವೈತ ಮುಂತಾದ ಪಂಗಡಗಳು ಸನಾತನಧರ್ಮದ ತಳಹದಿ ಯನ್ನು ಅಲುಗಾಡಿಸುವಂತೆ ಕಂಡರೂ, ಮೂಲಧರ್ಮವೆಂಬ ಅಗಾಧವಾದ ದೇಹವು ಆ ಪಂಗಡಗಳನ್ನೆಲ್ಲ ಹೀರಿಕೊಂಡು, ಜೀರ್ಣಿಸಿಕೊಂಡು, ರಕ್ತಗತವಾಗಿಸಿಕೊಂಡುಬಿಟ್ಟಿತು. ಈ ಸನಾಧರ್ಮದ ಒಡಲಿನಿಂದ ಹೊಸ ಹೊಸ ಪಂಥಗಳು, ವಿಚಾರಧಾರೆಗಳು ಈಗಲೂ ಹುಟ್ಟಿಕೊಳ್ಳುತ್ತಿವೆಯಾದರೂ ಅದು ತನ್ನ ವಿಶಾಲ ಗರ್ಭದೊಳಗೇ ಅವುಗಳನ್ನೆಲ್ಲ ಅಡಕಗೊಳಿಸಿಕೊಂಡು ಬಿಡುತ್ತಿದೆ. ಆನೆಯಿಟ್ಟ ಹೆಜ್ಜೆಯಲ್ಲಿ ಮಿಕ್ಕೆಲ್ಲ ಪ್ರಾಣಿಗಳ ಹೆಜ್ಜೆಗಳೂ ಐಕ್ಯವಾಗಿ ಬಿಡುವಂತೆ ಆ ಪರಿ!

### ಶ್ರುತಿಯ ಮೂಲಕ ಪಡೆದ ಧರ್ಮವೆಂಬ ಕೆಚ್ಚು

ವೇದಗಳೆಂದು ಕರೆಯುವ ಜ್ಞಾನರಾಶಿಯಿಂದ ಸನಾತನ ಧರ್ಮವೆಂಬುದು ಉದಿಸಿರುವುದೇ ವೇದಗಳೆಂದು ಕರೆಯುವ ನೈರಂತರ್ಯಕ್ಕೂ ಶಕ್ತಿಶಾಲಿತೆಗೂ ಕಾರಣವೆಂಬುದನ್ನು ವಿವೇಕಾನಂದರು ತಮ್ಮ ಉಪನ್ಯಾಸದಲ್ಲಿ ಸ್ಪಷ್ಟಪಡಿಸಿದ್ದಾರೆ. ವೇದಗಳಿಗೆ ಆದಿಯೆಂಬುದಾಗಲಿ, ಅಂತ್ಯವೆಂಬುದಾಗಲಿ ಇಲ್ಲ. ಅಷ್ಟುಮಾತ್ರವಲ್ಲದೆ ವೇದಗಳು ಪುರುಷಕೃತವಲ್ಲ, ಅವು ಅಪೌರುಷೇಯ ಎಂಬುದಾಗಿಯೂ ಹೇಳುತ್ತಾರೆ. ಭಗವಂತನಿಂದಲೇ ಕೊಡಲ್ಪಟ್ಟ ವೇದಮಂತ್ರಗಳು ಸದಾಕಾಲದಲ್ಲಿಯೂ ತರಂಗರೂಪದಲ್ಲಿ ಪ್ರಕೃತಿಯಲ್ಲಿ ಸನ್ನಿಹಿತವಾಗಿಯೇ ಇರುತ್ತವೆ. ಆ ಮಂತ್ರಗಳನ್ನು ಸಿದ್ಧಪುರುಷರಾದ ಋಷಿಮುನಿಗಳು ಕಾಲದಿಂದ ಕಾಲಕ್ಕೆ ಸಾಕ್ಷಾತ್ಕಾರ ಮಾಡಿಕೊಂಡು ಲೋಕಕ್ಕೆ ನೀಡಿದ್ದಾರೆ. ಆ ಋಷಿಮುನಿಗಳ ಪಂಕ್ತಿಯಲ್ಲಿ ಕೆಲವು ಮಹಾನ್ ಸ್ತ್ರೀಯರೂ ಇದ್ದಾರೆಂಬುದರತ್ತ ಕೂಡ ವಿವೇಕಾನಂದರು ಅಮೇರಿಕನ್ ಸಭಿಕರ ಗಮನಸೆಳೆದಿದ್ದಾರೆ. ಜೀವಗಳು ಮತ್ತು ಜೀವಗಳ ತಂದೆಯಾದ ಭಗವಂತನ ಪರಸ್ಪರ ಸಂಬಂಧ, ಜೀವ ಮತ್ತು ಜಗತ್ತುಗಳ ನಡುವಣ ಸಂಬಂಧ, ಜೀವಜೀವಗಳ ನಡುವಣ ಸಂಬಂಧ ಮುಂತಾದ ತತ್ತ್ವವಿಚಾರಗಳನ್ನೆಲ್ಲ ಹಿಂದೂ ಸಂಸ್ಕೃತಿಯು ಆ ಅಪೌರುಷೇಯ ಜ್ಞಾನರಾಶಿಯ ಮೂಲಕ ಪಡೆದುಕೊಂಡಿರುವುದೇ ಕಾರಣವಾಗಿ, ಅದು ಎಲ್ಲ

ಆಘಾತಗಳನ್ನೂ ಜಯಿಸಿಕೊಂಡು ಇಂದಿಗೂ ಕೂಡ ತಲೆಯೆತ್ತಿ ನಿಂತಿದೆ.

### ಕಠಿಣಪ್ರಶ್ನೆಗಳಿಗೆ ಉತ್ತರ

ಸೃಷ್ಟಿಯನ್ನು ಕುರಿತಂತೆ ಮಾನವರ ಮನಸ್ಸಿನಲ್ಲಿ ಹುಟ್ಟಬಹುದಾದ ಜಟಿಲಪ್ರಶ್ನೆಗಳಿಗೂ ನಮ್ಮ ಹಿಂದೂ ಸಂಸ್ಕೃತಿಯಲ್ಲಿ ಉತ್ತರಗಳಿವೆ. ಈ ಸೃಷ್ಟಿಯನ್ನು ಉಂಟುಮಾಡಿದವರು ಯಾರು ಎಂದು ಕೇಳಿದರೆ 'ಸರ್ವಶಕ್ತನೂ ಸರ್ವಜ್ಞನೂ ಆದ ಭಗವಂತನೇ ಮಾಡಿದ' ಎಂದು ಹೇಳುತ್ತದೆ. ಸೃಷ್ಟಿಯಲ್ಲಿರುವ ಶಕ್ತಿಯ ಅಂತರಾಳದಲ್ಲೆಲ್ಲ ಆ ಭಗವಂತನೇ ಇದ್ದಾನೆ. ಅವನಾಜ್ಞೆಯಿಂದ ಗಾಳಿ ಬೀಸುತ್ತದೆ, ಬೆಂಕಿ ಉರಿಯುತ್ತದೆ, ಮೋಡಗಳು ಮಳೆಗರೆಯುತ್ತವೆ, ಮೃತ್ಯುವು ತನ್ನ ಕಾರ್ಯವನ್ನೂ ಮಾಡುತ್ತಿದೆ. ಸೃಷ್ಟಿಯ ಉದ್ದೇಶವಾದರೂ ಏನು ಎಂದು ಕೇಳಿದರೆ 'ಅದು ಭಗವಂತನ ಇಚ್ಛೆ, ಅದಕ್ಕೆ ನಿರ್ದಿಷ್ಟವಾದ ಕಾರಣವೇನೂ ಇಲ್ಲ' ಎಂದು ಅದು ಹೇಳುತ್ತದೆ. ಈ ಸೃಷ್ಟಿಯೆಂಬುದಕ್ಕೆ ಆದಿ-ಅಂತ್ಯಗಳಿಲ್ಲ. ಸೃಷ್ಟಿ ಚಕ್ರವು ತುದಿಮೊದಲಿಲ್ಲದೆ ನಿರಂತರವಾಗಿ ತಿರುಗುತ್ತಲೇ ಇರುತ್ತದೆ. ಅದಕ್ಕೆ ನಾಶವೆಂಬುದೂ ಇದೆ, ನಾಶವಾದ ಮೇಲೆ ಅದು ಭಗವಂತನಿಂದಲೇ ಮರುಹುಟ್ಟು ಪಡೆಯುತ್ತದೆ. ''ಈಶ್ವರನು ಸೂರ್ಯ-ಚಂದ್ರರನ್ನೂ ಕಲ್ಪದ ಹಿಂದಿನ ಸೂರ್ಯಚಂದ್ರರಂತೆಯೇ ಸೃಷ್ಟಿಸಿದವನು'' ಎಂದು ನಾವು ಪಠಿಸುವ ಮಂತ್ರವೊಂದು ಈ ಸೃಷ್ಟಿಯ ನೈರಂತರ್ಯವನ್ನು ಸೂಚಿಸುತ್ತದೆ ಎಂದು ವಿವೇಕಾನಂದರು ತಿಳಿಯಹೇಳಿದ್ದಾರೆ.

### ನಾವು ಆತ್ಮಸ್ವರೂಪರು

'ನಾನು ಯಾರು' ಎಂದು ಯಾರಾದರೂ ತಮಗೆ ತಾವೇ ಪ್ರಶ್ನಿಸಿಕೊಂಡರೆ ಅದಕ್ಕೆ ಸನಾತನ ಸಂಸ್ಕೃತಿಯಲ್ಲಿ ಉತ್ತರವಿದೆ. ನಾವು ಅವಿನಾಶಿಯಾದ ಆತ್ಮಸ್ವರೂಪರು. ದೇಹಧಾರಿಗಳಾಗಿ ನಾವು ಅದರೊಳಕ್ಕೆ ಸೇರಿಕೊಂಡಿದ್ದೇವೆ. ನಾವು ದೇಹವಲ್ಲ, ದೇಹವನ್ನು ಎತ್ತಿಹಿಡಿದಿರುವ ದೇಹಿಗಳು. ದೇಹವು ಸಾಯುತ್ತದೆ. ಅದನ್ನು ಎತ್ತಿಹಿಡಿದಿದ್ದ ಆತ್ಮಕ್ಕೆ ಮಾತ್ರ ಸಾವಿಲ್ಲ. ಆತ್ಮಕ್ಕೆ ದೇಹವೇ ಕೇಂದ್ರ. ಆತ್ಮವು ಕೂಡ ಸೃಷ್ಟಿಯಂತೆಯೇ ಆದಿ-ಅಂತ್ಯರಹಿತವಾದುದು. ಅದು ಅಮರ, ಪರಿಪೂರ್ಣ. ಆತ್ಮವು ಒಂದು ದೇಹದಿಂದ ಮತ್ತೊಂದು ದೇಹಕ್ಕೆ ತನ್ನ ಕೇಂದ್ರವನ್ನು ವರ್ಗಾವಣೆ ಮಾಡಿಕೊಳ್ಳುವುದನ್ನೇ ಮರಣವೆನ್ನುತ್ತೇವೆ. ಪರಿಪೂರ್ಣವಾದ ಆತ್ಮವು ದೇಹವೆಂಬ ಪರಿಮಿತವಾದ ಬಂಧನಕ್ಕೆ ಏಕೆ ಸಿಲುಕಿತು, ತಾನು ಅಪರಿಪೂರ್ಣವೆಂಬ ಸಂಕುಚಿತತೆಗೆ ಅದು ಏಕೆ ತುತ್ತಾಯಿತು ಎಂದು ಕೇಳಿದರೆ, 'ಅದೆಲ್ಲ ಭಗವಂತನ ಇಚ್ಛೆ' ಎನ್ನುವುದರ ಹೊರತಾಗಿ ಹೆಚ್ಚಿನ ಉತ್ತರವಿಲ್ಲ. ಆತ್ಮವನ್ನು ಆಯುಧಗಳು ಕತ್ತರಿಸಲಾರವು, ಬೆಂಕಿಯು ಸುಡಲಾರದು, ನೀರು ನೆನೆಯಿಸಲಾರದು, ಗಾಳಿ ಒಣಗಿಸಲಾರದು — ಆದ್ದರಿಂದಲೇ ಅದು ಒಂದು ದೇಹವು ನಾಶವಾದರೆ ಮತ್ತೊಂದನ್ನು ತನ್ನದಾಗಿಸಿಕೊಳ್ಳುತ್ತದೆ.

### ವಿಷಮತೆಗಳಿಗೆ ಸಮಾಧಾನ

ನಾವಾರೂ ಈ ಜಗತ್ತಿಗೆ ಹೊಸಬರಲ್ಲ. ಅನಾದಿಕಾಲದಿಂದಲೂ ನಾವು ಹುಟ್ಟುತ್ತಲೂ ಸಾಯುತ್ತಲೂ ಇದ್ದುಕೊಂಡಿದ್ದೇವೆ. ಪ್ರಳಯವಾದಾಗಲೂ ಆತ್ಮರೂಪದಲ್ಲಿ ಭಗವಂತನೊಳಗೇ ಇದ್ದು ಕೊಂಡು, ಹೊಸಸೃಷ್ಟಿಯ ಬಳಿಕ ದೇಹಧಾರಿಗಳಾಗುತ್ತೇವೆ. ಭೂತಕಾಲಕ್ಕೆ ಸೇರಿಹೋದ ಜನ್ಮಗಳನ್ನೆಲ್ಲ ಪೂರ್ವಜನ್ಮಗಳೆಂದೂ ಭವಿಷ್ಯತ್‌ಕಾಲದಲ್ಲಿ ಪಡೆಯಬೇಕಾಗಿರುವ ಜನ್ಮಗಳನ್ನು ಪುನರ್ಜನ್ಮಗಳೆಂದೂ ಕರೆಯಲಾಗಿದೆ. ವರ್ತಮಾನ ಜನ್ಮದ ನಮ್ಮ ಸುಖದುಃಖಗಳು ಭೂತಕಾಲದಲ್ಲಿ ನಾವೆತ್ತಿದ ಜನ್ಮಗಳ ಬಲದಿಂದ ನಿರ್ಧರಿಸಲ್ಪಡುತ್ತವೆ. ವರ್ತಮಾನದ ಜನ್ಮದಲ್ಲಿ ಕೆಲವರು ಸುಖದ ಸುಪ್ಪತ್ತಿಗೆಯಲ್ಲಿ ಹುಟ್ಟುತ್ತಾರೆ; ಸುಂದರವಾದ ದೇಹ ಮತ್ತು ಮಾನಸಿಕ ಶಕ್ತಿಯೊಂದಿಗೆ ದೀರ್ಘಕಾಲ ಆರೋಗ್ಯವನ್ನು ಅನುಭವಿಸುತ್ತಾರೆ. ಅವರು ಅಂದುಕೊಂಡದ್ದೆಲ್ಲ ಆಗಿಬಿಡುತ್ತದೆ. ಕೆಲವರು ದುಃಖದಲ್ಲಿಯೇ ಹುಟ್ಟುತ್ತಾರೆ; ಕುರುಡರಾಗಿ, ಕುಂಟರಾಗಿ, ಮೂಕರಾಗಿ, ಮೂರ್ಖರಾಗಿ ಶೋಚನೀಯವಾದ ಸ್ಥಿತಿಗಳಲ್ಲಿ ಹೇಗೋ ಬದುಕಿನ ಬಂಡಿಯನ್ನು ಎಳೆಯುತ್ತಾರೆ. ಕೆಲವರು ಎಳವೆಯಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ತಬ್ಬಲಿಗಳಾಗಿ ಗೋಳಾಡುತ್ತಾರೆ. ಕೆಲವರು ಬೇಗನೆ ಗಂಡಂದಿರನ್ನು ಕಳೆದುಕೊಂಡು ಕಣ್ಣೀರಿನಲ್ಲಿ ಕೈತೊಳೆಯುತ್ತಾರೆ.

ಪರಮದಯಾಳುವೂ ನ್ಯಾಯಪರನೂ ಆದ ಭಗವಂತನೇ ನಮ್ಮೆಲ್ಲರನ್ನೂ ಸೃಷ್ಟಿಸಿರುವಾಗ, ಅವನ ಆಳ್ವಿಕೆಯಲ್ಲಿಯೇ ನಾವೆಲ್ಲರೂ ಇರುವಾಗ, ಒಬ್ಬರಿಗೊಂದು ಮತ್ತೊಬ್ಬರಿಗೊಂದು ಎಂಬ ಪಕ್ಷಪಾತ ಮಾಡುತ್ತಾನೆಯೇ ಎಂಬ ಸಂದೇಹವು ಉದಿಸುತ್ತದೆ. ಈ ಸಂದೇಹಕ್ಕೆ ಭಾರತೀಯ ಸಂಸ್ಕೃತಿಯು ನೀಡಿರುವ ಸಮಾಧಾನವನ್ನು ವಿವೇಕಾನಂದರು ತಮ್ಮ ಚಿಕಾಗೊ ಉಪನ್ಯಾಸದಲ್ಲಿ ಹೃದ್ಯವಾಗಿ ನಿರೂಪಿಸಿದ್ದಾರೆ. ಮನುಷ್ಯನ ವರ್ತಮಾನದ ಬದುಕಿನಲ್ಲಿ ತೋರುವ ಏರುಪೇರುಗಳಿಗೆ ಕಳೆದುಹೋದ ಜನ್ಮಗಳಲ್ಲಿ ಅವರು ಮಾಡಿದ ಪುಣ್ಯಪಾಪಗಳೆಂಬ ಕರ್ಮಗಳೇ ಕಾರಣವೆಂಬ ಸಮಾಧಾನವನ್ನು ಎತ್ತಿಹಿಡಿದಿದ್ದಾರೆ. ಕಾರಣವಿಲ್ಲದೆ ಯಾವುದೇ ಕಾರ್ಯವು ಸಂಭವಿಸುವುದಿಲ್ಲ ಎಂಬ 'ಕಾರ್ಯಕಾರಣಸಂಬಂಧ'ವನ್ನು ಇಲ್ಲಿಗೆ ಹೊಂದಿಸಿಕೊಳ್ಳಬೇಕು. ಮನುಷ್ಯನು ಸುಖಿಯೋ ದುಃಖಿಯೋ ಆಗಲು ಅವನ ಪೂರ್ವಕರ್ಮಗಳೇ ಕಾರಣ ಎಂಬುದು ಸಿದ್ಧಾಂತವೇ ಸರಿ. ಪುಣ್ಯಕರ್ಮಗಳನ್ನು ಮಾಡಿದವರು ಸುಖದಲ್ಲಿ ಹುಟ್ಟುತ್ತಾರೆ, ಪಾಪಕರ್ಮಗಳನ್ನು ಮಾಡಿದವರು ದುಃಖದಲ್ಲಿ ಹುಟ್ಟುತ್ತಾರೆ. ವರ್ತಮಾನ ಜನ್ಮದಲ್ಲಿ ನಾವು ಮಾಡುವ ಪಾಪಪುಣ್ಯಗಳಿಂದ ನಮ್ಮ ಭವಿಷ್ಯತ್ಕಾಲದ ಜನ್ಮಗಳು ನಿರ್ಧರಿಸಲ್ಪಡುತ್ತವೆ. 'ಮಾಡಿದ್ದುಣ್ಣೋ ಮಹಾರಾಯ' ಎಂಬ ಕನ್ನಡ ಗಾದೆಯೂ ಈ ಕರ್ಮಫಲ ಸಿದ್ಧಾಂತವನ್ನೇ ಪುಷ್ಟೀಕರಿಸುತ್ತದೆ.

ವರ್ತಮಾನಕಾಲದ ನಮ್ಮ ಘೋರಸಂಕಟಗಳನ್ನು ಪರಮಾತ್ಮನು ನೋಡುತ್ತಿದ್ದರೂ 'ಸ್ವಯಂಕೃತಾಪರಾಧ, ನಾನೇನೂ

ಮಾಡಲು ಸಾಧ್ಯವಿಲ್ಲ, ಅನುಭವಿಸಲೇಬೇಕು' ಎಂದು ಲೀಲಾಮೂರ್ತಿಯಾಗಿ ಮೌನವಾಗಿದ್ದು ಬಿಡುತ್ತಾನೆಯೇ ಎಂದು ಕೇಳಿದರೆ ಸನಾತನಸಂಸ್ಕೃತಿಯಲ್ಲಿ ಅದಕ್ಕೆ ಉತ್ತರವಿದೆ. ''ನೀನೇ ನಮ್ಮ ತಂದೆ, ಸರ್ವಶಕ್ತ ಮತ್ತು ದಯಾಸಿಂಧು. ನೀನೇ ನಮ್ಮ ತಾಯಿ, ನೀನೇ ನಮ್ಮ ಪ್ರಿಯಮಿತ್ರ; ನೀನೇ ಎಲ್ಲ ಶಕ್ತಿಗಳ ಮೂಲ. ಶಕ್ತಿಯನ್ನು ನೀಡು ನಮಗೆ. ಜಗದ ಭಾರವನ್ನು ಹೊರುವವನು ನೀನು, ಈ ನನ್ನ ಜೀವನದ ಸಣ್ಣಹೊರೆಯನ್ನು ಹೊರಲು ಸಹಾಯಮಾಡು'' ಎಂದು ಆರ್ತರಾಗಿ ಬೇಡಿಕೊಂಡರೆ, ಅಸಹನೀಯವಾದ ನಮ್ಮ ಪರಿತಾಪವನ್ನು ಹಗುರಗೊಳಿಸಿಕೊಡುತ್ತಾನೆ.

### ಹುಟ್ಟುಸಾವುಗಳಿಗೊಂದು ಅಂತ್ಯ

ನಾವು ಹಿಂದಿನ ಜನ್ಮಗಳಲ್ಲಿ ಏನಾಗಿದ್ದೆವು ಎಂಬುದನ್ನು ಜ್ಞಾಪಿಸಿಕೊಳ್ಳಲು ಕೂಡ ಸಾಧ್ಯವಿದೆಯೆಂದು ವಿವೇಕಾನಂದರು ಚಿಂತನೆ ನಡೆಸಿದ್ದಾರೆ. ನಾವು ಸಾಮಾನ್ಯವಾಗಿ ಮನಸ್ಸಾಗರದ ಮೇಲುಮೇಲಿನ ಪದರಗಳಲ್ಲಿಯೇ ವ್ಯವಹರಿಸುತ್ತಿರುತ್ತೇವೆ. ಆದರೆ ಮನದಾಳದಲ್ಲಿ ನಮ್ಮ ಗತಕಾಲದ ಅನುಭವಗಳೆಲ್ಲ ಹುದುಗಿವೆ. ನಾವು ಮನದ ಆಳಕ್ಕಾಳಕ್ಕಿಳಿದರೆ ಅವುಗಳೆಲ್ಲವೂ ಮೇಲೆ ಬರುತ್ತವೆ. ಆಗ ನಾವು ನಮ್ಮ ಹಿಂದಿನ ಜನ್ಮಗಳಲ್ಲಿ ಏನಾಗಿದ್ದೆವೆಂಬುದನ್ನು ಕೂಡ ಅರಿತುಕೊಳ್ಳಬಹುದು ಎಂದು ಹೇಳಿದ್ದಾರೆ. ಪುರಾಣಗಳಲ್ಲಿ 'ಜಾತಿಸ್ಮರ'ರ ವರ್ಣನೆಯಿದೆ. ಭಾಗವತದ ಕಥೆಯೊಂದರಲ್ಲಿ ಬರುವ ಜಡಭರತನೆಂಬ ಮಹಾಮುನಿಯು ಹುಟ್ಟಿನಿಂದಲೇ ತನ್ನ ಹಿಂದಿನ ಜನ್ಮಗಳನ್ನು ಅರಿತುಕೊಳ್ಳಬಲ್ಲ ಶಕ್ತಿಯನ್ನು ಪಡೆದುಕೊಂಡಿದ್ದನೆಂಬ ವರ್ಣನೆಯಿದೆ.

ಹುಟ್ಟಿನಿಂದ ಹುಟ್ಟಿಗೆ ಮತ್ತು ಸಾವಿನಿಂದ ಸಾವಿಗೆ ಆತ್ಮಗಳು ವಿಕಾಸಗೊಂಡು ಸಂಸ್ಕಾರಗೊಳ್ಳಲೂಬಹುದು ಅಥವಾ ಸಂಕೋಚಗೊಂಡು ಹೆಚ್ಚು ಹೆಚ್ಚಿನ ದುಃಖದಾರಿದ್ರ್ಯಗಳಿಗೆ ತಳ್ಳಲ್ಪಡಲೂಬಹುದು. ಹಾಗಾದರೆ ಮಾನವನು ಬಿರುಗಾಳಿಗೆ ಸಿಕ್ಕಿರುವ ಸಣ್ಣ ಧೋಣಿಯಂತಾಗಿ ಕೆಟ್ಟಕರ್ಮಗಳ ಹೊಡೆತಕ್ಕೆ ಸಿಲುಕಿ ಅನವರತವೂ ಅಲೆಯುತ್ತಲೇ ಇರಬೇಕೇ ಎಂಬ ಪ್ರಶ್ನೆಗೂ ಸನಾತನ ಸಂಸ್ಕೃತಿಯಲ್ಲಿ ಸಮಾಧಾನವಿರುವುದನ್ನು ವಿವೇಕಾನಂದರು ತೋರಿಸಿಕೊಟ್ಟಿದ್ದಾರೆ. ''ಅಮೃತಪುತ್ರರೇ ಕೇಳಿ, ಸ್ವರ್ಗಧಾಮದಲ್ಲಿರುವವರು ಕೂಡ ಕೇಳಿ. ಮೋಹದಾಚೆ, ಕತ್ತಲಿನಾಚೆ ಇರುವ ಸನಾತನ ಪುರುಷನನ್ನು ನಾನು ಕಂಡಿದ್ದೇನೆ. ಅವನನ್ನು ಸಾಕ್ಷಾತ್ಕಾರಮಾಡಿಕೊಂಡರೆ ಮಾತ್ರವೇ ನೀವು ಸಾವಿನಿಂದ ಪಾರಾಗಬಹುದು'' ಎಂಬ ಜಯಘೋಷದಿಂದ ಕೂಡಿದ ಭರವಸೆಯನ್ನು ನೀಡಿರುವುದನ್ನು ವಿವೇಕಾನಂದರು ಉಲ್ಲೇಖಿಸಿದ್ದಾರೆ.

### ಪ್ರೀತಿಯ ಸಿದ್ಧಾಂತ

ಹುಟ್ಟುಸಾವುಗಳಿಂದ ಬಿಡುಗಡೆಹೊಂದಲು ಮುಮುಕ್ಷುತ್ವದ ಮಾರ್ಗವಿದೆ. ಆ ಮಾರ್ಗವು ಮೈಗೂಡಿದಾಗ ''ಭಗವಂತನೇ ನನಗೆ ಬೇಕು, ಮುಂದಕ್ಕೆ ಯಾವ ಜನ್ಮಗಳೂ ನನಗೆ ಬೇಡ'' ಎಂಬ ಭಾವನೆಯೊಂದಿಗೆ ಅವನಿಗೇ ಸಂಪೂರ್ಣವಾಗಿ ಶರಣಾಗತರಾಗಬೇಕು. ಆಗ 'ಆತ್ಮಸಾಕ್ಷಾತ್ಕಾರ'ವೆಂಬ ಸ್ಥಿತಿಯನ್ನು ತಲಪುತ್ತೇವೆ. ಶರೀರಧಾರಣೆಯ ಕೇಂದ್ರವಾದ ಆತ್ಮವು ವಿಶ್ವಾತ್ಮನಲ್ಲಿ ಬೆರೆತುಹೋಗುತ್ತದೆ. ಆಗ ಆತ್ಮನು ದೇವರನ್ನು ಪಡೆದುಕೊಂಡು, ದೇವರೊಂದಿಗೆ ಅನಂತವೂ ಪರಿಪೂರ್ಣವೂ ಆದ ಆನಂದವನ್ನು ಅನುಭವಿಸುತ್ತಾನೆ.

ಹಾಗೆ ಜೀವರ ಬಂಧನ ಜಾರಬೇಕಾದರೆ ದೇವರ ಪೂರ್ಣಾನುಗ್ರಹವು ಬೇಕು. ಅವನ ಅನುಗ್ರಹವು ಪರಿಶುದ್ಧಾತ್ಮರಿಗೆ ಮಾತ್ರವೇ ದೊರಕುತ್ತದೆ. ಅವರು ಸರ್ವಪಾಪಗಳಿಂದಲೂ ಮುಕ್ತರಾಗಿ ಈ ಜನ್ಮದಲ್ಲಿಯೇ ದೇವರನ್ನು ನೋಡುತ್ತಾರೆ. ಮುಂದಕ್ಕೆ ಅವರೆಂದೂ ಭಯಂಕರವಾದ ಹುಟ್ಟುಸಾವುಗಳ ಆಳ್ವಿಕೆಗೆ ಒಳಪಡುವುದಿಲ್ಲ ಎಂದು ಹೇಳುತ್ತ ವಿವೇಕಾನಂದರು 'ಇದೇ ಹಿಂದೂಧರ್ಮದ ಕೇಂದ್ರವಿಚಾರ' ಎಂದಿದ್ದಾರೆ.

ಸನಾತನ ಸಂಸ್ಕೃತಿಯು ಭಗವಂತನು ನಿರಾಕಾರನೂ ಹೌದು, ಸಾಕಾರನೂ ಹೌದು ಎಂಬ ಎರಡೂ ವಿಚಾರಗಳನ್ನು ಒಪ್ಪುತ್ತದೆ. ವಿಗ್ರಹಾರಾಧನೆಯು ಸಾಮಾನ್ಯಮಟ್ಟದ್ದೆನಿಸಿದರೂ ಅದು ದೋಷಪೂರ್ಣವಾದುದೇನೂ ಅಲ್ಲ. ಇಹಲೋಕದಲ್ಲಿಯೋ ಪರಲೋಕದಲ್ಲಿಯೋ ದೊರಕಬಹುದಾದ ಪ್ರತಿಫಲದ ನಿರೀಕ್ಷೆಯಿಂದ ದೇವರನ್ನು ಪ್ರೀತಿಸುವುದು ತಪ್ಪಲ್ಲವಾದರೂ ''ದೇವರನ್ನು ಪ್ರೀತಿಗಾಗಿಯೇ ಪ್ರೀತಿಸುವುದು'' ಎಂಬ ತತ್ತ್ವವು ಅತ್ಯುನ್ನತವಾದುದು. ''ಹೇ ಜಗದೀಶ್ವರ, ನನಗೆ ದ್ರವ್ಯಬೇಡ, ಮಕ್ಕಳು ಬೇಡ, ಪಾಂಡಿತ್ಯ ಬೇಡ. ನಿನ್ನ ಇಚ್ಛೆಹಾಗಿದ್ದರೆ ನಾನು ಅನೇಕ ಜನ್ಮಗಳನ್ನು ಎತ್ತುತ್ತೇನೆ. ಆದರೆ ಪ್ರತಿಫಲದ ಅಪೇಕ್ಷೆಯಿಲ್ಲದೆ ನಿಃಸ್ವಾರ್ಥಭಾವದಿಂದ, ಪ್ರೀತಿಗಾಗಿಯೇ ನಿನ್ನನ್ನು ಪ್ರೀತಿಸುವುದನ್ನು ಅನುಗ್ರಹಿಸು'' ಎಂದು ಬೇಡಿಕೊಳ್ಳಬೇಕು. ಹಾಗೆ ಬೇಡಿದಾಗ ಆ ಪರಿಯ ಪ್ರೀತಿ ಸಿದ್ಧಾಂತದ ಫಲವಾಗಿ ದೇಹಬಂಧನವು ಜಾರಿ ಪೂರ್ಣತೆಯು ಪ್ರಾಪ್ತವಾಗುತ್ತದೆ. ಅದೇ ಹುಟ್ಟುಸಾವುಗಳಿಂದಲೂ ತತ್ಪರಿಣಾಮವಾದ ದುಃಖಗಳಿಂದಲೂ ಬಿಡುಗಡೆಯೆನಿಸುತ್ತದೆ, ಅದೇ ಮೋಕ್ಷ.

ಪಾಪಪುಣ್ಯಗಳೇ ಆತ್ಮನು ದೇಹಬಂಧನಕ್ಕೆ ತುತ್ತಾಗಲು ಕಾರಣವೆಂದಾದರೆ, ಮೊತ್ತಮೊದಲ ಬಾರಿಗೆ ಅದು ದೇಹಬಂಧನಕ್ಕೆ ತುತ್ತಾದಾಗ ಪಾಪಪುಣ್ಯಗಳೇನನ್ನೂ ಅದು ಮಾಡಿರಲಿಲ್ಲವಲ್ಲಾ, ಬಂಧನವೇಕಾಯಿತು ಎಂಬ ಪ್ರಶ್ನೆಯು ಮಾತ್ರ ಗೂಢವಾಗಿಯೇ ಉಳಿಯುತ್ತದೆ. ಸೃಷ್ಟಿಗೆ ಹೇಗೆ ಆದಿಯೆಂಬುದಿಲ್ಲವೋ ಆತ್ಮವು ದೇಹಧಾರಿಯಾದುದಕ್ಕೂ ಆದಿಯೆಂಬುದಿಲ್ಲ ಎಂಬುದೇ ಅದಕ್ಕಿರುವ ಉತ್ತರ. ಆತ್ಮವು ದೇಹಬಂಧನಕ್ಕೆ ತುತ್ತಾದುದು ಯಾವಾಗ ಎಂಬುದಕ್ಕೆ ಉತ್ತರವಿಲ್ಲದಿದ್ದರೂ ಅದು ಆ ದೇಹಬಂಧನದಿಂದ ಬಿಡುಗಡೆಪಡೆದುಕೊಳ್ಳಬಲ್ಲದೇ ಎಂಬ ಪ್ರಶ್ನೆಗೆ ಮಾತ್ರ, ನಾವು ಮೇಲೆ ನೋಡಿದಂತೆ, 'ಹೌದು, ಬಿಡುಗಡೆಗೊಳ್ಳಬಲ್ಲದು' ಎಂಬ ಉತ್ತರವಿದೆ.

## ಯಾರೂ ಪಾಪಿಗಳಲ್ಲ

ಸನಾತನ ಸಂಸ್ಕೃತಿಯು, ಮಾನವನನ್ನು 'ನೀನು ಪಾಪಿ' ಎಂದು ಹೇಳುವುದಿಲ್ಲ. ''ನೀವು ಅಮೃತಪುತ್ರರಾಗಿದ್ದೀರಿ, ಭಗವಂತನ ಪುಣ್ಯಸಂತಾನವಾಗಿದ್ದೀರಿ, ಅಮೃತಾನಂದದಲ್ಲಿ ಭಾಗಿಗಳಾಗಿ ದ್ದೀರಿ, ಪರಿಶುದ್ಧಾತ್ಮರಾಗಿದ್ದೀರಿ'' ಎಂದೇ ಹೇಳುತ್ತದೆ. ಈ ಚಿಂತನೆ ಯನ್ನು ಮುಂದುವರಿಸುತ್ತ ವಿವೇಕಾನಂದರು, ''ಪಾಪಿಗಳು ಎಂದು ಮಾನವನನ್ನು ಕರೆಯುವುದೇ ಘೋರಪಾತಕ, ಮಾನವ ಸ್ವಭಾವಕ್ಕೆ ಬಗೆಯುವ ಮಹಾದ್ರೋಹ. ಸಿಂಹಗಳೇ ಬನ್ನಿ. ನೀವು ಕುರಿಗಳು ಎಂಬ ಭ್ರಾಂತಿಯನ್ನು ಕೊಡವಿಬಿಡಿ. ಅಮೃತಾತ್ಮರೂ ಮುಕ್ತಾತ್ಮರೂ ಆನಂದಮಯರೂ ನಿತ್ಯಾತ್ಮರೂ ನೀವಾಗಿದ್ದೀರಿ. ನೀವು ಪ್ರಕೃತಿಯ ಸೇವಕರಲ್ಲ, ಪ್ರಕೃತಿಯು ನಿಮ್ಮ ಸೇವಕ'' ಎಂದು ಹೇಳುತ್ತ ಅದು ವಿವೇಕಾನಂದೋಪನಿಷತ್ತಿನ ಮಹಾವಾಕ್ಯ ವೆಂಬಂತೆ ಅದಕ್ಕೆ ಪ್ರಾಣಪ್ರತಿಷ್ಠೆ ಮಾಡಿದ್ದಾರೆ. ಕ್ರೈಸ್ತಧರ್ಮದಲ್ಲಿ ಮನುಷ್ಯನನ್ನು 'ಪಾಪಿ' ಎಂದು ನಿರ್ದೇಶಿಸಿರುವುದರಿಂದ ಅದ ನ್ನೆಲ್ಲ ತೊಡೆದುಹಾಕಿ ಅಮೃತತ್ವದ ನವಸಂದೇಶವನ್ನು ಸಾರುವ ಸಲುವಾಗಿ ಅಂತಹ ಸಿಂಹಗರ್ಜನೆಯನ್ನು ಮೊಳಗಿಸಿದ್ದಾರೆ.

ಈ ಸಂದರ್ಭದಲ್ಲಿಯೇ ವಿವೇಕಾನಂದರು 'ದೇಹಬಂಧನ ದಿಂದ ಬಿಡುಗಡೆ ಪಡೆಯುವುದು' ಎಂಬ ಮೋಕ್ಷಧರ್ಮಕ್ಕೆ ಎಲ್ಲಾ ಮಾನವರೂ ಅರ್ಹರೆಂಬುದನ್ನು ಸನಾತನ ಸಂಸ್ಕೃತಿಯು ಸಾರುತ್ತಿದೆ ಎಂಬುದರತ್ತಲೂ ಸಭಾಸದರ ಗಮನ ಸೆಳೆದಿದ್ದಾರೆ. ''ಹಿಂದುವಾದವನಿಗೆ ಮಾತ್ರವೇ ಮುಕ್ತಿ, ಉಳಿದವರು ಮುಕ್ತಿಗೆ ಅರ್ಹರಲ್ಲ ಎಂಬ ಒಂದೇ ಒಂದು ನುಡಿಯನ್ನು ಇಡೀ ಸಂಸ್ಕೃತ ತತ್ತ್ವಶಾಸ್ತ್ರನಿಧಿಯಲ್ಲಿ ಎಲ್ಲಿಯಾದರೂ ಹುಡುಕಿತೋರಿಸಿ ನೋಡೋಣ'' ಎಂದು ಸವಾಲೆಸೆದಿದ್ದಾರೆ. ''ಯಾರೇ ಆಗಲಿ, ಯಾವುದೇ ರೂಪದಲ್ಲೇ ಆಗಲಿ ನನ್ನ ಬಳಿಗೆ ಬಂದರೆ ನಾನು ಅವರನ್ನು ಸ್ವೀಕರಿಸುತ್ತೇನೆ; ಅಂತಿಮವಾಗಿ ನನ್ನ ಬಳಿಗೆ ಬರುವ ವಿವಿಧ ಪಥಗಳಲ್ಲಿ ಸಾಗಿಬಂದು, ನನ್ನನ್ನೇ ಸೇರಲು ಎಲ್ಲ ಜನರೂ ಪ್ರಯತ್ನಿಸುತ್ತಿದ್ದಾರೆ'' ಎಂಬ ಗೀತೆಯ ಅದ್ಭುತ ಸತ್ಯವನ್ನು ವಿವೇಕಾ ನಂದರು ಆ ಸಂದರ್ಭಕ್ಕೆ ಉಲ್ಲೇಖಿಸಿದ್ದಾರೆ.

## ಮತಾಂತರವು ಸಲ್ಲದು

ಎಲ್ಲ ಧರ್ಮಗಳಿಗೂ ಸ್ಫೂರ್ತಿಶಕ್ತಿಯಾಗಿ ಇರುವವನು ಒಬ್ಬನೇ ದೇವರು. ಬೇರೆ ಬೇರೆ ಬಣ್ಣಗಳ ಗಾಜುಗಳ ಮೂಲಕ ಬೆಳಕು ಹರಿದುಬಂದಾಗ, ಅದು ಬೇರೆ ಬೇರೆ ಬಣ್ಣಗಳನ್ನು ತಳೆ ದಂತೆ ಕಂಡರೂ ಇರುವ ಬೆಳಕು ಒಂದೇ ಒಂದು ಮಾತ್ರ. ಪ್ರತಿ ಯೊಂದು ಮತಧರ್ಮವೂ ಮಾನವನನ್ನು ದೇವರಾಗುವಂತೆ ವಿಕಾಸಗೊಳಿಸುತ್ತದೆ. ವಿರೋಧಗಳೆಲ್ಲವೂ ಕೇವಲ ತೋರಿಕೆ ಯವು. ಒಂದೇ ಸತ್ಯವು ಬೇರೆ ಬೇರೆ ಸ್ವಭಾವಗಳುಳ್ಳ ವಿವಿಧ ಸಂದರ್ಭಗಳಿಗೆ ಹೊಂದಿಕೊಳ್ಳಲು ಪ್ರಯತ್ನಿಸುವಾಗ ಪರಸ್ಪರ ವಿರೋಧಗಳು ಕಂಡು ಬರುವುದಷ್ಟೆ! ''ಹಲವು ಮಣಿಗಳನ್ನು ಕೂಡಿಸುವ ಒಂದು ದಾರದಂತೆ ನಾನೇ ಎಲ್ಲ ಧರ್ಮಗಳಲ್ಲೂ ಇದ್ದೇನೆ. ಎಲ್ಲಿ ಅಸಾಧಾರಣವಾದ ಪಾವಿತ್ರ್ಯ ಮತ್ತು ಮಹಾ ಶಕ್ತಿಯು ಉದಿಸಿ, ಮಾನವ ಜನಾಂಗವನ್ನು ಪರಿಶುದ್ಧಗೊಳಿಸು ತ್ತಿರುವುದೋ, ಅಲ್ಲೆಲ್ಲ ಇರುವುದು ನಾನೇ ಎಂದು ತಿಳಿ'' ಎಂಬ ಗೀತೆಯ ನುಡಿಯನ್ನು ವಿವೇಕಾನಂದರು ಈ ಸಂದರ್ಭಕ್ಕೆ ಉದ್ಧರಿ ಸಿದ್ದಾರೆ.

ಭಗವಂತನನ್ನು ಪಡೆಯಲು ಮನುಷ್ಯನು ತಾನಿರುವ ಧರ್ಮ ದಲ್ಲಿಯೇ ಇದ್ದರೆ ಸಾಕು, ಮತಾಂತರಗೊಳ್ಳಬೇಕಾಗಿಲ್ಲ ಎಂದು ಸನಾತನ ಸಂಸ್ಕೃತಿಯ ಹಿನ್ನೆಲೆಯಲ್ಲಿ ವಿವೇಕಾನಂದರು ಬೋಧಿ ಸಿದ್ದಾರೆ. ಕ್ರೈಸ್ತನಾದವನು ಹಿಂದುವೋ ಬೌದ್ಧನೋ ಆಗಬೇಕಿಲ್ಲ; ಅಂತೆಯೇ ಹಿಂದುವಾಗಲಿ, ಬೌದ್ಧನಾಗಲಿ ಕ್ರೈಸ್ತನಾಗಬೇಕಿಲ್ಲ. ಆದರೆ ಪ್ರತಿಯೊಬ್ಬನೂ ಉಳಿದವರ ಉನ್ನತಭಾವನೆಗಳನ್ನು ಮೈ ಗೂಡಿಸಿಕೊಂಡು, ತನ್ನ ವೈಯಕ್ತಿಕತೆಯನ್ನು ಕಳೆದುಕೊಳ್ಳದೆ ಸಾಕ್ಷಾ ತ್ಕಾರಕ್ಕಾಗಿ ಪ್ರಯತ್ನಿಸಬೇಕು ಎಂದು ತಿಳಿವಳಿಕೆ ನೀಡಿದ್ದಾರೆ. ಈ ಮೂಲಕ ಕ್ರೈಸ್ತರು ಭಾರತದಲ್ಲಿ ನಡೆಸುತ್ತಿದ್ದ ಮತಾಂತರವನ್ನು ಯಥೋಚಿತವಾಗಿ ಖಂಡಿಸಿದ್ದಾರೆ. ಭಾರತದಲ್ಲಿರುವ ಕ್ರೈಸ್ತಮಿಷ ನರಿಗಳು ಜನರನ್ನು ಮತಾಂತರಿಸುವುದನ್ನು ಬಿಟ್ಟು, ಅವರು ತಮ್ಮ ಹಸಿವನ್ನು ನೀಗಿಸಿಕೊಳ್ಳಲು ಅನುಕೂಲವಾಗುವಂತೆ ಅವ ರನ್ನು ಸ್ವಾವಲಂಬಿಗಳನ್ನಾಗಿ ಮಾಡಬೇಕೆಂದು ಮನವಿಮಾಡಿ ದ್ದಾರೆ. ''ಸರ್ವರೂ ತಮ್ಮ ಬದುಕಿನಲ್ಲಿ ಮಂಗಳವನ್ನೇ ಕಾಣಲಿ, ಯಾರೂ ದುಃಖಕ್ಕೆ ತುತ್ತಾಗುವುದು ಬೇಡ'' ಎಂಬ ಭಾರತೀಯ ಋಷಿ ಮುನಿಗಳು ಮಾಡಿರುವ ನಿತ್ಯಮಂತ್ರಪಠಣಕ್ಕೆ ವಿವೇಕಾ ನಂದರ ಉಪದೇಶವು ಹೊಂದಿಕೊಳ್ಳುತ್ತದೆ.

## ವಿಶ್ವಧರ್ಮದ ಕಲ್ಪನೆ

ಜಗತ್ತಿನಲ್ಲಿ ಎಂದಾದರೂ ಒಂದು 'ವಿಶ್ವಧರ್ಮ'ಎಂಬುದು ಅಸ್ತಿತ್ವಕ್ಕೆ ಬರುವುದಾದರೆ ಅದರ ಲಕ್ಷಣಗಳೇನಿರಬೇಕೆಂಬುದನ್ನು ವಿವೇಕಾನಂದರು ತಮ್ಮ ಚಿಕಾಗೋ ಉಪನ್ಯಾಸದಲ್ಲಿ ಚಿತ್ರಿಸಿರು ವುದು ಅಭೂತಪೂರ್ವವಾಗಿದೆ. ೧. ಅಸ್ತಿತ್ವಕ್ಕೆ ಬರಬಹುದಾದ ಆ ವಿಶ್ವಧರ್ಮವು ಕಾಲದೇಶಗಳ ಮೇರೆಗಳನ್ನು ಮೀರಿ, ಸರ್ವರಿಗೂ ಸ್ವೀಕಾರಯೋಗ್ಯವಾಗಿರಬೇಕು. ಅದು ಹಿಂದೂಧರ್ಮ, ಬೌದ್ಧ ಧರ್ಮ, ಜೈನಧರ್ಮ, ಕ್ರೈಸ್ತಧರ್ಮ, ಮಹಮದೀಯಧರ್ಮ ಎಂದು ಮಾತ್ರವಾಗಿರದೆ, ಆ ಎಲ್ಲವುಗಳ ಮೊತ್ತವಾಗಿರಬೇಕು. ೨. ಅದು ಯಾವ ದೇವರನ್ನು ಕುರಿತು ಬೋಧಿಸುತ್ತದೆಯೋ, ಆ ದೇವರಷ್ಟೇ ಅನಂತವಾಗಿರಬೇಕು. ಅದರ ಪ್ರಕಾಶವು ಕೃಷ್ಣಾ ನುಯಾಯಿಗಳಿಗೆ ಹೇಗೋ ಹಾಗೆಯೇ ಕ್ರಿಸ್ತಾನುಯಾಯಿಗಳಿಗೂ ಲಭ್ಯವಾಗುವಂತಿರಬೇಕು. ೩. ಆ ಧರ್ಮವು ಸಂತರಿಗೆ ಹೇಗೋ ಹಾಗೆಯೇ ಅದು ಪಾಪಿಗಳಿಗೂ ದೊರಕುವಂತಿರಬೇಕು. ಕಾಡು ಮನುಷ್ಯನಿಂದ ಹಿಡಿದು, ತನ್ನ ಬುದ್ಧಿಬಲದಿಂದ ಅತ್ಯುನ್ನತ ಸ್ಥಿತಿ ಗೇರಿರುವ ವ್ಯಕ್ತಿಯವರೆಗೆ ಅದು ಎಲ್ಲರನ್ನೂ ತನ್ನವರನ್ನಾಗಿಸಿ ಕೊಳ್ಳುವಂತಿರಬೇಕು. ತನ್ನ ವೈಶಾಲ್ಯದಿಂದ ಅನಂತಬಾಹುಗಳನ್ನು

ಚಾಚಿ, ಯಾವ ಭೇದವೂ ಇಲ್ಲದೆ ಎಲ್ಲರನ್ನೂ ಆಲಿಂಗಿಸಿಕೊಳ್ಳು ವಂತಿರಬೇಕು. ೪. ಪರಿಪೂರ್ಣವಾಗಿದೆ ಎಂದು ಹೇಳುವಾಗಲೂ, ಹೊಸ ಬೆಳವಣಿಗೆಗಳು, ಪರಿವರ್ತನೆಗಳು ಆಗಬೇಕಾದರೆ ಅದ ರಲ್ಲಿ ಅನಂತ ಅವಕಾಶಗಳಿರಬೇಕು. ೫. ಆ ವಿಶ್ವಧರ್ಮವು ತನ್ನ ಆಡಳಿತ ವ್ಯವಸ್ಥೆಯಲ್ಲಿ, ತನ್ನನ್ನು ಒಪ್ಪದವರನ್ನು ಹಿಂಸಿಸಲು ಮುಂದಾಗಬಾರದು. ಇತರ ಧರ್ಮಗಳ ವಿಷಯದಲ್ಲಿ ಅಸಹನೆಗೆ ಅಲ್ಲಿ ಸ್ವಲ್ಪವೂ ಎಡೆಯಿರಬಾರದು. ೬. ಆ ವಿಶ್ವಧರ್ಮವು ಸ್ತ್ರೀಯ ರೆನ್ನದೆ, ಪುರುಷರೆನ್ನದೆ, ಮಾನವಕೋಟಿಯೊಳಗಿರುವ ದಿವ್ಯತೆ ಯನ್ನು ಗುರುತಿಸಿ, ಅದು ತನ್ನ ನೈಜವೂ ದಿವ್ಯವೂ ಆದ ಸ್ವರೂಪ ವನ್ನು ಅರಿಯಲು ನೆರವಾಗುವಂತಿರಬೇಕು. ವಿಶ್ವಧರ್ಮದ ಲಕ್ಷಣ ಗಳನ್ನು ನಿರೂಪಿಸುತ್ತಲೇ ವಿವೇಕಾನಂದರು ಅಂತಹ ವಿಶ್ವಧರ್ಮದ ಗದ್ದುಗೆಯನ್ನೇರಲು ಸನಾತನ ಹಿಂದೂ ಸಂಸ್ಕೃತಿ ಮಾತ್ರವೇ ಯೋಗ್ಯವಾಗಿದೆ ಎಂಬುದನ್ನು ಪರೋಕ್ಷವಾಗಿ ಹೇಳಿದ್ದಾರೆ ಎಂದು ಭಾವಿಸಿದರೆ ತಪ್ಪಾಗುವುದಿಲ್ಲ.

### ವಿಶ್ವವಿಜಯಿಯಾದ ಸಾಂಸ್ಕೃತಿಕ ಧ್ವಜ

ಸನಾತನ ಹಿಂದೂಸಂಸ್ಕೃತಿಯು ನಿಃಸ್ವಾರ್ಥ ಪ್ರಯತ್ನಕ್ಕೆ ಭಗ ವಂತನು ಯಶಸ್ಸಿನ ಕಿರೀಟವನ್ನು ತೊಡಿಸುತ್ತಾನೆಂದು ನಂಬುತ್ತದೆ. ಶ್ರೀಮಂತರಾಗಲು ಇತರರನ್ನು ದೋಚುವುದು ಅತಿ ಹತ್ತಿರದ ಹಾದಿಯೆಂಬ ನೀತಿಯನ್ನು ಅದು ಅಲ್ಲಗಳೆಯುತ್ತದೆ. ಉದಾರ ಹೃದಯ ಮತ್ತು ಸತ್ಯಪ್ರೇಮಗಳಿದ್ದರೆ ಯಾವಕಾರ್ಯವೂ ದುಸ್ತರ ವಲ್ಲವೆಂದು ಅದು ಸಾರುತ್ತದೆ. ಧರ್ಮಗಳ ನಡುವಣ ಪರಸ್ಪರ ಘರ್ಷಣೆಯನ್ನು ನಿವಾರಿಸುವ ಪ್ರತಿಯೊಂದು ಭಾವನೆಯನ್ನು ಅದು ಮೆಚ್ಚುತ್ತದೆ. ಸ್ವರಮೇಳದಲ್ಲಿ ಕೇಳಿಬರುವ ಅಪಸ್ವರಗಳನ್ನು ಕೂಡ, ಒಟ್ಟಿನ ಸ್ವರಮೇಳದಲ್ಲಿ ಮಧುರತರವನ್ನಾಗಿ ಮಾಡಲು ಅದು ಪ್ರಯತ್ನಿಸುತ್ತದೆ. ಯಾವುದಾದರೂ ಒಂದು ಧರ್ಮವನ್ನು ವಿಶ್ವಸಿಂಹಾಸನದಮೇಲೆ ಕೂರಿಸಿ, ಮಿಕ್ಕ ಧರ್ಮಗಳನ್ನು ಹೊಸಕಿ ಹಾಕಿದರೆ, ಅದರಿಂದ ಧಾರ್ಮಿಕ ಐಕ್ಯತೆಯೆಂಬುದು ಸಾಧಿತ ವಾಗುತ್ತದೆಯೆಂದು ಯಾರಾದರೂ ಭಾವಿಸಿದರೆ ಅದನ್ನು ಅಲ್ಲ ಗಳೆಯುತ್ತದೆ. ಮತಾಂತರದಿಂದ ಧಾರ್ಮಿಕ ಸಂಘರ್ಷದ ಹೊರ ತಾಗಿ, ಮತ್ತಾವುದೇ ಪ್ರಯೋಜನವೂ ಇಲ್ಲವೆಂದು ಅದು ಸಾರಿ ಹೇಳುತ್ತದೆ. ಪ್ರತಿಯೊಂದು ಧರ್ಮದವರೂ ತಾವಿರುವಲ್ಲಿಯೇ ಇದ್ದುಕೊಂಡು, ಮಾನವಜನ್ಮದ ಪರಮ ಪ್ರಯೋಜನವಾದ ಮೋಕ್ಷವನ್ನು ಸಾಧಿಸಬಹುದೆಂದು ಅದು ಭರವಸೆ ನೀಡುತ್ತದೆ. ಪವಿತ್ರತೆ, ಪರಿಶುದ್ಧತೆ, ದಾನಶೀಲತೆ, ದಯಾಪರತೆ ಮುಂತಾ ದವು ಯಾವುದೋ ಒಂದು ಧರ್ಮದ ಸ್ವಂತ ಆಸ್ತಿಯಲ್ಲವೆಂದೂ ಪ್ರತಿಯೊಂದು ಧರ್ಮವೂ ಅತ್ಯಂತ ಉದಾರಚರಿತರಾದ ಸ್ತ್ರೀ ಪುರುಷರನ್ನು ರೂಪಿಸಿದೆಯೆಂದೂ ಅದು ಗುರುತಿಸಿ ಹೇಳುತ್ತದೆ. ಯಾರಾದರೂ ತಮ್ಮ ಧರ್ಮವೊಂದೇ ಉಳಿಯತಕ್ಕದ್ದು, ಮಿಕ್ಕವು ನಾಶಹೊಂದತಕ್ಕವು ಎಂದು ಭಾವಿಸಿದ್ದರೆ, ಅಂತಹವರ ವಿಷಯ ದಲ್ಲಿ ಅದು ಮರುಕವನ್ನು ವ್ಯಕ್ತಪಡಿಸುತ್ತದೆ. ಹೋರಾಟದಿಂದ ಸುಖವಿಲ್ಲ, ಸೌಹಾರ್ದದಿಂದಲೇ ಸುಖ; ವಿನಾಶದಿಂದ ಶಾಂತಿ ಯಿಲ್ಲ, ಸ್ವೀಕಾರದಿಂದಲೇ ಶಾಂತಿ; ವೈಮನಸ್ಯದಿಂದ ವಿಕಾಸವಿಲ್ಲ, ಸಾಮರಸ್ಯದಿಂದಲೇ ವಿಕಾಸ ಎಂದು ಅದು ಶಂಖಧ್ವನಿ ಮೊಳಗಿಸಿ ಹೇಳುತ್ತದೆ. ಇವೆಲ್ಲವೂ ವಿಶ್ವಧರ್ಮದ, ವಿಶ್ವಸಂಸ್ಕೃತಿಯ ಸಲ್ಲಕ್ಷಣ ಗಳಲ್ಲದೆ ಬೇರೆಯಲ್ಲ.

ಚಿಕಾಗೊ ಉಪನ್ಯಾಸವು ಭಾರತೀಯ ಧರ್ಮ-ಸಂಸ್ಕೃತಿಗಳ ಪ್ರಮುಖವಾದ ಪ್ರಮೇಯಗಳನ್ನೆಲ್ಲ ಸಾರಪೂರ್ಣವಾಗಿ ತಿಳಿಸಿ ಕೊಟ್ಟಿತು, ಅದರ ಹಿರಿಮೆಗಳನ್ನು ಸ್ಫುಟಗೊಳಿಸಿಕೊಟ್ಟಿತು, ಆ ಸಂಸ್ಕೃತಿಯ ಎತ್ತರಕ್ಕೇರಬಲ್ಲ ಸಂಸ್ಕೃತಿಯು ಜಗತ್ತಿನಲ್ಲಿ ಮತ್ತೊಂದು ಇಲ್ಲವೆಂಬುದನ್ನು ಸಾಧಾರವಾಗಿ ಮನವರಿಕೆ ಮಾಡಿಕೊಟ್ಟಿತು ಎಂದು ಹೇಳಿದರೆ ಅದು ಅತಿಶಯೋಕ್ತಿಯಲ್ಲ. ಸನಾತನ ಹಿಂದೂ ಸಂಸ್ಕೃತಿಯ ವಿಜಯಪತಾಕೆಯನ್ನು ಜಾಗತಿಕ ಮಟ್ಟದಲ್ಲಿ ಏರಿಸಿ ಹಾರಿಸಿದ ಕೀರ್ತಿ ಸ್ವಾಮಿ ವಿವೇಕಾನಂದರಿಗೆ ಸಲ್ಲುತ್ತದೆ.

ಭಾರತೀಯರಾದ ನಾವು ಮಹಾಪುರುಷರು ಅವತರಿಸಿದ ದಿನವನ್ನು 'ಜಯಂತಿ'ಯೆಂದು ಆಚರಿಸುತೇವೆ. ಗ್ರಂಥರಾಶಿ ಯಲ್ಲಿ ಭಗವದ್ಗೀತೆಗೆ ಮಾತ್ರವೇ 'ಗೀತಾಜಯಂತಿ'ಯೆಂಬ ಆಚರಣೆಯಿದೆ. ಉಪನ್ಯಾಸಕ್ಕೊಂದು ಜಯಂತಿಯೆಂಬ ಆಚರ ಣೆಯು ಯಾವುದಕ್ಕಾದರೂ ಇದ್ದರೆ ಅದು ಸ್ವಾಮಿ ವಿವೇಕಾನಂದರ ಚಿಕಾಗೋ ಉಪನ್ಯಾಸಗಳಿಗೆ ಮಾತ್ರವೇ ಎಂದು ಹೇಳಿದರೆ ಅದ ಕ್ಕಿಂತ ಅದ್ಭುತವಾದ ವಿಚಾರವು ಯಾವುದು ತಾನೇ ಇದೆ! ಅವರ ಉಪನ್ಯಾಸಗಳು ಜಗತ್ತಿನ ಜಿಜ್ಞಾಸುಗಳ ಚಿಂತನೆಯ ದಿಕ್ಕನ್ನೇ ಬದಲಾಯಿಸಿಬಿಟ್ಟುವೆಂದರೆ ಅದಕ್ಕಿಂತ ದೊಡ್ಡಪವಾಡವು ಯಾವುದು ತಾನೆ ಇದೆ! ಜಗತ್ತಿನಲ್ಲಿ ಕ್ರೈಸ್ತಧರ್ಮ-ಸಂಸ್ಕೃತಿಗಳೇ ಅತ್ಯಂತ ಶ್ರೇಷ್ಠವೆಂದು ಸಾರಲು ಕುಳಿತಿದ್ದ ಕೂಪಮಂಡೂಕಗಳನ್ನು ವಿವೇಕಾ ನಂದರು ಮೇಲೆತ್ತಿ ಸನಾತನ ಹಿಂದೂ ಸಂಸ್ಕೃತಿಯೆಂಬ ಸಮುದ್ರಕ್ಕೆ ಬೀಸಿ ಎಸೆದ ಆ ರಸನಿಮಿಷಗಳನ್ನು ಜಗತ್ತಿನ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡಲಾಗಿದೆ.

### ಪ್ರಳಯವು ಯಾವಾಗ

ಜಗತ್ತು ಪ್ರಳಯವಾಗಿಬಿಡುತ್ತದೆ ಎಂಬ ಕಲ್ಪನೆ ಆಗಾಗ ಹುಟ್ಟಿ ಕೊಳ್ಳುತ್ತಿರುತ್ತದೆ. ಅಂತಹ ಒಂದು ಕಲ್ಪನೆ ವಿವೇಕಾನಂದರ ಕಾಲ ದಲ್ಲೂ ಹುಟ್ಟಿಕೊಂಡಿತ್ತು. ಪ್ರಳಯದ ಮಾತಿನಿಂದ ಗಾಬರಿ ಗೊಂಡಿದ್ದ ಭಕ್ತನೊಬ್ಬನು ವಿವೇಕಾನಂದರ ಬಳಿಗೆ ಬಂದು ''ಮಹಾರಾಜ್, ಸದ್ಯದಲ್ಲಿಯೇ ಪ್ರಳಯವಾಗುತ್ತದೆಯೆಂತಲ್ಲ ಮಹಾರಾಜ್, ಅದು ಯಾವಾಗ'' ಎಂದು ಅಳುಕಿನಿಂದ ಕೇಳಿ ದನು. ಅದಕ್ಕೆ ವಿವೇಕಾನಂದರು ''ಸನಾತನ ಹಿಂದೂ ಸಂಸ್ಕೃತಿಯು ಈ ಭೂಮಂಡಲದ ಮೇಲೆ ಜೀವಂತವಾಗಿರುವವರೆಗೆ ಪ್ರಳಯ ವಾಗುವುದಿಲ್ಲವಪ್ಪಾ; ನಮ್ಮ ಸನಾತನ ಸಂಸ್ಕೃತಿಯು ಈ ನೆಲ ದಿಂದ ಅಳಿಸಿಹೋದಂದೇ ಜಗತ್ತು ಅಳಿಸಿಹೋಗುತ್ತದೆಯೆಂದು ತಿಳಿದುಕೋ'' ಎಂದು ತಿಳಿಯಹೇಳಿದರು. ಜಗತ್ತಿನ ಅಳಿವು ಉಳಿವು ಗಳು ನಮ್ಮ ಸನಾತನ ಹಿಂದೂ ಸಂಸ್ಕೃತಿಯ ಅಳಿವು ಉಳಿವುಗಳನ್ನೇ ಅವಲಂಬಿಸಿದೆ ಯೆಂದರೆ ಏನಾಶ್ಚರ್ಯ ! 

# ಸ್ವಾಮಿ ವಿವೇಕಾನಂದರ ಚಿಕಾಗೋ ಉಪನ್ಯಾಸಗಳ ತಾತ್ತ್ವಿಕ ನೆಲೆಗಟ್ಟು

ಡಾ. ಎಚ್.ಎನ್. ಮುರಳೀಧರ್

ಚಿಕಾಗೋ ಉಪನ್ಯಾಸಗಳಲ್ಲಿ ಕಂಡುಬರುವ ಸ್ವಾಮೀಜಿ ವಿಚಾರಗಳ ಹಿಂದೆ ಅವರ ಜೀವನ, ಚಿಂತನೆಗಳನ್ನು ರೂಪಿಸಿರುವ ಆಳವಾದ ತಾತ್ತ್ವಿಕತೆಯಿದೆ. ಈ ಕುರಿತು ಜಿಜ್ಞಾಸೆ ನಡೆಸಿರುವ ಲೇಖಕರು ನಿವೃತ್ತ ಕನ್ನಡ ಪ್ರಾಧ್ಯಾಪಕರು. ಉತ್ತಮ ವಾಗ್ಮಿಗಳು ಹಾಗೂ ಲೇಖಕರಾಗಿರುವ ಅವರು ದಿವ್ಯತ್ರಯರ ಕೃತಿಗಳನ್ನು ಕುರಿತು ಆಳವಾಗಿ ಅಧ್ಯಯನ ಮಾಡಿದ್ದಾರೆ ಹಾಗೂ ಹಲವು ಕನ್ನಡ ಕೃತಿಗಳನ್ನು ರಚಿಸಿದ್ದಾರೆ. ಅವರು ಬೆಂಗಳೂರು ರಾಮಕೃಷ್ಣ ಮಠದ ಭಕ್ತರು.



**ಸ್ವಾ**ಮಿ ವಿವೇಕಾನಂದರು ೧೮೯೩ರಲ್ಲಿ ಚಿಕಾಗೋ ವಿಶ್ವ ಧರ್ಮ ಸಮ್ಮೇಳನದಲ್ಲಿ ಮಾಡಿದ ಉಪನ್ಯಾಸಗಳಿಗೆ ಈಗ ನೂರಿಪ್ಪತ್ತೈದು ತುಂಬಿದೆ. ಚಿಕಾಗೋ ಉಪನ್ಯಾಸವೆಂದಾಕ್ಷಣ ನಮ್ಮ ಸ್ಮರಣೆಗೆ ಬರುವುದು **'ಅಮೆರಿಕದ ಸೋದರ ಸೋದರಿಯರೆ...'** ('Sisters and Brothers of America...') ಎಂಬ ಸಂಬೋಧನೆ; ಇನ್ನು ಕೆಲವೊಮ್ಮೆ, ಆ ಸಂಬೋಧನೆಗೆ ದೊರೆತ ಸುದೀರ್ಘ ಕರತಾಡನ. ಇವು ಒಂದು ರೀತಿಯಲ್ಲಿ ಅವರ ಮಾತುಗಳಿಗೆ ಒಂದು ಜಾನಪದೀಯ ಸ್ವರೂಪವನ್ನೇ ಒದಗಿಸಿಬಿಟ್ಟಿವೆ. ಸಮಕಾಲೀನ ಸನ್ನಿವೇಶದಲ್ಲಿ ಸ್ವಾಮಿ ವಿವೇಕಾನಂದರ ಜೀವನ-ಸಂದೇಶಗಳಿಗೇ ಒಂದು ಬಗೆಯ ಜಾನಪದೀಯತೆ ಪ್ರಾಪ್ತವಾಗಿರುವುದರಿಂದ ಇದು ಸಹಜವೂ ಆಗಿದೆ. ಆದರೆ ಇವೆಲ್ಲದರ ನಡುವೆಯೇ ನಾವು ಅವರ ಉಪನ್ಯಾಸಗಳ ಪಠ್ಯಕ್ಕೆ ನೇರವಾಗಿ ಮುಖಾಮುಖಿಯಾಗುವ ಅಗತ್ಯವೂ ಇದೆ. ಇದು ಅವರನ್ನು ನಿರಂತರ ವರ್ತಮಾನಕ್ಕೆ ಅನ್ವಯವಾಗುವಂತೆ ಮಾಡುವ ಒಂದು ಶೋಧದ ದಾರಿಯಾಗಿದೆ.

ಜನಪ್ರಿಯವಾದ ಗ್ರಹಿಕೆಯಲ್ಲಿ ನಾವು 'ಚಿಕಾಗೋ ಉಪನ್ಯಾಸ' ಎಂದು ಏಕವಚನದಲ್ಲಿ ವ್ಯವಹರಿಸಿದರೂ ಅವರು ಸಮ್ಮೇಳನದಲ್ಲಿ ಆರು ಸಂದರ್ಭಗಳಲ್ಲಿ ಆಡಿದ ಮಾತುಗಳು ಅಲ್ಲಿ ದಾಖಲಾಗಿವೆ.

೧. ಸ್ವಾಗತಕ್ಕೆ ಸ್ಪಂದನೆ (ಸೆಪ್ಟೆಂಬರ್, ೧೧)
೨. ಭಿನ್ನಮತಕ್ಕೆ ಕಾರಣ (ಸೆಪ್ಟೆಂಬರ್, ೧೫)
೩. ಹಿಂದೂಧರ್ಮದ ಮೇಲಿನ ಪ್ರಬಂಧ (ಸೆಪ್ಟೆಂಬರ್, ೧೯)
೪. ಧರ್ಮವು ಭಾರತದ ತುರ್ತು ಅಗತ್ಯವಲ್ಲ (ಸೆಪ್ಟೆಂಬರ್, ೨೦)
೫. ಬೌದ್ಧಧರ್ಮವು ಹಿಂದೂಧರ್ಮದ ಸಾಫಲ್ಯ (ಸೆಪ್ಟೆಂಬರ್, ೨೬)
೬. ಅಂತಿಮ ಅಧಿವೇಶನದ ನುಡಿ (ಸೆಪ್ಟೆಂಬರ್, ೨೭)

ಇವುಗಳಲ್ಲಿ ಮೊದಲನೆಯ ಉಪನ್ಯಾಸವು ಮುಖ್ಯವಾಗಿ ತನ್ನ ಸಂಬೋಧನೆಯ ಕಾರಣದಿಂದಲೇ ಜನಮಾನಸದಲ್ಲಿ ಸ್ಮರಣೀಯವಾಗಿದೆ. ಹಾಗೆ ನೋಡಿದರೆ ಈ ಸಂಬೋಧನೆಗೊಂದು ರೂಪಕಾತ್ಮಕ ಮಹತ್ತ್ವವಿದೆ. ಏಕೆಂದರೆ ಇಲ್ಲಿ ಎರಡು ವಿಶಿಷ್ಟ ಹಾಗೂ ವಿಭಿನ್ನ ಸಂಸ್ಕೃತಿ-ನಾಗರಿಕತೆಗಳ ನಡುವಣ ಸಂವಾದವಿದೆ. ಇಲ್ಲಿಯವರೆಗೆ ಸಂವಾದಕ್ಕೆ ತೆರೆದುಕೊಳ್ಳದೆ ಪರಸ್ಪರ ವಿರುದ್ಧ ಧ್ರುವಗಳಂತಿದ್ದ ಸಂಸ್ಕೃತಿಗಳನ್ನು ಈ ಸಂಬೋಧನೆ ಮುಖಾಮುಖಿಯಾಗಿಸಿದೆ; ಭ್ರಾತೃತ್ವದ ಸೇತುವೆಯ ಮೂಲಕ ಈ ಜನಾಂಗಗಳನ್ನು ವಿಶಾಲವಾದ ಮಾನವತೆಯ ಪರಿಧಿಯಲ್ಲಿ ಒಗ್ಗೂಡಿಸಿದೆ. ಈ ಮುಖಾಮುಖಿಯ ಸ್ವರೂಪವನ್ನು ಸೋದರಿ ನಿವೇದಿತಾ ಅತ್ಯಂತ ಸಮರ್ಥವಾಗಿ ಗುರುತಿಸಿದ್ದಾರೆ. ಅಲ್ಲಿ ನೆರೆದಿದ್ದ ಸಭೆ ಎಲ್ಲ ಅರ್ಥಗಳಲ್ಲಿಯೂ ಪಾಶ್ಚಾತ್ಯ ಪ್ರಜ್ಞೆಯ ಪ್ರಾತಿನಿಧಿಕ ರೂಪವಾಗಿತ್ತು. ಅಲ್ಲದೆ ಸ್ವತಃ ಚಿಕಾಗೋ ನಗರವೇ ಐರೋಪ್ಯ ನಾಗರಿಕ ಪ್ರಜ್ಞೆಯ ಪ್ರವಾಹದ ಎಲ್ಲ ಧಾರೆಗಳನ್ನು ತನ್ನೊಳಗೆ ಸೇರಿಸಿಕೊಂಡು ಐತಿಹಾಸಿಕವಾಗಿಯೂ ಭೌಗೋಳಿಕವಾಗಿಯೂ ಈ ಪ್ರಾತಿನಿಧ್ಯಕ್ಕೆ ಅರ್ಹವಾಗಿತ್ತು. ಇಷ್ಟೆಲ್ಲದರ ಮೇಲೆ

ಅದು ಬದುಕಿನ ಹೊಸದೊಂದು ಅರ್ಥಕ್ಕೆ ಹಸಿದು ಕುಳಿತಿತ್ತು. ಇಂತಹ ಸಭೆಗೆ ಮುಖಮಾಡಿ ನಿಂತ ಸ್ವಾಮಿ ವಿವೇಕಾನಂದರ ಹಿಂದಾದರೋ ಸಾವಿರಾರು ವರ್ಷಗಳಿಂದ ಹರಿದು ಬಂದ ಪೌರ್ವಾತ್ಯದ ಪ್ರಜ್ಞಾ ಪರಂಪರೆಯಿತ್ತು. ಮಾನವನ ಬದುಕಿನ ಸಾರ್ಥಕತೆಯ ಅನ್ವೇಷಣದ ಹಲವು ದಾರಿಗಳ ಹೆಜ್ಜೆ ಗುರುತು ಗಳಿದ್ದವು. ಆ ಎಲ್ಲ ಸಾಧನೆ-ಸಿದ್ಧಿಗಳಿಗೆ ಸ್ವಾಮೀಜಿಯವರು ವಾಹಕ ಮಾತ್ರವಾಗಿ ನಿಂತಿದ್ದರು. ಒಬ್ಬ ವ್ಯಕ್ತಿಗಿಂತ ಹೆಚ್ಚಾಗಿ, ಸಮಗ್ರ ಭಾರತದ ಧಾರ್ಮಿಕ ಪ್ರಜ್ಞೆ, ಶತಮಾನಗಳಿಂದ ರೂಪು ಗೊಳ್ಳುತ್ತ ಬಂದಿದ್ದ ಸಮಸ್ತ ಜನಸಮುದಾಯದ ಸಂದೇಶ ಅವರ ಮೂಲಕ ಮಾತನಾಡಿತು.[೧] ಹೀಗಾಗಿ ಆ ಸುಮುಹೂರ್ತದಲ್ಲಿ ಅಲ್ಲಿ ಸಂಭವಿಸಿದ್ದು ಎರಡು ಭೂಖಂಡಗಳ ನಡುವಣ ಸಂವಾದವೂ ಹೌದು.

ಇಷ್ಟರ ಮೇಲೆ ಈ ಸಂವಾದವೆನ್ನುವುದು ಸಂಬೋಧಿತ ಸಮುದಾಯದ ಅಗತ್ಯ ಮಾತ್ರವಾಗಿರದೆ ಸಂಬೋಧಕ ಸಮುದಾಯದ ಅಗತ್ಯವೂ ಆಗಿತ್ತು. ಏಕೆಂದರೆ ಪರಸ್ಪರ ಸಂಬೋಧಿಸಿಕೊಂಡಲ್ಲದೆ ಯಾವ ದಾರ್ಶನಿಕತೆಯೂ ವಿಶ್ವಾತ್ಮಕ ಸ್ವರೂಪವನ್ನು ಪಡೆಯಲಾರದು; ನಿರ್ದಿಷ್ಟ ಕಾಲದೇಶಗಳ ಗಡಿಗಳನ್ನು ದಾಟಿ ಸರ್ವಸಾಮಾನ್ಯತೆಯ ಸ್ತರಕ್ಕೆ ವಿಸ್ತರಿಸಲಾರದು; ಎಲ್ಲಕ್ಕಿಂತ ಮುಖ್ಯವಾಗಿ, ಮನುಷ್ಯ-ಮನುಷ್ಯರನ್ನು ಕೂಡಿಸಲಾರದು. ಹೀಗಾಗಿ ಸ್ವಾಮಿ ವಿವೇಕಾನಂದರ ಸಂಬೋಧನೆಯೆನ್ನುವುದು ಸ್ವಯಂ ಹಿಂದೂ ಧಾರ್ಮಿಕತೆಯೇ ತನ್ನನ್ನು ತಾನು ಮರುರೂಪಿಸಿಕೊಳ್ಳುವ ಸಾಂದರ್ಭಿಕತೆಯೂ ಆಗಿತ್ತು. ಸೋದರಿ ನಿವೇದಿತೆಯ ಮಾತುಗಳಲ್ಲಿ ಹೇಳುವುದಾದರೆ, ''ಸ್ವಾಮಿ ವಿವೇಕಾನಂದರು ಮಾತನಾಡಲು ಪ್ರಾರಂಭಿಸಿದಾಗ, ಅದು ಹಿಂದೂ ಧರ್ಮದ ಧಾರ್ಮಿಕತೆಯ ಬಗೆಗಿನ ಮಾತಾಗಿತ್ತು; ಆದರೆ ಅವರು ಮಾತುಗಳನ್ನು ಮುಗಿಸಿದಾಗ ಹಿಂದೂ ಧರ್ಮವೇ ಸೃಷ್ಟಿಯಾಗಿತ್ತು.[೨] ಈ ಹಿನ್ನೆಲೆಯಲ್ಲಿ ನೋಡಿದಾಗ ಸ್ವಾಮಿ ವಿವೇಕಾನಂದರು ಕೇವಲ ಹಿಂದೂ ಧರ್ಮವನ್ನು ವ್ಯಾಖ್ಯಾನಿಸದೆ, ಹಿಂದೂಧರ್ಮವನ್ನೂ ಒಳಗೊಂಡಂತೆ ಯಾವುದೇ ಧರ್ಮವು ತನ್ನ ದೇಶಕಾಲನಿಷ್ಠ ವಿಶಿಷ್ಟತೆಗಳನ್ನು ಉಳಿಸಿಕೊಂಡೂ ವಿಶ್ವಾತ್ಮಕ ಮಾನವತೆಯ ಪ್ರತಿಪಾದನೆಗೆ ಅನುಗುಣವಾಗಿ ವಿಸ್ತರಿಸಬೇಕಾದ ಅಗತ್ಯ ಹಾಗೂ ಅದರ ವಿಧಾನಗಳ ಬಗೆಯನ್ನು ವ್ಯಾಖ್ಯಾನಿಸಿದರೆಂದು ಹೇಳಬೇಕಾಗುತ್ತದೆ. ಈ ಪರಿಪ್ರೇಕ್ಷ್ಯದಲ್ಲಿಯೇ ಅವರ ಸಂದೇಶಗಳ ಸ್ವರೂಪವನ್ನು ಗ್ರಹಿಸಿಕೊಳ್ಳಬೇಕಾದ ಜರೂರು ಕೂಡ ಇದೆ. ಈ ದೃಷ್ಟಿಯಿಂದ ನೋಡಿದಾಗ ಅವರು ಒಂದು ಕಡೆ ಐರೋಪ್ಯ ವರ್ಗವನ್ನು ಸಂಬೋಧಿಸಿದ ಉಸಿರಿನಲ್ಲಿಯೇ ಇನ್ನೊಂದು ಕಡೆ ಭಾರತೀಯ ಹಿಂದೂ ಸಮಾಜವನ್ನೂ ಸಂಬೋಧಿಸಿದರೆಂದು ಹೇಳಬೇಕಾಗುತ್ತದೆ. ಯಾವುದು ಐರೋಪ್ಯ ವರ್ಗಕ್ಕೆ ಸಂಬೋಧನೆಯೋ ಅದು ಸ್ವಯಂ ಹಿಂದೂ ಧರ್ಮಕ್ಕೆ ಸ್ವಗತವಾಗಿ ಪರಿಣಮಿಸಬೇಕಾದ ಅಗತ್ಯತೆಯೂ ಇಲ್ಲಿ ಎದ್ದುಕಾಣುತ್ತದೆ; ಇದು ಹಿಂದೂ ಧರ್ಮವು ತನ್ನನ್ನು ತಾನು ಪುನಾರಚಿಸಿಕೊಳ್ಳಲು ನೀಡಿದ ಪಂಥಾಹ್ವಾನವಾಗಿಯೂ ಕಾಣುತ್ತದೆ. ಅವರ ಪ್ರಾರಂಭದ ಮಾತುಗಳಲ್ಲಿಯೇ ಇದರ ಸೂಚನೆಯನ್ನು ಗ್ರಹಿಸಬಹುದು.

ಮೊದಲ ಭಾಷಣದ ಪ್ರಾರಂಭದಲ್ಲಿ ಕೃತಜ್ಞತಾ ಸಮರ್ಪಣೆಯ ನುಡಿಗಳಿವೆ. ಆದರೆ ಆ ನುಡಿಗಳ ಮೂಲಕವಾಗಿ ಸ್ವಾಮೀಜಿಯವರು ತಮ್ಮನ್ನು ತಾವು ಯಾವ ರೀತಿ ಗುರುತಿಸಿಕೊಂಡಿದ್ದರೆಂಬ ಅಸ್ಮಿತೆಯೊಂದರ ಸೂಚನೆಯೂ ದಾಖಲಾಗುತ್ತದೆ. ಅವರು ತಮ್ಮನ್ನು ತಾವು ಅತ್ಯಂತ ಪ್ರಾಚೀನ ಸಂನ್ಯಾಸೀ ಪರಂಪರೆ ಮತ್ತು ಧರ್ಮಗಳ ಸದಸ್ಯನನ್ನಾಗಿ ಮಾತ್ರವಲ್ಲದೆ ಎಲ್ಲ ವರ್ಗಗಳು ಹಾಗೂ ಪಂಥಗಳಿಗೆ ಸೇರಿದ ಕೋಟ್ಯನುಕೋಟಿ ಹಿಂದೂಗಳಲ್ಲಿ ಒಬ್ಬನನ್ನಾಗಿಯೂ ಗುರುತಿಸಿಕೊಂಡು ಅವರೆಲ್ಲರ ಮುಖವಾಣಿಯಾಗುತ್ತಾರೆ. ಹೀಗಾಗಿಯೇ ಅವರ ವ್ಯಕ್ತಿಗತ ಅಸ್ತಿತ್ವಕ್ಕೊಂದು ಸಾಮುದಾಯಿಕ ನೆಲೆಗಟ್ಟು ದೊರೆಯುವುದಲ್ಲದೆ ಅವರ ವಿಚಾರಗಳಿಗೆ ಪ್ರಾತಿನಿಧಿಕ ಮೌಲ್ಯವೂ ಸಿದ್ಧಿಸುತ್ತದೆ.

ಅವರ ಮುಂದಿನ ಮಾತುಗಳು ಮೇಲ್ನೋಟಕ್ಕೆ ಸರಳವಾದ ಹೇಳಿಕೆಗಳಂತೆ ಕಂಡರೂ ಅವುಗಳ ಮೂಲಕ ಎಲ್ಲ ಕಾಲಗಳ ಎಲ್ಲ ದೇಶಗಳ ಧರ್ಮಾನುಯಾಯಿಗಳು ಗಮನಿಸಲೇಬೇಕಾದ ಮೌಲ್ಯವೊಂದರ ಸ್ಥಾಪನೆಯಾಗುತ್ತದೆ. ಅವರು ಹೇಳುತ್ತಾರೆ.

''ಜಗತ್ತಿಗೆ ಸಹಿಷ್ಣುತೆಯನ್ನೂ ಸರ್ವಧರ್ಮ ಸ್ವೀಕಾರಾರ್ಹವನ್ನೂ ಬೋಧಿಸಿದ ಧರ್ಮಕ್ಕೆ ಸೇರಿದವನು ನಾನೆಂಬ ಹೆಮ್ಮೆ ನನ್ನದು. ನಾವು ಸರ್ವಮತ ಸಹಿಷ್ಣುತೆಯನ್ನು ಒಪ್ಪುತ್ತೇವಷ್ಟೇ ಅಲ್ಲದೆ ಸಕಲ ಧರ್ಮಗಳೂ ಸತ್ಯವೆಂದು ನಂಬುತ್ತೇವೆ. ಯಾವ ಧರ್ಮದ ಪವಿತ್ರಭಾಷೆಗೆ 'Exclusion' (ಹೊರಗಿಡುವುದು, ಬಹಿಷ್ಕರಿಸುವುದು) ಎಂಬ ಪದವನ್ನು ಅನುವಾದಿಸಲು ಸಾಧ್ಯವೇ ಇಲ್ಲವೋ ಅಂತಹ ಧರ್ಮಕ್ಕೆ ಸೇರಿದವನೆಂದು ಹೇಳಲು ನನಗೆ ಹೆಮ್ಮೆಯೆನಿಸುತ್ತದೆ. ಪ್ರಪಂಚದ ಎಲ್ಲ ಧರ್ಮಗಳ ಎಲ್ಲ ರಾಷ್ಟ್ರಗಳ ಸಂಕಟಪೀಡಿತ ನಿರಾಶ್ರಿತರಿಗೆ ಆಶ್ರಯವನ್ನಿತ್ತ ರಾಷ್ಟ್ರಕ್ಕೆ ಸೇರಿದವನೆಂಬ ಹೆಮ್ಮೆ ನನ್ನದು...''[೩]

ಸ್ವಾಮೀಜಿಯವರ ಈ ಮಾತುಗಳಲ್ಲಿ ಧರ್ಮಾಭಿಮಾನವೆನ್ನುವುದು ಹೊಸ ವ್ಯಾಖ್ಯಾನಕ್ಕೆ ಒಳಗಾಗುತ್ತಿದೆ. ಅಥವಾ ಅದರ ರೂಢಿಯ ಅರ್ಥದ ತಿದ್ದುಪಡಿಯಾಗುತ್ತಿದೆ ಎಂದರೂ ಸರಿಯೆ. ಸಾಮಾನ್ಯವಾಗಿ ಹೆಮ್ಮೆ ಅಥವಾ ಅಭಿಮಾನವನ್ನು ಶ್ರೇಷ್ಠತೆಯೊಂದಿಗೆ ತಳುಕು ಹಾಕಲಾಗುತ್ತದೆ. ಉಳಿದವುಗಳಿಗಿಂತ ತನ್ನದು ಶ್ರೇಷ್ಠವೆಂಬ ಕಾರಣಕ್ಕಾಗಿ ಹೆಮ್ಮೆಪಡಲಾಗುತ್ತದೆ. ಆದರೆ ಈ ಧೋರಣೆ ಇಲ್ಲಿ ಪಲ್ಲಟಗೊಂಡಿದೆ. ಸ್ವಾಮೀಜಿಯವರ ಹೆಮ್ಮೆಗೆ

೧. The Complete works of Swami Vivekananda, (Kolkata, Advaita Ashrama, 2015) Vol. I pp.x-xii.

೨. ಅಲ್ಲೇ.

೩. Lakshmi Nivas Jhunjhunjunwala, The world Parliament of Religions, 1983, (Kolkata, Advaita Ashrama, 2010), P.70

ಕಾರಣವಾಗಿರುವುದೇನೆಂದರೆ ಅವರ ಧರ್ಮ ಎಲ್ಲವನ್ನೂ ಸ್ವೀಕರಿಸುತ್ತದೆ ಮತ್ತು ಗೌರವಿಸುತ್ತದೆ ಎನ್ನುವುದು. ಇಲ್ಲಿ ತನ್ನ ಧರ್ಮದ ಸತ್ಯ ಉಳಿದೆಲ್ಲ ಧರ್ಮಗಳ ಸತ್ಯದ ಮೇಲೆ ನಿಂತಿದೆ. ತನಗಿಂತ ಭಿನ್ನವಾದ ಆಕಾರಗಳನ್ನೂ ಆಚರಣೆಗಳನ್ನೂ ಮಾನ್ಯ ಮಾಡುವುದರಲ್ಲಿ ಈ ಸತ್ಯದ ವಿಸ್ತರಣೆಯಿದೆ. ಹೀಗಾಗಿ ಧರ್ಮದ ಸತ್ಯವನ್ನು ಸ್ವೀಕರಣೆ ಸಹಿಷ್ಣುತೆಗಳೊಂದಿಗೆ ಸಮೀಕರಿಸಿದ್ದರಲ್ಲಿ ಹೆಮ್ಮೆಯ ಬಗೆಗಿನ ಮರುವ್ಯಾಖ್ಯಾನವಿದೆ. ಈ ಮರುವ್ಯಾಖ್ಯಾನವು ಒಂದು ಐತಿಹಾಸಿಕ ಅಗತ್ಯವೂ ಆಗಿದ್ದಿತು. ಐತಿಹಾಸಿಕ ಹಿನ್ನೆಲೆಯಲ್ಲಿಯೇ ಒಂದು ಕಟುಸತ್ಯವನ್ನು ಸ್ವಾಮೀಜಿಯವರು ಬಿಚ್ಚಿಡುತ್ತಾರೆ.

''ಗುಂಪುಗಾರಿಕೆ, ಮತಭ್ರಾಂತಿ ಹಾಗೂ ಅದರ ಘೋರ ಪರಿಣಾಮವಾದ ಧರ್ಮಾಂಧತೆ ಬಹುಕಾಲದಿಂದ ಈ ಸುಂದರ ಪೃಥ್ವಿಯನ್ನು ಆಕ್ರಮಿಸಿಕೊಂಡಿವೆ. ಅವು ಭೂಮಿಯನ್ನು ಹಿಂಸೆಯಿಂದ ತುಂಬಿ, ಮತ್ತೆ ಮತ್ತೆ ಮಾನವನ ರಕ್ತದಿಂದ ತೋಯಿಸಿವೆ; ನಾಗರಿಕತೆಯನ್ನು ನಾಶಮಾಡಿವೆ; ದೇಶದೇಶಗಳನ್ನು ನಿರಾಶೆಯ ಕೂಪಕ್ಕೆ ತಳ್ಳಿವೆ. ಈ ಘೋರ ರಕ್ಕಸರಿರದಿದ್ದಲ್ಲಿ ಮಾನವಸಮಾಜವು ಈಗಿರುವುದಕ್ಕಿಂತಲೂ ಎಷ್ಟೋ ಪಾಲು ಮುಂದುವರಿಯುತ್ತಿತ್ತು. ಆದರೆ ಈಗ ಅದರ ಅಂತ್ಯಕಾಲ ಸಮೀಪಿಸಿದೆ. ಈ ಸಮ್ಮೇಳನದ ಗೌರವಾರ್ಥವಾಗಿ ಇಂದು ಬೆಳಗ್ಗೆ ಮೊಳಗಿದ ಘಂಟಾನಾದವು ಎಲ್ಲ ಮತಾಂಧತೆಗೆ, ಖಡ್ಗ ಅಥವಾ ಲೇಖನಿಗಳ ಮೂಲಕ ಸಂಭವಿಸುವ ಎಲ್ಲ ಹಿಂಸೆ-ದ್ವೇಷಗಳಿಗೆ, ಹಾಗೂ ಒಂದೇ ಗುರಿಯೆಡೆಗೆ ಸಾಗುತ್ತಿರುವ ಪಥಿಕರೊಳಗಿನ ಅಸಹನೆ-ಮನಸ್ತಾಪಗಳಿಗೆ ಮೃತ್ಯುಘಾತವನ್ನೀಯುವುದೆಂದು ಆಶಿಸುತ್ತೇನೆ.''[೪]

ಇದು ಸ್ವಾಮೀಜಿಯವರ 'ಚಿಕಾಗೋ ಸಂದೇಶದ ಪ್ರಧಾನ ಶ್ರುತಿಯೇ ಆಗಿದೆ. ಸೆಪ್ಟೆಂಬರ್ ೧೫ರ ಅಧಿವೇಶನದಲ್ಲಿ ಅವರು ಹೇಳಿದ 'ಕೂಪಮಂಡೂಕದ ಕಥೆಯಲ್ಲಿ ಇದು ಅದ್ಭುತ ನಾಟಕೀಯ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ. ಕೊನೆಯಲ್ಲಿ ಕಥೆಯ 'ನೀತಿಯನ್ನು ಅವರೇ ಹೀಗೆ ನಿರೂಪಿಸುತ್ತಾರೆ:

''ಮೊದಲಿನಿಂದಲೂ ಕಷ್ಟ ಇದೇ. ನಾನೊಬ್ಬ ಹಿಂದೂ. ನಾನು ನನ್ನದೇ ಆದ ಸಣ್ಣ ಬಾವಿಯಲ್ಲಿ ಕುಳಿತು ಇಡೀ ಪ್ರಪಂಚ ನನ್ನ ಸಣ್ಣಬಾವಿಯೆಂದು ಯೋಚಿಸುತ್ತೇನೆ. ಕ್ರೈಸ್ತನು ಅವನ ಸಣ್ಣ ಬಾವಿಯಲ್ಲಿ ಕುಳಿತು ಇಡೀ ಪ್ರಪಂಚ ತನ್ನ ಸಣ್ಣ ಬಾವಿಯೆಂದು ಯೋಚಿಸುತ್ತಾನೆ. ಮಹಮದೀಯನು ತನ್ನ ಸಣ್ಣಬಾವಿಯಲ್ಲಿ ಕುಳಿತು ಅದನ್ನೇ ಇಡೀ ಪ್ರಪಂಚವೆಂದು ಭಾವಿಸುತ್ತಾನೆ. ನಮ್ಮ ಈ ಸಣ್ಣ ಸಣ್ಣ ಜಗತ್ತುಗಳ ತಡೆಗೋಡೆಗಳನ್ನು ಒಡೆದು ಬೀಳಿಸಲು ಮಾಡುತ್ತಿರುವ ಪ್ರಯತ್ನಕ್ಕಾಗಿ ಅಮೆರಿಕನ್ನರಾದ ನಿಮಗೆ ನಾನು ಧನ್ಯವಾದ ಸಲ್ಲಿಸಬೇಕು. ನಿಮ್ಮ ಉದ್ದೇಶವು ಈಡೇರುವಂತೆ ಮುಂದೆ ದೇವರು ನಿಮಗೆ ನೆರವಾಗುವನೆಂದು ಆಶಿಸುತ್ತೇನೆ.''[೫]

ಸೆಪ್ಟೆಂಬರ್ ೧೯ರ ಅಧಿವೇಶನದಲ್ಲಿ ಸ್ವಾಮೀಜಿಯವರು ಹಿಂದೂಧರ್ಮದ ಮೇಲಿನ ಪ್ರಬಂಧವೊಂದನ್ನು ಮಂಡಿಸಿದ್ದಾರೆ. ಸಾಕಷ್ಟು ಸುದೀರ್ಘವಾದ ಈ ಪ್ರಬಂಧ ಮೇಲ್ನೋಟಕ್ಕೆ ಹಿಂದೂ ಧರ್ಮದ ತಾತ್ತ್ವಿಕತೆಯ ಮುಖ್ಯಾಂಶಗಳ ನಿರೂಪಣೆಯಾಗಿ ಕಾಣುತ್ತದೆ. ಆದರೆ ವಾಸ್ತವವಾಗಿ ಇದನ್ನು ಹಿಂದೂ ತಾತ್ತ್ವಿಕತೆಯ ಸಮಕಾಲೀನ ಪುನರ್‌ಸೃಷ್ಟಿಯೆಂದೇ ಪರಿಗಣಿಸಬೇಕಾಗುತ್ತದೆ. ಯಾವುದೇ ತಾತ್ತ್ವಿಕತೆಯನ್ನು ಅದರ 'ಸಣ್ಣ ಬಾವಿಯಿಂದ ಹೊರ ತರಬೇಕೆಂಬ ಕಾಳಜಿಯ ಆನ್ವಯಿಕ ನಿದರ್ಶನವಾಗಿ ಈ ಪ್ರಬಂಧ ಬಹಳ ಮುಖ್ಯವಾಗುತ್ತದೆ. ಹಿಂದೂ ತಾತ್ತ್ವಿಕತೆಯ 'ವಿಶಾಲೀಕರಣ'ದ ಪ್ರಕ್ರಿಯೆ ಇಲ್ಲಿ ಪ್ರಾರಂಭವಾಗಿದೆ. ಈ 'ವಿಶಾಲೀಕರಣ'ಕ್ಕೆ ಸಜ್ಜುಗೊಳ್ಳಲು ಅನುವಾಗುವಂತೆ ಅದರ ಸೈದ್ಧಾಂತಿಕ ಮರುನಿರೂಪಣೆ ಈ ಪ್ರಬಂಧದಲ್ಲಿದೆ.

ಈ ದಿಸೆಯಲ್ಲಿ ಸ್ವಾಮೀಜಿಯವರು ಗಮನಿಸುವ ಒಂದು ಮುಖ್ಯವಾದ ಸಂಗತಿಯೆಂದರೆ ಈ ಧರ್ಮದ ಹೀರಿಕೊಳ್ಳುವ ಸ್ವಭಾವ. ಅವರ ಪ್ರಕಾರ ಈ ಧರ್ಮವು ಬೆಳೆದದ್ದು ಮತ್ತು ಉಳಿದದ್ದು ಈ ಹೀರಿಕೊಳ್ಳುವಿಕೆಯಿಂದಾಗಿಯೆ. ಜಗತ್ತಿನಲ್ಲಿ ಹೀರಿಕೊಳ್ಳದ ಧರ್ಮಗಳೆಲ್ಲವೂ ಕಾಲಾನಂತರದಲ್ಲಿ ಹೇಳಹೆಸರಿಲ್ಲದಂತಾದುವು ಎಂಬ ಐತಿಹಾಸಿಕ ಸತ್ಯದ ಕಡೆಗೆ ಇಲ್ಲಿ ಅವರು ನಮ್ಮ ಗಮನವನ್ನು ಸೆಳೆಯುತ್ತಾರೆ. ಈ ಹೀರಿಕೊಳ್ಳುವಿಕೆಯ ಗುಣ ಇದಕ್ಕೆ ಪ್ರಾಪ್ತವಾದದ್ದು ಹೇಗೆ ಎಂಬುದನ್ನು ವಿಶ್ಲೇಷಿಸುತ್ತ, ಅದಕ್ಕೆ ಅನುಗುಣವಾದ ಸೈದ್ಧಾಂತಿಕ ನೆಲೆಗಟ್ಟನ್ನು ಈ ಧರ್ಮದ ಒಡಲೊಳಗಿನಿಂದ ನಿಷ್ಪನ್ನಗೊಳಿಸಲು ತೊಡಗುತ್ತಾರೆ.

ಈ ಸಂದರ್ಭದಲ್ಲಿ ಅವರು ಹಾಕಿಕೊಳ್ಳುವ ಪ್ರಶ್ನೆ ಇದು: ಇಲ್ಲಿ ವೈವಿಧ್ಯವಿದೆ; ವೈರುಧ್ಯಗಳೂ ಇವೆ. ಅತಿ ಮೂರ್ತತೆಯಿಂದ ಅಮೂರ್ತತೆಯವರೆಗೆ ಇವುಗಳ ಹರಹಿದೆ. ಸ್ಥೂಲ ವಿಗ್ರಹಾರಾಧನೆಯಿಂದ ವೇದಾಂತದ ಸೂಕ್ಷ್ಮ ಜಿಜ್ಞಾಸೆಯವರೆಗೆ ವಿಭಿನ್ನ ಸ್ತರಗಳಿವೆ. ಬೌದ್ಧರ ಅಜ್ಞೇಯತಾವಾದವಿದೆ; ಜೈನರ ನಾಸ್ತಿಕವಾದವಿದೆ. ಹಾಗಾದರೆ ಒಂದರಿಂದೊಂದು ದೂರವಾಗಿ ಸಿಡಿಯುವ ಈ ಎಲ್ಲ ತ್ರಿಜ್ಯಗಳು ಪರಸ್ಪರ ಸಂಧಿಸುವ ಕೇಂದ್ರ ಬಿಂದು ಎಲ್ಲಿದೆ? ಅಪರಿಹಾರ್ಯವೆಂದು ತೋರುವ ಈ ಎಲ್ಲ ವೈರುದ್ಧ್ಯಗಳು ವಿಶ್ರಾಂತಿಗೆ ಬರಬಹುದಾದ ಸಾಮಾನ್ಯ ನೆಲೆಗಟ್ಟು ಎಲ್ಲಿದೆ? ಈ ಶೋಧದ ಕಡೆಗೆ ಸ್ವಾಮೀಜಿಯವರ ಜಿಜ್ಞಾಸೆ ಸಾಗುತ್ತದೆ. ಈ ಶೋಧದ ಪ್ರಕ್ರಿಯೆಯಲ್ಲಿಯೇ ನವವೇದಾಂತದ ರೂಪುರೇಷೆಗಳು ಆಕಾರವನ್ನು ಪಡೆಯುತ್ತ ಹೋಗುತ್ತವೆ.

ಈ ನಿಟ್ಟಿನಲ್ಲಿ ಸ್ವಾಮೀಜಿಯವರು ಮಾಡುವ ಮೊದಲ ಕೆಲಸವೆಂದರೆ ವೇದದ ಮರುವ್ಯಾಖ್ಯಾನ. ರೂಢಿಗತವಾಗಿ ವೇದಗಳು ಪುಸ್ತಕಗಳಾಗಿ ಪ್ರತಿಷ್ಠಾಪಿಸಲ್ಪಟ್ಟಿವೆ. ಆದರೆ ಸ್ವಾಮೀಜಿಯವರು ವೇದಗಳಿಗೆ ಅವುಗಳ ಪುಸ್ತಕರೂಪದಿಂದ ಬಿಡುಗಡೆಯನ್ನು ಕೊಡುತ್ತಾರೆ.

೪. ಅದೇ, ಪು. ೭೧.
೫. C.W. Vol.I, p.5

''ವೇದಗಳೆಂದರೆ ಪುಸ್ತಕಗಳಲ್ಲ; ವಿವಿಧ ಕಾಲಘಟ್ಟಗಳಲ್ಲಿ ವಿವಿಧ ವ್ಯಕ್ತಿಗಳಿಂದ ಅನಾವರಣಗೊಂಡ ಆಧ್ಯಾತ್ಮಿಕ ನಿಯಮಗಳ ಭಂಡಾರವೇ ವೇದಗಳು. ಗುರುತ್ವಾಕರ್ಷಣ ನಿಯಮವು ಅದರ ಶೋಧಕ್ಕೆ ಮೊದಲೂ ಹೇಗಿದ್ದಿತೋ, ಸಮಗ್ರ ಮಾನವತೆಯೇ ಅದನ್ನು ಮರೆತುಬಿಟ್ಟರೂ ಅದು ಹೇಗೆ ಅಸ್ತಿತ್ವದಲ್ಲಿ ಮುಂದುವರಿಯುವುದೋ ಹಾಗೆಯೇ ಆಧ್ಯಾತ್ಮಿಕ ಜಗತ್ತನ್ನಾಳುವ ನಿಯಮಗಳೂ ಕೂಡ...''[೬]

ವೇದಗಳನ್ನು ಪುಸ್ತಕರೂಪದಿಂದ ಬಿಡುಗಡೆ ಮಾಡುವುದೆಂದರೆ ಸತ್ಯದ ಸಾರ್ವತ್ರಿಕತೆಯನ್ನು ಮಾನ್ಯ ಮಾಡುವುದೇ ಆಗಿದೆ. 'ವೇದದ ಕೊನೆಯ ಪುಟವಿನ್ನೂ ಬರೆಯಲ್ಪಟ್ಟಿಲ್ಲ ಎನ್ನುವುದು ಅವರ ಇನ್ನೊಂದು ಮಾತು. ಈ ದೃಷ್ಟಿಯಿಂದ ನೋಡಿದಾಗ ವೇದವೆನ್ನುವುದು ದೇಶಕಾಲಬದ್ಧವಾದ ಸಾಹಿತ್ಯರಾಶಿಯಾಗದೆ ವಿಶ್ವಾತ್ಮಕವಾಗುತ್ತದೆ. ಪವಿತ್ರಗ್ರಂಥಗಳನ್ನು ಹೀಗೆ ಅರ್ಥೈಸಿಕೊಂಡಾಗ ಮಾತ್ರ ಅವುಗಳ ನಡುವಿನ ಕಾಲದೇಶ ನಿಬದ್ಧವಾದ ವೈರುದ್ಧ್ಯಗಳನ್ನು ಮೀರಿದ ಶಾಶ್ವತ ಸತ್ಯದ ಗ್ರಹಿಕೆ ಸಾಧ್ಯವೆನ್ನುವುದು ಸ್ವಾಮೀಜಿಯವರ ಅಭಿಮತ.[೭] ಈ ಶಾಶ್ವತ ಸತ್ಯಗಳನ್ನು ಅನಾವರಣಗೊಳಿಸಿದವರು ಋಷಿಗಳೆಂದಾದರೆ[೮] ಎಲ್ಲ ಕಾಲಗಳ ಎಲ್ಲ ದೇಶಗಳ ದ್ರಷ್ಟಾರರೂ ಋಷಿಗಳ ಪಂಕ್ತಿಗೆ ಸೇರುತ್ತಾರೆ. ವೇದಗಳನ್ನೂ ಋಷಿಗಳನ್ನೂ ಹೀಗೆ ಗ್ರಹಿಸಿಕೊಂಡಾಗ ಒಂದು ಪುಸ್ತಕಕ್ಕೆ ಮಾತ್ರ ಸತ್ಯದ ಸ್ವಾಮ್ಯವೆಂಬ ಅಧಿಕಾರವಾದವೂ ನಿರಾಕರಣೆಗೊಳ್ಳುತ್ತದೆ. ಹೀಗಾಗಿ ಇದು ಧರ್ಮಗಳ 'ವೈಶ್ವೀಕರಣ'ದ ನಿಟ್ಟಿನಲ್ಲಿ ಸ್ವಾಮೀಜಿಯವರಿಟ್ಟ ಒಂದು ಮುಖ್ಯವಾದ ಹೆಜ್ಜೆಯಾಗಿದೆ.

ಸತ್ಯವು ಅನಾದಿಯೂ ಅನಂತವೂ ಎನ್ನುವುದಾದರೆ ಏನೂ ಇಲ್ಲದ ಸ್ಥಿತಿಯೊಂದಿರಲು ಸಾಧ್ಯವಿಲ್ಲ. ಹೀಗಾಗಿ ಸೃಷ್ಟಿಯೂ ಕೂಡ ಅನಾದಿ ಮತ್ತು ಅನಂತವೇ ಆಗಬೇಕಾಗುತ್ತದೆ. ಹೀಗಾದಾಗ ಅದು ತನ್ನ ಅಸ್ತಿತ್ವಕ್ಕಾಗಿ ಸೃಷ್ಟಿಕರ್ತನೊಬ್ಬನನ್ನು ಅವಲಂಬಿಸಿಕೊಳ್ಳುವುದಿಲ್ಲ. ಈ ಪ್ರಮೇಯದ ಮೂಲಕ ಸ್ವಾಮೀಜಿಯವರು ಸೃಷ್ಟಿಗೆ ಸೃಷ್ಟಿಕರ್ತನಿಂದಲೂ ಬಿಡುಗಡೆಯನ್ನು ಕಲ್ಪಿಸುತ್ತಾರೆ. ಇದರ ಹಿಂದಿನ ಅವರ ಉದ್ದೇಶವೂ ಸ್ಪಷ್ಟವಾಗಿಯೇ ಇದೆ. ಸೃಷ್ಟಿಯಿಂದ ಸೃಷ್ಟಿಕರ್ತನನ್ನು ಬಿಡಿಸುವುದೆಂದರೆ ಸೃಷ್ಟಿಯಲ್ಲಿನ ತಾರತಮ್ಯಗಳಿಂದ ಸೃಷ್ಟಿಕರ್ತನನ್ನು ಬಿಡಿಸುವುದೂ ಆಗಿದೆ. ಸೃಷ್ಟಿಯಲ್ಲಿ ಕೆಲವರನ್ನು ಸುಖಿಗಳನ್ನಾಗಿಯೂ ಕೆಲವರನ್ನು ದುಃಖಿಗಳನ್ನಾಗಿಯೂ ಮಾಡುವ ನಿರಂಕುಶ ಪರಮಾಧಿಕಾರದಿಂದಲೂ ಇದು ಆತನನ್ನು ದೂರಮಾಡುತ್ತದೆ.

ಈ ತಾತ್ತ್ವಿಕತೆಯ ಪ್ರತಿಪಾದನೆಗೆ ಸ್ವಾಮೀಜಿಯವರಲ್ಲಿ ಇನ್ನೊಂದು ಆಯಾಮವೂ ಪ್ರಾಪ್ತವಾಗುತ್ತದೆ. ಅದು ಮನುಷ್ಯನನ್ನೂ ಸೃಷ್ಟಿಯಿಂದ ಸ್ವತಂತ್ರನನ್ನಾಗಿಸುತ್ತದೆ. ಈ ಸ್ವಾತಂತ್ರ್ಯದ ಸ್ಥಾಪನೆಯೇ ಸ್ವಾಮೀಜಿಯವರ ಉದ್ದೇಶವೂ ಆಗಿದೆ. ಅವರ ಪ್ರಕಾರ ಮನುಷ್ಯನ ಅಸ್ತಿತ್ವಕ್ಕೆ ಎರಡು ನೆಲೆಗಳಿವೆ. ಒಂದು ನೆಲೆಯಲ್ಲಿ ಅವನು ಶರೀರ ಮಾನವನಾಗಿದ್ದರೆ ಇನ್ನೊಂದು ನೆಲೆಯಲ್ಲಿ ಅವನು ವಿಶ್ವಮಾನವನಾಗಿದ್ದಾನೆ. ವ್ಯಕ್ತಿಗತ ನೆಲೆಯಲ್ಲಿ ಶರೀರಗಳು ಹುಟ್ಟುತ್ತವೆ ಮತ್ತು ಸಾಯುತ್ತವೆ. ಏಕೆಂದರೆ ಸೃಷ್ಟಿಯೆಂದರೆ ಸಂಘಟನೆ ಮತ್ತು ವಿಘಟನೆಗಳ ಸರಣಿಯೇ ಆಗಿದೆ. ಆದರೆ ವಿಶ್ವಮಾನವನಾಗಿ ಅವನಿಗೆ ಅನಂತ ಶರೀರಗಳಿವೆ. ಹೀಗಾಗಿ ವಿಶ್ವಮಾನವಪ್ರಜ್ಞೆಯೆನ್ನುವುದು ಅನಂತತೆಯ ಪ್ರಜ್ಞೆಯೂ ಆಗಿದೆ. ಸೃಷ್ಟಿಯ ಸ್ತರದಲ್ಲಿನ ಸಂಘಟನೆ – ವಿಘಟನೆಗಳು ಅಲ್ಲಿ ಆತನನ್ನು ಬಾಧಿಸಲಾರವು. ಸಂಕುಚಿತವಾದ ಶರೀರಗತ ಪ್ರಜ್ಞೆಯೆಂಬ ಸೆರೆಮನೆಯ ದುಃಸ್ಥಿತಿಯಿಂದ ಪಾರಾಗಿ ಅಲ್ಲಿ ಅವನು ವಿಶ್ವಾತ್ಮಕ ಅಸ್ಮಿತೆಯ ಬಿಡುಗಡೆಯ ಸ್ತರಕ್ಕೆ ಏರುತ್ತಾನೆ. ಈ ಸ್ವಾತಂತ್ರ್ಯವೇ ಎಲ್ಲ ಅಸ್ತಿತ್ವದ ಅಂತಿಮ ಗುರಿ.

ಈ ಪ್ರತಿಪಾದನೆಯನ್ನು ಸ್ವಾಮೀಜಿಯವರು ಮುಂದಿಡುತ್ತಿರುವುದು 'ಸಿದ್ಧಾಂತೀಕರಣ'ದ ದೃಷ್ಟಿಯಿಂದ ಅಲ್ಲ. ಅವರ ಮುಂದೆ ಸಮಸ್ತ ಮಾನವಕೋಟಿಯ ನೋವು–ಸಂಕಟಗಳಿವೆ. ಇಲ್ಲಿ ಅವರು ಸಂಕಟಪೀಡಿತ ಮಾನವನ ಪ್ರತಿನಿಧಿಯಾಗಿ ಮಾತನಾಡುತ್ತಿದ್ದಾರೆ. ವಿಶ್ವಧರ್ಮಸಮ್ಮೇಳನದಂತಹ 'ಸೈದ್ಧಾಂತಿಕ' ವೇದಿಕೆಯಲ್ಲಿಯೂ ಅವರು ಮಾನವನ ನೋವಿಗೆ ದನಿಯಾಗಿದ್ದಾರೆ. ಅವರ ಪ್ರಕಾರ ಮಾನವನನ್ನು ನೋವಿನಿಂದ ಬಿಡುಗಡೆ ಮಾಡುವುದೇ ಧರ್ಮದ ನಿಜವಾದ ಗುರಿಯೂ ಆಗಿದೆ. ಮಾನವ ಅಸ್ತಿತ್ವದ ಸ್ವರೂಪವನ್ನು ಅನಂತತೆಯಲ್ಲಿ ಸ್ಥಾಪಿಸುವುದರಿಂದ ಮಾತ್ರವೇ ಇದು ಸಾಧ್ಯ. ಇದು ಸಿದ್ಧಾಂತವಲ್ಲ; ಸಾಕ್ಷಾತ್ಕರಿಸಿಕೊಳ್ಳಬೇಕಾದ ಸತ್ಯ. ಈ ಸಾಕ್ಷಾತ್ಕಾರದಲ್ಲಿಯೂ ಎಲ್ಲ ಧಾರ್ಮಿಕತೆಯ ಮೂಲ ವಿದೆ; ಎಲ್ಲ ನೈತಿಕತೆಯ ಮೂಲವೂ ಇದೆ. ವ್ಯಾವಹಾರಿಕ ಅನುಷ್ಠಾನದ ಹಂತದಲ್ಲಿ ಇದೇ ವಿಶ್ವಭ್ರಾತೃತ್ವವೂ ಆಗಿದೆ.

ಈ ಹಿನ್ನೆಲೆಯಲ್ಲಿ ನೋಡಿದಾಗ ವಿಶಿಷ್ಟ ಮಾನವ ಹಾಗೂ ವಿಶ್ವಾತ್ಮಕ ಮಾನವನ ನಡುವಿನ ಅಗಾಧ ವಿಸ್ತಾರದಲ್ಲಿ ಎಲ್ಲ ಆಕಾರಗಳು, ಆಚರಣೆಗಳು, ಅನುಷ್ಠಾನಗಳು, ನಂಬಿಕೆಗಳು ತಮ್ಮ ತಮ್ಮ ನೆಲೆಯನ್ನು ಕಂಡುಕೊಳ್ಳುತ್ತವೆ. ಇಲ್ಲಿ ಯಾವುದೂ ಒಂದಕ್ಕೆ ಇನ್ನೊಂದು ವಿರೋಧವಲ್ಲ; ಒಂದು ತ್ಯಾಜ್ಯವಾಗಿ ಇನ್ನೊಂದು ಸ್ವೀಕಾರಾರ್ಹವಲ್ಲ; ಒಂದನ್ನು ಖಂಡಿಸಿ ಇನ್ನೊಂದನ್ನು ಮಂಡಿಸಲಾಗುವುದಿಲ್ಲ.

೬. ಅದೇ, ಪು. ೬–೭.

೭. ಜೊತೆಗೆ ನೋಡಿ: ''.... ಅನಾದಿ ಅನಂತ ಅಲೌಕಿಕ ಸದಾಸ್ಥಿತ ಜ್ಞಾನರಾಶಿಗೆ 'ವೇದ' ಎಂದು ನಾಮಧೇಯ.... ವೇದ ನಾಮಕ ಶಬ್ದರಾಶಿಯ ವಿಚಾರವಾಗಿ ಇನ್ನೊಂದು ವಿಷಯವನ್ನು ತಿಳಿದು ನೆನಪಿನಲ್ಲಿಡಬೇಕು. ಏನೆಂದರೆ, ಆ ಶಬ್ದರಾಶಿಯಲ್ಲಿ ಯಾವ ಭಾಗವು ಲೌಕಿಕವೊ, ಯಾವ ಭಾಗವು ಬರಿಯ 'ಅರ್ಥವಾದ' ಅಥವಾ ಐತಿಹ್ಯ ಮಾತ್ರವೊ ಆ ಭಾಗಗಳು 'ವೇದ'ವಲ್ಲ. ದೇಶ, ಕಾಲ, ಪಾತ್ರಾತೀತವಾದ ಅತೀಂದ್ರಿಯ ಜನ್ಯವಾದ ಅಲೌಕಿಕ ಜ್ಞಾನಭಾಗಕ್ಕೆ ಮಾತ್ರ 'ವೇದ' ಎಂದು ಹೆಸರು.'' (ಕುವೆಂಪು, **ಶ್ರೀರಾಮಕೃಷ್ಣ ಪರಮಹಂಸ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೩, ಪು. ೨೪೩–೨೪೪)

೮. C.W., ಪೂರ್ವೋಕ್ತ.

''ಹಿಂದುವಿನ ಪ್ರಕಾರ ಮನುಷ್ಯ ಅಸತ್ಯದಿಂದ ಸತ್ಯದ ಕಡೆಗೆ ಪಯಣಿಸುತ್ತಿಲ್ಲ; ಬದಲಾಗಿ ಸತ್ಯದಿಂದ ಸತ್ಯದ ಕಡೆಗೆ, ಕೆಳಸ್ತರದ ಸತ್ಯದಿಂದ ಮೇಲಿನ ಸ್ತರದ ಸತ್ಯದ ಕಡೆಗೆ ಸಾಗುತ್ತಿದ್ದಾನೆ. ಅವನ ದೃಷ್ಟಿಯಲ್ಲಿ ಎಲ್ಲ ಧರ್ಮಗಳು, ಕಾಡುಜನರ ಆರಾಧನೆಯಿಂದ ಹಿಡಿದು ಅತ್ಯುನ್ನತ ಅದ್ವೈತದವರೆಗಿನ ಎಲ್ಲವೂ, ಮಾನವನ ಮನಸ್ಸು ಅನಂತವನ್ನು ಗ್ರಹಿಸಲು ಮತ್ತು ಅನುಭವಿಸಲು ಮಾಡಿದ ಬೇರೆ ಬೇರೆ ಪ್ರಯತ್ನಗಳು. ಈ ಪ್ರಯತ್ನಗಳಲ್ಲಿ ಪ್ರತಿಯೊಂದೂ ತನ್ನ ಹುಟ್ಟು ಹಾಗೂ ಸಂಪರ್ಕಗಳಿಗೆ ಅನುಗುಣವಾಗಿ ರೂಪುಗೊಳ್ಳುತ್ತದೆ; ಮತ್ತು ಇವುಗಳಲ್ಲಿ ಪ್ರತಿಯೊಂದೂ ಪ್ರಗತಿಯ ಹಂತವೊಂದರ ಕುರುಹಾಗಿದೆ. ಪ್ರತಿಯೊಂದು ಚೇತನವೂ ಒಂದು ಗರುಡನ ಮರಿಯಂತೆ; ಹೆಚ್ಚು ಹೆಚ್ಚು ಶಕ್ತಿಯನ್ನು ಒಗ್ಗೂಡಿಸಿಕೊಳ್ಳುತ್ತ, ಮೇಲಕ್ಕೆ ಮತ್ತೂ ಮೇಲಕ್ಕೆ ಹಾರುತ್ತ ಕಡೆಗೆ ಉಜ್ಜ್ವಲ ಸೂರ್ಯನನ್ನು ತಲುಪುತ್ತದೆ.''[೯]

''ಹಿಂದೂ ತಾತ್ತ್ವಿಕತೆಯ ಪ್ರಕಾರ ಇಡೀ ಧಾರ್ಮಿಕ ಪ್ರಪಂಚವೆಂಬುದು ಕೇವಲ ಒಂದು ಪ್ರಯಾಣವಿದ್ದಂತೆ. ಅದು ವಿಧವಿಧದ ಸನ್ನಿವೇಶಗಳು ಹಾಗೂ ಸಂದರ್ಭಗಳ ಮೂಲಕವಾಗಿ ಬಂದ ವಿಧವಿಧದ ಸ್ತ್ರೀಪುರುಷರು ಒಂದೇ ಗುರಿಯೆಡೆಗೆ ಮಾಡುತ್ತಿರುವ ಪ್ರಯಾಣವಾಗಿದೆ. ಪ್ರತಿಯೊಂದು ಧರ್ಮವೂ ಭೌತಿಕ ಮನುಷ್ಯನ ಮೂಲಕ ದೇವರೊಬ್ಬನನ್ನು ವಿಕಸನಗೊಳಿಸುತ್ತಿದೆ. ಒಬ್ಬನೇ ದೇವರೇ ಅವರೆಲ್ಲರ ಸ್ಫೂರ್ತಿದಾತನಾಗಿದ್ದಾನೆ. ಹಾಗಾದರೆ ಇಷ್ಟೆಲ್ಲ ವೈರುದ್ಧ್ಯಗಳಿರುವುದೇಕೆ? ಹಿಂದುವಿನ ಪ್ರಕಾರ ಅವೆಲ್ಲವೂ ತೋರಿಕೆಗಳಷ್ಟೆ. ಒಂದೇ ಸತ್ಯವು ಬಗೆಬಗೆಯ ಸ್ವಭಾವಗಳ ಬೇರೆಬೇರೆ ಸನ್ನಿವೇಶಗಳಿಗೆ ಹೊಂದಿಕೊಳ್ಳುವ ಸಂದರ್ಭದಲ್ಲಿ ಈ ವೈರುದ್ಧ್ಯಗಳು ಕಾಣಿಸಿಕೊಳ್ಳುತ್ತವೆ.''[೧೦]

ಚಿಕಾಗೋ ಸಮ್ಮೇಳನದಲ್ಲಿ ಸ್ವಾಮೀಜಿಯವರು ಪ್ರಸ್ತುತಿಪಡಿಸಿದ ಹಿಂದೂ ತಾತ್ತ್ವಿಕತೆಯನ್ನು ಈ ಎಲ್ಲ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಒಂದು ಸಂಗತಿಯಂತೂ ಸ್ಪಷ್ಟವಾಗುತ್ತದೆ. ಅವರ ಪ್ರಕಾರ ಧರ್ಮದ ವ್ಯಾಖ್ಯಾನವೆಂದರೆ ಮನುಷ್ಯನ ಬಗೆಗಿನ ವ್ಯಾಖ್ಯಾನವೇ ಆಗಿದೆ. 'ಪ್ರತಿಯೊಂದು ಜೀವಿಯೂ ತನ್ನ ತನ್ನ ಶರೀರದಲ್ಲಿ ಕೇಂದ್ರವನ್ನು ಹೊಂದಿರುವ, ಆದರೆ ಎಲ್ಲಿಯೂ ಪರಿಧಿಯೇ ಇಲ್ಲದ ವೃತ್ತವಾಗಿದ್ದಾನೆ' ಎಂಬ ಅವರ ವ್ಯಾಖ್ಯೆ ವಿಶಿಷ್ಟವಾದುದಾಗಿದೆ. ಹೀಗಾಗಿ, ಅವರ ಪ್ರಕಾರ ಧರ್ಮವೆನ್ನುವುದಕ್ಕೆ ನಿರ್ವಾತದಲ್ಲಿ ಅಸ್ತಿತ್ವವಿಲ್ಲ. ಅದು ವಿಶಿಷ್ಟ ಮಾನವನನ್ನು ವಿಶ್ವಮಾನವನೊಂದಿಗೆ ಕೂಡಿಸುವ ಕೊಂಡಿಯಾಗಿ ಕೆಲಸ ಮಾಡಬೇಕು. ಇಲ್ಲಿ ಅದು ಎದುರಿಸಬೇಕಾದ ಮುಖ್ಯವಾದ ಸವಾಲೊಂದಿದೆ. ಅದು ಅಸಂಖ್ಯ ಮಾನವರ ಅಸಂಖ್ಯ ವೈಶಿಷ್ಟ್ಯಗಳನ್ನು ಮಾನ್ಯ ಮಾಡಬೇಕು. ಹಾಗೇ ಮಾಡುತ್ತಲೇ ಅವುಗಳ ಮೂಲಕ ವಿಶ್ವಸಾಮಾನ್ಯತೆಯೊಂದನ್ನು ನಿಷ್ಪನ್ನಗೊಳಿಸಬೇಕು. ತಮ್ಮ ವಿಶ್ವಧರ್ಮ ಸಮ್ಮೇಳನದ ಸಂದೇಶದಲ್ಲಿ ಸ್ವಾಮೀಜಿಯವರು ಆ ಕೆಲಸವನ್ನು ಮಾಡಿದರು. ತಮ್ಮ ಪ್ರಬಂಧದ ಕೊನೆಯಲ್ಲಿ ಅವರು 'ವಿಶ್ವಧರ್ಮ'ದ ಪರಿಕಲ್ಪನೆಯನ್ನು ಹೀಗೆ ಮಂಡಿಸುತ್ತಾರೆ:

ಒಂದು ವಿಶ್ವಧರ್ಮ ಎನ್ನುವಂಥದಿದ್ದರೆ –

ಅದು ದೇಶಕಾಲಗಳಲ್ಲಿ ಅಸ್ತಿತ್ವವನ್ನು ಹೊಂದಿರುವುದಿಲ್ಲ. ಅದು ತಾನು ಪ್ರತಿಪಾದಿಸುವ ಭಗವಂತನಂತೆಯೇ ಅನಂತವಾಗಿರುತ್ತದೆ.

ಆ ಧರ್ಮಸೂರ್ಯನ ಬೆಳಕು ಕೃಷ್ಣನ ಅನುಯಾಯಿಗಳ ಮೇಲೂ ಬೆಳಗುತ್ತದೆ, ಕ್ರಿಸ್ತನ ಅನುಯಾಯಿಗಳ ಮೇಲೂ ಬೆಳಗುತ್ತದೆ; ಸಂತರ ಮೇಲೂ ಬೆಳಗುತ್ತದೆ, ಪತಿತರ ಮೇಲೂ ಬೆಳಗುತ್ತದೆ.

ಅದು ಬ್ರಾಹ್ಮಣವೊ (= ವೈದಿಕ) ಬೌದ್ಧವೋ ಕ್ರೈಸ್ತವೋ ಮಹಮ್ಮದೀಯವೋ ಆಗಿರದೆ ಇವೆಲ್ಲದರ ಒಟ್ಟು ಮೊತ್ತವಾಗಿರುತ್ತದೆ; ಮತ್ತು ಇಷ್ಟೆಲ್ಲ ಇದ್ದೂ ಪ್ರಗತಿಗೆ ಅನಂತ ಅವಕಾಶವಿರುತ್ತದೆ.

ಅದು ವೈಶಾಲ್ಯದಲ್ಲಿ ತನ್ನ ಅನಂತ ಬಾಹುಗಳಿಂದ ಪ್ರತಿಯೊಬ್ಬ ವ್ಯಕ್ತಿಯನ್ನೂ ತಬ್ಬಿಕೊಳ್ಳುತ್ತದೆ, ಪ್ರತಿಯೊಬ್ಬನಿಗೂ ಜಾಗವನ್ನು ಕೊಡುತ್ತದೆ. ಪಶುಪ್ರಾಯ ಸ್ಥಿತಿಗಿಂತ ಅಷ್ಟೇನೂ ಮೇಲಿಲ್ಲದ ನೀಚತಮ ಕಾಡುಮನುಷ್ಯನಿಂದ ಹಿಡಿದು, ತನ್ನ ಹೃದಯ–ಬುದ್ಧಿಗಳ ಸದ್ಗುಣಗಳ ಔನ್ನತ್ಯದಿಂದ ಮಾನವತೆಗಿಂತ ಸ್ವಲ್ಪ ಹೆಚ್ಚಾಗಿಯೆ ಮೇಲಿದ್ದು, ಇವನು ಮನುಷ್ಯನೇ ಎಂದು ಸಮಾಜವೇ ಬೆರಗುವಡುವಂತೆ ಮಾಡುವ ಅತ್ಯುನ್ನತ ವ್ಯಕ್ತಿಯವರೆಗೆ ಪ್ರತಿಯೊಬ್ಬನನ್ನೂ ಸ್ವೀಕರಿಸುತ್ತದೆ.

ಅದು ತನ್ನ ನಿರ್ವಹಣೆಯಲ್ಲಿ ಹಿಂಸೆಗಾಗಲಿ ಅಸಹಿಷ್ಣುತೆಗಾಗಲಿ ಎಡೆ ಮಾಡಿಕೊಡದ ಧರ್ಮವಾಗಿರುತ್ತದೆ.

ಅದು ಪ್ರತಿಯೊಬ್ಬ ಸ್ತ್ರೀ ಮತ್ತು ಪುರುಷನಲ್ಲಿಯೂ ದಿವ್ಯತೆಯನ್ನು ಗುರುತಿಸುತ್ತದೆ.

ಅದರ ಇಡೀ ವ್ಯಾಪ್ತಿ, ಇಡೀ ಶಕ್ತಿ, ಮಾನವತೆ ತನ್ನ ನೈಜವೂ ದಿವ್ಯವೂ ಆದ ಸ್ವಭಾವವನ್ನು ಸಾಕ್ಷಾತ್ಕರಿಸಿಕೊಳ್ಳಲು ನೆರವಾಗುವಂತೆ ರೂಪುಗೊಳ್ಳುತ್ತದೆ.[೧೧]

ಇದು ವಿಶ್ವಧರ್ಮದ ಸಂವಿಧಾನವೂ ಹೌದು; ವಿಶ್ವಮಾನವತೆಯ ಸಂವಿಧಾನವೂ ಹೌದು. ಹೀಗಾಗಿ ಇಲ್ಲಿ ಧರ್ಮದ ವಿಸ್ತಾರವೆಂದರೆ ಅದು ಮಾನವನ ವಿಸ್ತಾರವೇ ಆಗಿದೆ. ಆದರೆ ಈ ವಿಸ್ತರಣೆಯೆನ್ನುವುದು ಅಮೂರ್ತತೆಯಲ್ಲಿ ಸಂಭವಿಸುವಂಥದಲ್ಲ. ಅದಕ್ಕೆ ಅತ್ಯಂತ ಮೂರ್ತವಾದ, ಮನುಷ್ಯವಾಸ್ತವದ ನೆಲೆಗಳಿವೆ. ವಿಶ್ವಧರ್ಮವೆನ್ನುವುದು ಇಲ್ಲಿನ ಆಶಯವಾದರೆ ('vision') ಅದು ಅನುಷ್ಠಾನಸಾಧ್ಯವಾಗುವುದು ('mission')

೯. ಅದೇ, ಪು. ೧೭.

೧೦. ಅದೇ, ಪು. ೧೮.

೧೧. ಅದೇ, ಪು. ೧೯.

ಮಾತ್ರ ವಿಶ್ವಭ್ರಾತೃತ್ವದ ಮೂಲಕವೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ವಿಶ್ವಧರ್ಮವಾಗಲಿ ವಿಶ್ವಮಾನವತೆಯಾಗಲಿ ವಿಶ್ವಭ್ರಾತೃತ್ವದ ಮೂಲಕವೇ ತಲುಪಬೇಕಾದ ಗಮ್ಯಗಳೂ ಆಗಿವೆ. ಹೀಗಾಗಿ ಇದರ ಪ್ರಕಾರ ಎಲ್ಲಿ ಮಾನವತೆಯನ್ನು ಯಾವುದೇ ಕಾರಣಕ್ಕಾಗಿ ವಿಭಜಿಸಲಾಗುವುದೋ ಅಲ್ಲಿ ಧಾರ್ಮಿಕತೆಯಿರಲು ಸಾಧ್ಯವಿಲ್ಲ. ಸೋದರಿಯರೆಂದು, ಸೋದರರೆಂದು ಗುರುತಿಸುವುದೆಂದರೆ ಅವರನ್ನು ಒಂದು ಮನೆಯ ಸದಸ್ಯರೆಂದು ಗುರುತಿಸುವುದೂ ಆಗಿದೆ. ಇಷ್ಟರ ಮೇಲೆ ಅವರನ್ನು ಹೀಗೆ ಗುರುತಿಸುವುದು ಸಾಮಾಜಿಕ ಸೌಜನ್ಯದ ಅಥವಾ ರೀತಿರಿವಾಜುಗಳ ಕಾರಣಕ್ಕಾಗಿಯಲ್ಲ. ಇದಕ್ಕೆ ಎಲ್ಲ ಮನುಷ್ಯರ ಆಂತರಿಕತೆಯ ಮೂಲಕ ಹಾಸುಹೊಕ್ಕಾಗಿರುವ ಅಸ್ತಿತ್ವಾತ್ಮಕವಾದ ನೆಲೆಗಟ್ಟಿದೆ. ಸ್ವಾಮೀಜಿಯವರ ಪ್ರಕಾರ ಧರ್ಮವೆಂದರೆಯೇ ಈ ಹಾಸುಹೊಕ್ಕುಗಳ ಭಾಗವಾಗಿ ತನ್ನನ್ನು ಗುರುತಿಸಿಕೊಳ್ಳುವುದಾಗಿದೆ. ಹೀಗಾಗಿ ಇಲ್ಲಿಯ ವಿಶ್ವಧರ್ಮಕ್ಕೆ ಲೋಕವಾಸ್ತವತೆಯ ವಿಸ್ತರಣೆಯಿದೆ. ಅದು ಇಡೀ ವಿಶ್ವವನ್ನು, ಅದರ ಎಲ್ಲ ವೈಶಿಷ್ಟ್ಯಗಳು ಹಾಗೂ ಅನನ್ಯತೆಗಳೊಂದಿಗೆ, 'ಒಂದು' ಮನೆಯನ್ನಾಗಿ ಮಾಡುತ್ತದೆ. ಆ ಮೂಲಕ ಧರ್ಮವನ್ನು ಪ್ರೀತಿಯೊಂದಿಗೆ ಸಮೀಕರಿಸುತ್ತದೆ. ಈ ಮೂಲಕ ನೋಡಿದಾಗ, 'ಅಮೆರಿಕದ ಸೋದರ ಸೋದರಿಯರೆ' ಎನ್ನುವುದು ಸ್ವಾಮೀಜಿಯವರ ಸಂದೇಶದ ಪ್ರಾರಂಭಿಕ ಸಂಬೋಧನೆ ಮಾತ್ರವಾಗಿರದೆ ಅಂತಿಮವಾದ ನಿರ್ಣಯವೂ ಆಗಿದೆ. ಹಾಗೆ ನೋಡಿದರೆ ಈ ಸಂಬೋಧನೆಯೆನ್ನುವುದು ಅವರ ಪಾಲಿಗೆ ಆಯ್ಕೆಯ ಸಂಗತಿಯಾಗದೆ ಅವರ ಸಂದೇಶಕ್ಕೆ ಅತ್ಯಗತ್ಯವಾದ ಅಭಿವ್ಯಕ್ತಿರೂಪವೇ ಆಗಿದೆ. ಇಷ್ಟಲ್ಲದೆ ಈ ಸಂಬೋಧನೆಗೆ ಇನ್ನೊಂದು ಮಗ್ಗಲೂ ಇದೆ. ಒಂದು ನೆಲೆಯಲ್ಲಿ ಈ ಸಂಬೋಧನೆ ಭ್ರಾತೃತ್ವದ ಒಂದು ಸೂಚಕ ಮಾತ್ರವೇ ಆಗಿದೆ. ಇನ್ನೊಂದು ನೆಲೆಯಲ್ಲಿ ಇದಕ್ಕೆ ಈ ಸೂಚಕತೆಯನ್ನು ಮೀರಿದ ಸೂತ್ರದ ಸ್ವರೂಪವೂ ಇದೆ. ಈ ಸಂಬೋಧನೆಯಲ್ಲಿನ 'ಅಮೆರಿಕದ' ಎಂಬ ವಿಶೇಷಣಕ್ಕೆ ಬದಲಾಗಿ ಆ ಜಾಗದಲ್ಲಿ ಇನ್ನಾವುದೇ ಪ್ರದೇಶ ಅಥವಾ ಧರ್ಮ ಅಥವಾ ಜನಾಂಗದ ಹೆಸರನ್ನು ವಿಶೇಷಣವಾಗಿ ಬಳಸಬಹುದಾದ ಸಾಧ್ಯತೆಯನ್ನು ಅದು ಪ್ರಕಟಿಸುತ್ತದೆ; ಅಷ್ಟೇ ಅಲ್ಲ, ಹಾಗೆ ಬಳಸಲು ಸಾಧ್ಯವಾದಾಗಲೇ ಆ ಸಂಬೋಧನೆ ಅಂತಿಮವಾಗಿ ಸಾರ್ಥಕವಾಗುತ್ತದೆ.

ಸ್ವಾಮಿ ವಿವೇಕಾನಂದರ ಚಿಕಾಗೋ ಸಂದೇಶದ ಕಥನವನ್ನು ಸಾಮಾನ್ಯವಾಗಿ ಹಿಂದೂ ಧಾರ್ಮಿಕತೆಯ ಕಥನವನ್ನಾಗಿ ನೋಡಲಾಗುತ್ತದೆ. ಆದರೆ ನಾವು ಈವರೆಗೆ ಗಮನಿಸಿರುವ ತಾತ್ತ್ವಿಕತೆಯ ಬೆಳಕಿನಲ್ಲಿ ನೋಡುವುದಾದರೆ, ಅದು ಹಿಂದೂ ಧಾರ್ಮಿಕತೆಯೂ ಒಳಗೊಂಡಂತೆ ಯಾವುದೇ ಧಾರ್ಮಿಕತೆಯು ವಿಶ್ವಸಾಮಾನ್ಯವಾಗುವ ಅರ್ಹತೆಯನ್ನು ಪಡೆಯಬೇಕಾದರೆ ಅದರೊಳಗೆ ಸಂಭವಿಸಲೇಬೇಕಾಗಿರುವ ಪರಿಷ್ಕರಣದ ಅಗತ್ಯಕ್ಕಾಗಿ ನೀಡಿದ ಒಂದು ಪಂಥಾಹ್ವಾನವಾಗಿದೆ. ಅಲ್ಲದೆ ಈ ಪರಿಷ್ಕರಣವನ್ನು ಅದು ಐಚ್ಛಿಕವಾಗಿಸದೆ ಆಧುನಿಕ ಯುಗದ ಐತಿಹಾಸಿಕ ಅಗತ್ಯವನ್ನಾಗಿ ಮಾಡುತ್ತದೆ. ಹೀಗೆ ಪರಿಷ್ಕರಣಗೊಳ್ಳದಿದ್ದರೆ ಅವು ತಮ್ಮ ತಮ್ಮ ಸಣ್ಣ ಬಾವಿಗಳಲ್ಲಿ ಕೊಳೆತು ನಾರಬೇಕಾದೀತೆಂಬ ಎಚ್ಚರಿಕೆಯನ್ನೂ ನೀಡುತ್ತದೆ.

ಹೀಗಾಗಿ ಚಿಕಾಗೋ ಸಂದೇಶದ ಕಥನವೆನ್ನುವುದು ವಿಶ್ವಭ್ರಾತೃತ್ವದ ರಚನೆಗಾಗಿ ನೀಡಿದ ಆಹ್ವಾನವೊಂದರ ಕಥನವಾಗಿದೆ. ಅದು ಯಾವುದೇ ಮತ-ಧರ್ಮ-ಜನಾಂಗ-ಸಿದ್ಧಾಂತ-ಆಚರಣೆಗಳ ವಿರುದ್ಧವಾದ ಖಂಡನೆಯ ಕಥನವಾಗದೆ ಸಂವಾದದ ಕಥನವಾಗಿದೆ. ಅದು ಯಾರನ್ನೂ ಪ್ರತಿಸ್ಪರ್ಧಿಯನ್ನಾಗಿ ಪರಿಗಣಿಸದ ಪ್ರೀತಿಯ ಕಥನವೂ ಆಗಿದೆ. ಇನ್ನಾವುದೇ ತಾತ್ತ್ವಿಕತೆಗೆ ಪ್ರತಿಕಥನವಾಗದೆ ಅದು ಎಲ್ಲ ತಾತ್ತ್ವಿಕತೆಗಳೊಂದಿಗಿನ ಸಹಕಥನವಾಗಿದೆ. ಆದ್ದರಿಂದ ಇಲ್ಲಿ ವಿಜಯಕ್ಕಿಂತಲೂ ವಿಕಾಸವೇ ಮುಖ್ಯವಾಗಿದೆ. ವಿಶ್ವಧರ್ಮ ಸಮ್ಮೇಳನದ ಮುಕ್ತಾಯದ ಅಧಿವೇಶನದಲ್ಲಿ ಸ್ವಾಮೀಜಿಯವರಾಡಿದ ಮಾತುಗಳು ಇದನ್ನು ಸಂದೇಹಕ್ಕೆಡೆಯಿಲ್ಲದಂತೆ ರುಜುವಾತುಪಡಿಸಿವೆ.

''ವಿಶ್ವಧರ್ಮಸಮ್ಮೇಳನವು ಜಗತ್ತಿಗೆ ಏನನ್ನಾದರೂ ತೋರಿಸಿಕೊಟ್ಟಿದ್ದರೆ ಅದು ಇದು: ಪಾವಿತ್ರ್ಯ, ಪರಿಶುದ್ಧತೆ ಮತ್ತು ಔದಾರ್ಯಗಳು ಜಗತ್ತಿನಲ್ಲಿ ಯಾವುದೋ ಒಂದು ಮತ ಪಂಥಕ್ಕೆ ಮಾತ್ರ ಸೇರಿದ ಸ್ವತ್ತಲ್ಲ ಹಾಗೂ ಪ್ರತಿಯೊಂದು ಧರ್ಮವೂ ಅತ್ಯಂತ ಉದಾತ್ತಚರಿತರಾದ ಸ್ತ್ರೀಯರು ಮತ್ತು ಪುರುಷರನ್ನು ನಿರ್ಮಿಸಿದೆ ಎಂಬುದನ್ನು ಅದು ಜಗತ್ತಿಗೆ ಸಾಬೀತುಪಡಿಸಿದೆ. ಈ ಸಾಕ್ಷ್ಯದ ಸಮಕ್ಷಮದಲ್ಲೂ ಯಾರಾದರೊಬ್ಬನು ಕೇವಲ ತನ್ನ ಧರ್ಮವೊಂದು ಮಾತ್ರ ಉಳಿಯಬೇಕು, ಉಳಿದುದೆಲ್ಲವೂ ವಿನಾಶ ಹೊಂದಬೇಕು ಎಂದು ಕನಸು ಕಂಡರೆ, ಅವನ ಬಗ್ಗೆ ನಾನು ನನ್ನ ಹೃದಯಾಂತರಾಳದಿಂದ ಅನುಕಂಪವನ್ನು ತೋರುತ್ತೇನೆ; ಅಲ್ಲದೆ ಅವನಿಗೆ ತಿಳಿಸುತ್ತೇನೆ - ಪ್ರತಿಯೊಂದು ಧರ್ಮದ ಧ್ವಜದ ಮೇಲೆಯೂ, ಪ್ರತಿರೋಧದ ನಡುವೆಯೂ, ಶೀಘ್ರವೇ ಬರೆಯಲ್ಪಡುವುದೇನೆಂದರೆ, 'ಸಹಾಯವೇ ಹೊರತು ಕಿತ್ತಾಟವಲ್ಲ, 'ಅರಗಿಸಿಕೊಳ್ಳುವುದೇ ಹೊರತು ವಿನಾಶವಲ್ಲ, 'ಸಾಮರಸ್ಯ-ಶಾಂತಿಗಳೇ ಹೊರತು ವೈಮನಸ್ಯವಲ್ಲ.' ''[೧೨]

---

೧೨. ಅದೇ, ಪು. ೨೪.

''ನನಗೆ ಆವೇಶವುಂಟಾಗದೆ ನಾನು ವಿವೇಕಾನಂದರನ್ನು ಕುರಿತು ಬರೆಯಲಾರೆ. ಅವರೊಂದಿಗೆ ಅತ್ಯಂತ ಆತ್ಮೀಯರಾಗಿದ್ದವರ ನಡುವೆ ಕೂಡ ಕೆಲವರು ಮಾತ್ರ ಅವರನ್ನು ಸರಿಯಾಗಿ ಅರಿತುಕೊಳ್ಳಲು ಸಮರ್ಥರಾಗಿದ್ದರು. ಅವರದು ಶ್ರೀಮಂತವಾದ, ಅಗಾದವಾದ ಮತ್ತು ಸಂಕೀರ್ಣವಾದ ವ್ಯಕ್ತಿತ್ವವಾಗಿತ್ತು.''

— ಸುಭಾಷ್ ಚಂದ್ರ ಬೋಸ್

# ಭಾರತದ ಪುನರುತ್ಥಾನ ಹಾಗೂ ಚಿಕಾಗೋ ಉಪನ್ಯಾಸಗಳ ಪರಿಣಾಮ

**ಡಾ. ಹೆಚ್. ಪಾಂಡುರಂಗ ವಿಠಲ**

ಪರಕೀಯ ಆಡಳಿತದಿಂದಲೂ, ಸಾಂಸ್ಕೃತಿಕ ದಾಸ್ಯದಿಂದಲೂ ಹಲವು ಶತಮಾನಗಳವರೆಗೆ ದುಸ್ಥಿತಿಗೆ ಒಳಗಾಗಿದ್ದ ಭಾರತವನ್ನು ಮೇಲೆತ್ತುವುದಕ್ಕಾಗಿ ಸಂತತ ಚಿಂತಿಸುತ್ತಿದ್ದರು ಸ್ವಾಮೀಜಿ. ದೈವೀಪ್ರೇರಣೆಯಂತೆ ಒದಗಿಬಂದ ಚಿಕಾಗೋ ಸರ್ವಧರ್ಮ ಸಮ್ಮೇಳನದ ವೇದಿಕೆಯಲ್ಲಿ ಅವರು ಮಾಡಿದ ಭಾಷಣ ಭಾರತದ ಪುನರುತ್ಥಾನ ಕಾರ್ಯದಲ್ಲಿ ಹಲವು ರೀತಿ ಪ್ರೇರಣೆ ನೀಡಿತು. ಈ ಕುರಿತು ಬರೆದಿರುವ ಲೇಖಕರು ಮೈಸೂರಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದಾರೆ. ಒಳ್ಳೆಯ ಚಿಂತಕರೂ, ಬರಹಗಾರರೂ ಆಗಿರುವ ಇವರ ಹಲವು ಬರಹಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.



ಅಮೇರಿಕಾದ ದ್ವಿಶತಮಾನೋತ್ಸವ ೧೯೭೬ರಲ್ಲಿ ನಡೆಯಿತು. ಈ ಸಂಬಂಧ ವಾಷಿಂಗ್‌ಟನ್ನಿನಲ್ಲಿ ನಡೆದ ರಾಷ್ಟ್ರೀಯ ಭಾವಚಿತ್ರಗಳ ಪ್ರದರ್ಶನದಲ್ಲಿ 'ಹೊಸ ರಾಷ್ಟ್ರಕ್ಕೆ ಭೇಟಿ ಇತ್ತವರು' ವಿಭಾಗದಲ್ಲಿ ಸ್ವಾಮಿ ವಿವೇಕಾನಂದರ ದೊಡ್ಡ ಚಿತ್ರ ಪ್ರದರ್ಶಿತವಾಗಿತ್ತು. ಅವರ ಬಗೆಗಿನ ಉಲ್ಲೇಖ ಇಂತಿದೆ: 'ಸ್ವಾಮಿಯವರು ತಮ್ಮ ಮಾಂತ್ರಿಕ ವಾಗ್ಮಿತ್ವದಿಂದ ಶ್ರೋತೃಗಳ ಮನಸೆಳೆದು, ಅಮೇರಿಕದ ಆಧ್ಯಾತ್ಮಿಕ ಬೆಳವಣಿಗೆಯಲ್ಲಿ ಅಳಿಸಲಾಗದ ಗುರುತನ್ನು ಬಿಟ್ಟು ಹೋಗಿದ್ದಾರೆ.' ಇದು ಸತ್ಯ ಕೂಡ. ಅಮೇರಿಕಕ್ಕೆ ಭೇಟಿಯಿತ್ತ ಸಂನ್ಯಾಸಿಗಳಲ್ಲಿ ಸರ್ವಪ್ರಥಮರು ಸ್ವಾಮೀಜಿ. ವಿವಿಧ ಕ್ಷೇತ್ರಗಳಿಗೆ ಸೇರಿದ ಸುಮಾರು ಏಳು ಸಾವಿರ ಜನರಿದ್ದ ಸಭೆಯಲ್ಲಿ ಅಲ್ಲಿಯವರೆಗೆ ಯಾರಿಗೂ ಗೊತ್ತಿಲ್ಲದ ಸ್ವಾಮೀಜಿ ತಮ್ಮ ಸಂದೇಶದಿಂದ ಸಭಿಕರನ್ನು ರೋಮಾಂಚನಗೊಳಿಸಿ, ನಿರಂತರ ಚಪ್ಪಾಳೆಯ ಸ್ವಾಗತ ಗಳಿಸುವುದು ವಿಧಿಯಲ್ಲದೆ ಮತ್ತೇನು? ಪತ್ರಿಕೆಗಳು ಅವರನ್ನು ಹಿಂದೂ ಚಂಡಮಾರುತ, ಮನುಷ್ಯರ ನಡುವಿನ ರಾಜಕುಮಾರ, ಯೋಧ ಪ್ರವಾದಿ, ಆಕ್ರಮಣಕಾರಿ ಅನುಭಾವಿ ಎಂದೆಲ್ಲ ವರ್ಣಿಸಿದುವು. ಅವರನ್ನು ಭೇಟಿಯಾದ ಅಮೇರಿಕದ ವಿಚಾರವಂತರು ಅವರ ಅಧ್ಯಾತ್ಮ ಮತ್ತು ಶಕ್ತಿಸಂದೇಶಗಳಿಂದ ಪ್ರಭಾವಿತರಾದರು. ಸಮ್ಮೇಳನದ ಸಂದರ್ಭವನ್ನು ರೋಮೇ ರೋಲಾ ಅವರು ನೆನಪಿಸಿಕೊಳ್ಳುವಾಗ ಹೀಗೆನ್ನುತ್ತಾರೆ: ''ಅವರ ಶಕ್ತಿ, ಸೌಂದರ್ಯ, ವ್ಯಕ್ತಿತ್ವದ ಭವ್ಯತೆ, ಮಾತನಾಡಿದೊಡನೆ ದಿವ್ಯ ಸಂಗೀತದಂತೆ ಪ್ರಭಾವ ಬೀರುವ ಆಳವೂ ಶ್ರೀಮಂತವೂ ಆದ ಧ್ವನಿ ಸಭಿಕರ ದೊಡ್ಡ ಸಮೂಹವನ್ನು ವಶಪಡಿಸಿಕೊಂಡುವು. . . ಈ ಯೋಧ ಪ್ರವಾದಿಯ ಚಿಂತನೆ ಅಮೇರಿಕದ ಮೇಲೆ ಅಚ್ಚಳಿಯದ ಗುರುತನ್ನು ಮೂಡಿಸಿತು.''

ವಿಶ್ವಧರ್ಮ ಸಮ್ಮೇಳನದ ಉದ್ದೇಶ ಕ್ರೈಸ್ತಧರ್ಮವು ಉಳಿದ ಎಲ್ಲ ಧರ್ಮಗಳಿಗಿಂತ ಶ್ರೇಷ್ಠ ಎಂಬುದನ್ನು ಜಗತ್ತಿಗೆ ತೋರಿಸುವುದಾಗಿತ್ತು. ಇದರಲ್ಲಿ ಈ ವರೆಗೆ ಬಹಿರಂಗ ಸಭೆಗಳಲ್ಲಿ ಮಾತನಾಡಿ ಗೊತ್ತಿಲ್ಲದ ಸ್ವಾಮಿ ವಿವೇಕಾನಂದರು ಅಭೂತಪೂರ್ವವಾಗಿ ಸಭಿಕರ ಮನಸ್ಸನ್ನು ಗೆದ್ದುದು ಆಶ್ಚರ್ಯಕರ. ಹಿಂದೂಧರ್ಮದ ತಾತ್ತ್ವಿಕ ನೆಲೆಗಟ್ಟನ್ನು ತಮ್ಮ ಸಂಕ್ಷಿಪ್ತ ಭಾಷಣಗಳಲ್ಲಿ ಎತ್ತಿಹಿಡಿದು ಪಾಶ್ಚಾತ್ಯರಲ್ಲಿ ಭಾರತದ ಬಗೆಗೆ ಇದ್ದ ಪೂರ್ವಗ್ರಹ, ತಾತ್ಸಾರಗಳನ್ನು ನಿವಾರಿಸಿದರು. ಈ ಗೆಲುವು ಕ್ಷಣಿಕವಾದುದೇನೂ ಅಲ್ಲವೆಂಬುದು ಅನಂತರ ಅಮೇರಿಕದ ಮೆದುಳು, ಹಣದ ರಾಜಧಾನಿ ಎನಿಸಿದ ಬಾಸ್ಟನ್ ಹಾಗೂ ನ್ಯೂಯಾರ್ಕ್‌ಗಳಲ್ಲಿ ಅವರು ಸಾಧಿಸಿದ ಸಂಚಲನದಿಂದ ಎಲ್ಲರಿಗೂ ಮನದಟ್ಟಾಯಿತು. ಅಮೇರಿಕನ್ ಮಹಿಳೆಯರ ಮೇಲೆ ಅವರು ಬೀರಿದ ಪ್ರಭಾವ ದಟ್ಟವಾಗಿತ್ತು. ಇವರೆಲ್ಲ ಸ್ವೇಚ್ಛೆಯಿಂದ ವರ್ತಿಸುವವರು ಎಂದು ಸ್ವಾಮೀಜಿಯವರಿಗೆ ಇದ್ದ ಭಾವನೆ ಮಾಯವಾಗಿ, ಗೌರವ ಮೂಡಿತು. ಧರ್ಮದ ಉದಾತ್ತ ವಿಚಾರಗಳನ್ನು ಅನುಷ್ಠಾನಕ್ಕೆ ತರುವುದರಿಂದ

ಸಮಾಜ ಸುಧಾರಣೆ ಸಾಧ್ಯ ಎಂಬ ನಂಬಿಕೆ ಸ್ವಾಮೀಜಿಯವರಲ್ಲಿತ್ತು. ವಿಜ್ಞಾನದ ಸಂಶೋಧನೆಗಳು ಧಾರ್ಮಿಕ ನಂಬಿಕೆಗಳನ್ನು ಅಲ್ಲಾಡಿಸತೊಡಗಿದ ಆ ಪರ್ವಕಾಲದಲ್ಲಿ , ವಿಜ್ಞಾನದ ಜೊತೆ ಹೆಜ್ಜೆ ಹಾಕುವ, ಅನುಭವವೇ ತಳಹದಿಯಾದ ಅಧ್ಯಾತ್ಮದ ಬಗ್ಗೆ, ಪಾಶ್ಚಾತ್ಯ ವಿಚಾರವಂತರಲ್ಲಿ ಹೊಸ ಅರಿವನ್ನು ಹುಟ್ಟುಹಾಕಿದ್ದು ಕಡಿಮೆ ಸಾಧನೆ ಅಲ್ಲ.

### ವಿಶ್ವ ಧರ್ಮಸಮ್ಮೇಳನದಲ್ಲಿ ವಿವೇಕಾನಂದರು ಮಾತನಾಡಿದ್ದೇನು?

ಸ್ವಾಗತಕ್ಕೆ ಉತ್ತರದ ಭಾಷಣದಲ್ಲಿ ಗಮನಾರ್ಹವಾದದ್ದು ಅವರ ಪ್ರಖ್ಯಾತ ಸಂಬೋಧನೆ! ಇದರಲ್ಲಿ ತಾವು ಪ್ರತಿನಿಧಿಸುವ ಪ್ರಾಚೀನ ಸಂನ್ಯಾಸಿ ಸಂಘದ, ಎಲ್ಲ ಧರ್ಮಗಳ ತಾಯಿಯ, ಕೋಟ್ಯಂತರ ಹಿಂದೂಗಳ ಪರವಾಗಿ ಮಾತನಾಡಲು ಅವಕಾಶ ನೀಡಿದುದಕ್ಕೆ ಕೃತಜ್ಞತೆ ಸಲ್ಲಿಸುತ್ತಾರೆ. ಎಲ್ಲ ಧರ್ಮಗಳ ನೊಂದವರಿಗೆ ತಮ್ಮ ದೇಶ ಆಶ್ರಯ ನೀಡಿದುದನ್ನು ಸ್ಮರಿಸಿ, ಭಗವಂತನೆಂಬ ಸಮುದ್ರಕ್ಕೆ ಸೇರುವ ನದಿಗಳಿಗೆ ಎಲ್ಲ ಧರ್ಮಗಳನ್ನು ಹೋಲಿಸಿ, ಮತಾಂಧತೆಯನ್ನು ನಿಲ್ಲಿಸಲು ಕರೆ ನೀಡುತ್ತಾರೆ. ನಂತರದ ಭಾಷಣದಲ್ಲಿ ಬಾವಿಯ ಕಪ್ಪೆಗಳಾಗಿರುವುದರಿಂದಲೇ, ಹೊರಗಿನ ವಿಶಾಲ ಪ್ರಪಂಚದ ಅರಿವಿಲ್ಲವಾಗಿ, ನಮ್ಮಲ್ಲಿ ಒಮ್ಮತವಿಲ್ಲ ; ಅಮೆರಿಕಾದವರು ತಮ್ಮ ಕೋಟೆಯನ್ನು ಒಡೆದು ಹೊರ ಪ್ರಪಂಚದ ಧರ್ಮಗಳವರೆಲ್ಲರನ್ನೂ ಆಹ್ವಾನಿಸಿದುದಕ್ಕೆ ಅಭಿನಂದನೆ ಸಲ್ಲಿಸುತ್ತಾರೆ. ಎರಡನೆಯ ಮುಖ್ಯ ಭಾಷಣ ಹಿಂದೂಧರ್ಮ. ಸ್ತ್ರೀಯರನ್ನೂ ಒಳಗೊಂಡು ವಿವಿಧ ಋಷಿಗಳಿಂದ ಕಾಲಾಂತರದಲ್ಲಿ ಶೋಧಿತ ವಾದ ಆಧ್ಯಾತ್ಮಿಕ ನಿಯಮಗಳ ಸಂಗ್ರಹವಾದ ವೇದಗಳನ್ನು ಆಧರಿಸಿದ್ದು ಹಿಂದೂ ಧರ್ಮ. ಕಾಲಾತೀತವಾದ ವಿಜ್ಞಾನದ ಗುರುತ್ವ ನಿಯಮಗಳಂತೆಯೆ ವೇದಗಳು ಆದಿ ಅಂತ್ಯ ಇಲ್ಲದವು. ಧ್ಯಾನದಲ್ಲಿ ದೇವರ ಬಗ್ಗೆ ಕೇಂದ್ರೀಕರಿಸುವುದು ಮುಖ್ಯ. ಶಕ್ತಿಯ ನಿತ್ಯತೆಯ ನಿಯಮಕ್ಕೆ ದೇವರನ್ನು ಹೋಲಿಸಬಹುದು. ದೇವರು ಕೆಲವು ಬಾರಿ ಸಂಭಾವ್ಯ ಶಕ್ತಿಯವ, ಕೆಲವೊಮ್ಮೆ ಚಲನಶೀಲ ಆದರೆ, ಎಂದೂ ಇಲ್ಲ ಎನ್ನಲಾಗದು.. ಮನಸ್ಸು ವಸ್ತುವಾಗಿದ್ದು, ಅದರ ನಿಯಂತ್ರಣ ಸಾಧ್ಯ. ಸಾವು ಒಂದು ದೇಹದಿಂದ ಇನ್ನೊಂದು ದೇಹಕ್ಕೆ ಹೋಗುವ ಕ್ರಿಯೆ. ಪರಿಪೂರ್ಣನಾದಾಗ ಮಾನವನಿಗೆ ಅನಂತ ಆನಂದದ ಸ್ಥಿತಿ ಲಭ್ಯ. ಧ್ಯಾನದಿಂದ ಪರಿಪೂರ್ಣತೆ. ಮೂರನೆಯ ಭಾಷಣದಲ್ಲಿ ಹಣ ಪಡೆದು ಮಾಡುವ ಧರ್ಮಪ್ರಚಾರವು ಪೂರ್ವದೇಶಗಳಿಗೆ ಅನಗತ್ಯ; ಅಗತ್ಯವಾದುದು ಆಹಾರ. ನನ್ನ ದೇಶದ ದರಿದ್ರರಿಗಾಗಿ ಸಹಾಯ ಮಾಡಲು ಇಲ್ಲಿಗೆ ಬಂದೆ ಎಂದಿದ್ದಾರೆ. ಬೌದ್ಧಧರ್ಮವು ಹಿಂದೂ ಧರ್ಮದ ಸಾಫಲ್ಯ ಎಂಬ ನಾಲ್ಕನೆಯ ಭಾಷಣದಲ್ಲಿ ಹಿಂದೂ ಮತ್ತು ಬೌದ್ಧ ಧರ್ಮಗಳ ಸಂಬಂಧವನ್ನು ಯಹೂದ್ಯ ಮತ್ತು ಕ್ರೈಸ್ತ ಧರ್ಮಗಳ ಸಂಬಂಧಕ್ಕೆ ಹೋಲಿಸಿ, ಎರಡರಲ್ಲಿ ಹೊಂದಾಣಿಕೆ ಬಾರದ್ದು ದುರಂತ ಎನ್ನುತ್ತಾರೆ. ಬ್ರಾಹ್ಮಣರ ಬುದ್ಧಿಶಕ್ತಿ, ತತ್ತ್ವ ಪ್ರತಿಪಾದನೆಯ ಶಕ್ತಿಗಳಿಲ್ಲದ ಬೌದ್ಧರಿಗ ಅಸ್ತಿತ್ವವಿಲ್ಲ , ಬೌದ್ಧರ ಹೃದಯ ವೈಶಾಲ್ಯದ ನೆರವಿಲ್ಲದೆ ಬ್ರಾಹ್ಮಣರಿಗೆ ಅಸ್ತಿತ್ವವಿಲ್ಲ. ಇವರ ನಡುವೆ ಮೂಡಿದ ಕಂದಕದಿಂದ ಬೌದ್ಧರು ಭಾರತದಲ್ಲಿ ನೆಲೆ ಕಳೆದುಕೊಂಡರು, ಅವರು ಹೋದದ್ದರಿಂದ ಇಲ್ಲಿ ಸುಧಾರಣೆಗಳು ನಿಂತು, ಸಮಾಜ ಜಡವಾಯಿತು ಎಂದು ಧರ್ಮಸಮನ್ವಯದ ಅವಶ್ಯಕತೆಯನ್ನು ತಿಳಿಸುತ್ತಾರೆ. ಐದನೆಯ ಮತ್ತು ಕೊನೆಯ ಭಾಷಣದಲ್ಲಿ ಧಾರ್ಮಿಕ ಐಕ್ಯತೆಯ ಆವಶ್ಯಕತೆ ಮತ್ತು ಆ ಬಗೆಗಿನ ತಮ್ಮ ಅನಿಸಿಕೆಯನ್ನು ಹೇಳಿದ್ದಾರೆ: ಈ ಐಕ್ಯತೆ ಮತಾಂತರದಿಂದ ಅಸಾಧ್ಯ. ಧರ್ಮ ಸಮ್ಮೇಳನವು ಪಾವಿತ್ರ್ಯ, ಪರಿಶುದ್ಧತೆ, ದಾನ, ದಯೆಗಳು ಯಾವುದೇ ಒಂದು ಧರ್ಮದ ಸೊತ್ತಲ್ಲ, ಎಲ್ಲ ಧರ್ಮಗಳಲ್ಲೂ ಉದಾತ್ತ ಮಾನವರು ಇದ್ದಾರೆ. ಯಾರೂ ಇತರ ಧರ್ಮಗಳು ನಾಶವಾಗಿ ತನ್ನದೊಂದೇ ಉಳಿಯಲಿ ಎಂಬ ಭ್ರಾಂತಿ ಹೊಂದಬೇಕಿಲ್ಲ. ಬೇಗನೆ ಪ್ರತಿಯೊಂದು ಧರ್ಮದ ಧ್ವಜದ ಮೇಲೂ ಹೋರಾಟವಲ್ಲ, ಸೌಹಾರ್ದ; ವಿನಾಶವಲ್ಲ ಸ್ವೀಕಾರ; ವೈಮನಸ್ಯವಲ್ಲ, ಸಾಮರಸ್ಯ ಮತ್ತು ಶಾಂತಿ ಎಂದು ಬರೆಯಲ್ಪಡುತ್ತದೆ. ಈಗ ವಿಶ್ವಧರ್ಮ ಸಮ್ಮೇಳನದ ಐದು ಭಾಷಣಗಳು ಪಾಶ್ಚಾತ್ಯರ ಮೇಲೆ ಬೀರಿದ ಪರಿಣಾಮಗಳನ್ನು ಒಂದೊಂದಾಗಿ ಗಮನಿಸೋಣ.

### ಸಂಬೋಧನೆ

'ಅಮೆರಿಕಾದ ಸಹೋದರಿಯರೆ ಮತ್ತು ಸಹೋದರರೆ' ಎಂಬ ಸಂಬೋಧನೆಗೆ ಎಲ್ಲರೂ ಎದ್ದುನಿಂತು ಚಪ್ಪಾಳೆ ಹೊಡೆದದ್ದು ಅಮೆರಿಕಾದ ಮನಸ್ಸು ಸ್ವಾಮಿ ವಿವೇಕಾನಂದರನ್ನು ಸ್ವೀಕರಿಸಿದ್ದನ್ನು ತಿಳಿಸುತ್ತದೆ. ಸಾಮಾನ್ಯವಾಗಿ ತಮ್ಮಿಂದ ಇತರರು ಬೇರೆ ಎನ್ನುವುದು ಎಲ್ಲರ ಅನುಭವ. ಈ ಭಾವನೆ ವಿಶಿಷ್ಟವಾದದ್ದು. ಒಂದು ಕುಟುಂಬದ ಸದಸ್ಯನಾಗಿ ಇನ್ನೊಂದು ಕುಟುಂಬವನ್ನು ನೋಡಲು ಹೋದಾಗ, ಆತ ತನ್ನ ಹಿಂದಿನ ಕುಟುಂಬದೊಂದಿಗೆ ಒಗ್ಗೂಡಿ, ತನ್ನ ಕುಟುಂಬ ಬೇರೆ, ಈ ಕುಟುಂಬ ಬೇರೆ ಎನ್ನುವ ಅಭಿಪ್ರಾಯದಲ್ಲಿ ಇರುತ್ತಾನೆ. ಈ ರೀತಿ ತನ್ನ ಹಿಂದೆ ಇರುವ ಕುಟುಂಬದೊಡನೆ ತಾದಾತ್ಮ್ಯದ ಭಾವವನ್ನು ಅನುಭವಿಸುತ್ತಾನೆ. ಇದೇ ರೀತಿ ಮತ್ತೊಂದು ಊರಿನವರ ಜೊತೆ ಇರುವಾಗ ತನ್ನ ಊರಿನವರ ಜೊತೆ, ಮತ್ತೊಂದು ಧರ್ಮದವರ ಜೊತೆ ಇರುವಾಗ ತನ್ನ ಧರ್ಮದವರ ಜೊತೆ ತಾದಾತ್ಮ್ಯ ಅರಿವಿಲ್ಲದೆ ನಮ್ಮ ಮನಸ್ಸಿನಲ್ಲಿರುತ್ತದೆ. ಹೀಗಾಗಿಯೆ ಸ್ವಾಮಿ ವಿವೇಕಾನಂದರ ಹೃದಯದಾಳದ ಅನುಭೂತಿಯಿಂದ ಹೊರಹೊಮ್ಮಿದ ವಿಶ್ವ ಭ್ರಾತೃತ್ವದ ಶಕ್ತಿಯುತ ಸಂಬೋಧನೆ ಸಭಿಕರನ್ನು ಅಚ್ಚರಿಗೊಳಿಸಿದ್ದು, ಹಾಗೂ ಅವರನ್ನು ತಮ್ಮವರೆಂದು ಸ್ವೀಕರಿಸಲು ಸಾಧ್ಯವಾದದ್ದು. ನಿವೇದಿತಾ ಹೇಳುವಂತೆ ಸ್ವಾಮೀಜಿಯ ಮುಂದಿದ್ದ ಶ್ರೋತೃಗಳು ಒಂದು ವಿನೂತನ ಮಾನಸಿಕ ವಾತಾವರಣವನ್ನು ಸೃಷ್ಟಿಸಿದ್ದರು. ಅವರೆಲ್ಲರೂ ಯುವ ಮನಸ್ಸಿನಿಂದ ಕೂಡಿದ್ದು ಅಪಾರ ಶಕ್ತಿಯಿಂದ, ಆತ್ಮ ವಿಶ್ವಾಸದಿಂದ ತುಂಬಿ ತುಳುಕುತ್ತಿದ್ದರು. ಇತ್ತ ಸ್ವಾಮೀಜಿಯ ಹಿನ್ನೆಲೆಯಲ್ಲಿ ಶತಶತಮಾನಗಳ ಆಧ್ಯಾತ್ಮಿಕ

ಬೆಳವಣಿಗೆಯಿಂದ ಶಾಂತವಾದ ಅನುಭವಸಾಗರವೇ ಇತ್ತು. ಪ್ರಾಚ್ಯ ಮತ್ತು ಆಧುನಿಕ ಚಿತ್ತಪ್ರವಾಹಗಳು ಎರಡು ಮಹಾ ಭಾವನದಿಗಳು ಅಲ್ಲಿ ಸಂಧಿಸಿದವು, ಸಂಗಮ ಸ್ಥಾನದಲ್ಲಿ ಸ್ವಾಮಿ ವಿವೇಕಾನಂದರು ಇದ್ದರು.

### ಧರ್ಮಗಳೊಂದಿಗೆ ಸಾಧ್ಯವಾದ ಸಂವಾದ

೧೮೯೩ರಲ್ಲಿ ವಿಶ್ವಧರ್ಮ ಸಮ್ಮೇಳನದಲ್ಲಿ ವಿಶ್ವವಿಜೇತ ಸ್ವಾಮಿ ವಿವೇಕಾನಂದರು ಭಾಷಣ ಮಾಡಿದ ಆರ್ಟ್ ಇನ್‌ಸ್ಟಿಟ್ಯೂಟ್ ಈಗ ಪುನರ್‌ನಿರ್ಮಾಣಗೊಂಡು, ಆರ್ಟ್ ಮ್ಯೂಸಿಯಂ ಆಗಿದೆ. ೬೦೦೦ ಜನ ಕೂರಬಹುದಾಗಿದ್ದ ಆ ಸಭಾಂಗಣದ ಜಾಗದಲ್ಲಿ ೩೦೦ ಜನ ಕೂರುವ ಆಧುನಿಕ ಸೌಲಭ್ಯಗಳುಳ್ಳ ಸಭಾಂಗಣವಿದ್ದು ಅದು ಆರ್ಟ್ ಇನ್‌ಸ್ಟಿಟ್ಯೂಟ್ ಭಾಗವಾಗಿದೆ. ಅಲ್ಲಿ ಹಾಕಿದ ಫಲಕದಲ್ಲಿ ಈ ರೀತಿ ಬರೆದಿದೆ: 'ವರ್ಲ್ಡ್ ಕೊಲಂಬಿಯನ್ ಎಕ್ಸ್‌ಪೊಸಿಷನ್ ಜೊತೆಗೆ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ, ಅಮೆರಿಕದಲ್ಲಿ ಪ್ರಪ್ರಥಮವಾಗಿ ವೇದಾಂತವನ್ನು ಕಲಿಸಲು ಬಂದ ಹಿಂದೂ ಸಂನ್ಯಾಸಿ ವಿವೇಕಾನಂದರು (೧೮೬೩-೧೯೦೨) ಈ ಸ್ಥಳದಲ್ಲಿ ೧೮೯೩ರ ಸೆಪ್ಟೆಂಬರ್ ೧೧ ಮತ್ತು ೨೭ ದಿನಾಂಕಗಳ ನಡುವೆ ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡಿದರು. ಅವರಿಗೆ ಸಿಕ್ಕ ಅಭೂತಪೂರ್ವ ಯಶಸ್ಸು ಪಶ್ಚಿಮದ ಹಾಗೂ ಪೂರ್ವದ ಧರ್ಮಗಳ ನಡುವೆ ಸಮಾನ ನೆಲೆಯಲ್ಲಿ ಸಂವಾದ ಏರ್ಪಡುವಂತೆ ಹಾದಿಯನ್ನು ತೆರೆಯಿತು.'

### ವೇದಾಂತದ ಸಂದೇಶ

ಸ್ವಾಮೀಜಿಯ ಸಂದೇಶವು ತನ್ನ ಇಳಿತದ, ಅವನತಿಯ ವಿಷಮ ಸ್ಥಿತಿಗಳಲ್ಲಿ ಭಾರತವನ್ನು ಮತ್ತೆ ಮತ್ತೆ ಕಾಪಾಡಿದ ವೇದಾಂತದ ಸಂದೇಶ. 'ಸತ್ಯ ಒಂದೇ; ಋಷಿಗಳು ಅದನ್ನು ಬೇರೆಬೇರೆ ಹೆಸರಿನಿಂದ ಕರೆಯುವರು' ಎಂಬುದು ಅದರ ಸಾರ!. ಎರಡಿಲ್ಲದ ದೇವರು, ಆತ್ಮದ ದೈವಿಕತೆ, ಅಸ್ತಿತ್ವದ ಏಕತೆ, ಧರ್ಮಗಳ ಸಾಮರಸ್ಯ ಎಂಬುವು ಅದರ ನಾಲ್ಕು ಆಧಾರ ಸ್ತಂಭಗಳು. ಒಳಗಿನ ದೈವಿಕತೆಯನ್ನು ಹೊರತರುವುದೇ ಧರ್ಮ. ಧರ್ಮಗಳ ನಡುವಿನ ಸಾಮರಸ್ಯವನ್ನು ಅರಿಯಲು ನಮ್ಮ ಆಧ್ಯಾತ್ಮಿಕ ಪ್ರಜ್ಞೆಯನ್ನು ಆಳಗೊಳಿಸಬೇಕು. ವೇದಾಂತವು ಕ್ರೈಸ್ತನನ್ನು ಉತ್ತಮ ಕ್ರೈಸ್ತನನ್ನಾಗಿ, ಹಿಂದೂವನ್ನು ಉತ್ತಮ ಹಿಂದುವನ್ನಾಗಿ, ಮುಸಲ್ಮಾನನನ್ನು ಉತ್ತಮ ಮುಸ್ಲಿಂ ಆಗಿ ಮಾಡುವುದು, ಅದಕ್ಕಾಗಿ ಮತಾಂತರಗೊಳ್ಳಬೇಕಿಲ್ಲ ಎನ್ನುವ ಮಾತು ಆ ಕಾಲಕ್ಕೆ ಅಗತ್ಯವಾಗಿ ಬೇಕಿದ್ದುದು. ಆಂತರಿಕ ಯುದ್ಧದಿಂದ ಅಮೆರಿಕ ಜರ್ಜರಿತವಾಗಿತ್ತು. ಜನರ ಧಾರ್ಮಿಕ ನಂಬಿಕೆ, ಆಚಾರ ಮೊದಲಾದುವನ್ನು ವಿಜ್ಞಾನ ಅದರಲ್ಲೂ ಡಾರ್ವಿನ್ನನ ವಿಕಾಸವಾದ ಬುಡಮೇಲು ಮಾಡಿತ್ತು. ಮಾನವೀಯತೆ, ಅನುಭಾವಗಳನ್ನು ವಿಜ್ಞಾನದ ಜೊತೆಗೆ ಹೊಂದಾಣಿಕೆ ಮಾಡಬಲ್ಲ ತತ್ತ್ವಜ್ಞಾನವೊಂದರ ಹುಡುಕಾಟದಲ್ಲಿದ್ದ ಅಮೆರಿಕನ್ನರಿಗೆ ಸ್ವಾಮೀಜಿಯ ಮಾತು ಅಮೃತಸಮಾನವಾಯಿತು. ಈ ಶಕ್ತಿಸಂದೇಶ ಪ್ರಾಚೀನವಾಗಿತ್ತು; ಆದರೆ ಅದನ್ನು ಅಭಿವ್ಯಕ್ತಗೊಳಿಸಿದ ರೀತಿ ಹೊಸದಿತ್ತು. ಪ್ರೇರಣೆ ಮತ್ತು ಪರಿವರ್ತನೆಯ ಶಕ್ತಿಯುಳ್ಳ ವಿವೇಕವಾಣಿಯು ಮಾನವತೆಯ ಭವಿಷ್ಯಧರ್ಮವನ್ನಾಗಿ ವೇದಾಂತವನ್ನು ಸ್ಥಾಪಿಸಿತು.

### ನಿಜವಾದ ಭವಿಷ್ಯ

ಸ್ವಾಮೀಜಿ ಆಧುನಿಕ ವಿಜ್ಞಾನ, ಶಿಕ್ಷಣಗಳು ದೇಶಗಳ ನಡುವಿನ ಗೋಡೆಗಳನ್ನು ಒಡೆದು, ವಿಶ್ವನೀಡಂ ಕಲ್ಪನೆಯು ಸಾಕಾರಗೊಳ್ಳುವುದು ಎಂದಿದ್ದರು. (ಜಾಗತೀಕರಣ ಇಂದಿನ ವಾಸ್ತವ.) ಅದಕ್ಕೆ ಕುಲ, ಸಂಸ್ಕೃತಿ, ವಿವಿಧ ಧರ್ಮಗಳ ಪರಿಮಿತಿಯನ್ನು ದಾಟುವ ಸಾಮಾನ್ಯ ಜೀವಗಳು ಅಗತ್ಯ. ಸಮ್ಮೇಳನದಲ್ಲಿನ ತಮ್ಮ ಕೊನೆಯ ಭಾಷಣದಲ್ಲಿ ಪ್ರತಿಯೊಂದು ಧರ್ಮದ ಧ್ವಜದ ಮೇಲೂ ಬಹುಬೇಗ ಈ ಮಾತುಗಳು ಬರೆಯಲ್ಪಡುತ್ತವೆ: 'ಹೋರಾಟವಲ್ಲ, ಸೌಹಾರ್ದ' 'ವಿನಾಶವಲ್ಲ, ಸ್ವೀಕಾರ' 'ವೈಮನಸ್ಯವಲ್ಲ, ಸಾಮರಸ್ಯ ಮತ್ತು ಶಾಂತಿ.' ಆಗಿನ್ನೂ ವಿಶ್ವಯುದ್ಧಗಳು ನಡೆದಿರದಿದ್ದರೂ, ನಿರಂತರ ಯುದ್ಧಗಳು, ಐಕ್ಯತೆಯ ಬದಲು ಒಡಕುಗಳು ಮೆರೆದಾಡಿದ್ದುವು. ಕ್ರೌರ್ಯ ಹಿಂಸೆ ದ್ವೇಷಗಳ ಕೆಳಗೆ ಹೂತು ಹೋದ ಮಾನವ ಜನಾಂಗದ ಆತ್ಮಕ್ಕೆ ಈ ಮಾತುಗಳು ಎಂತಹ ಭರವಸೆಯನ್ನು ನೀಡಿದ್ದಿರಬೇಡ!

### ದೇಶಭಕ್ತಿ

ಸ್ವಾಗತಕ್ಕೆ ಉತ್ತರ ನೀಡುವ ಭಾಷಣದಲ್ಲಿಯೆ ಸ್ವಾಮಿ ವಿವೇಕಾನಂದರ ದೇಶಭಕ್ತಿ ಉಜ್ವಲವಾಗಿ ಹೊರಹೊಮ್ಮಿದೆ. ಎಲ್ಲ ದೇಶಗಳು, ಮತಗಳಿಂದ ಬೆನ್ನಟ್ಟಿ ಹಿಂಸಿಸಲ್ಪಟ್ಟ ನಿರಾಶ್ರಿತರಿಗೆ ಆಶ್ರಯ ನೀಡಿದ ದೇಶಕ್ಕೆ ಸೇರಿದವನು ನಾನು ಎಂದು ಹೆಮ್ಮೆಯಿಂದ ಹೇಳುತ್ತಾರೆ. ನಮ್ಮವರು ಎಲ್ಲವನ್ನೂ ಸಹಿಸುವುದು ಮಾತ್ರವಲ್ಲ, ಎಲ್ಲ ಧರ್ಮಗಳೂ ನಿಜವೆಂದು ಒಪ್ಪಿಕೊಂಡಿದ್ದೇವೆ. ರೋಮನರಿಂದ ಓಡಿಸಲ್ಪಟ್ಟ ಯಹೂದ್ಯರಿಗೆ ಅವರ ದೇವಸ್ಥಾನವನ್ನು ಪುಡಿಗೈದ ವರ್ಷವೇ ದಕ್ಷಿಣ ಭಾರತದಲ್ಲಿ ನೆಲೆ ನೀಡಿದ್ದೇವೆ. ಅಳಿದುಳಿದ ಝುರತುಷ್ಟ ಮತೀಯರಿಗೆ ಇನ್ನೂ ನಮ್ಮ ದೇಶವೇ ಮನೆ. ನಮ್ಮ ಪ್ರಕಾರ ಕ್ರೈಸ್ತನು ಹಿಂದೂ ಅಥವಾ ಬೌದ್ಧನಾಗಬೇಕಿಲ್ಲ; ಹಿಂದೂ ಅಥವಾ ಬೌದ್ಧನೊಬ್ಬ ಕ್ರೈಸ್ತನಾಗಿ ಮತಾಂತರ ಹೊಂದಬೇಕಿಲ್ಲ. ಆದರೆ ಪ್ರತಿಯೊಬ್ಬನೂ ಇತರರ ಮನೋಭಾವವನ್ನು ಗ್ರಹಿಸಬೇಕು; ಆದಾಗ್ಯೂ ತನ್ನತನವನ್ನು ಉಳಿಸಿಕೊಂಡು ತನ್ನ ಬೆಳವಣಿಗೆಯ ನಿಯಮಗಳಿಗೆ ಅನುಸಾರವಾಗಿ ಬೆಳೆಯಬೇಕು ಎನ್ನುತ್ತಾರೆ. ಬಾವಿಯ ಕಪ್ಪೆಯಾಗದೆ ನಾವು ನಮ್ಮ ಪುಟ್ಟ ಪ್ರಪಂಚಕ್ಕೆ ಕಟ್ಟಿಕೊಂಡ ಬೇಲಿಗಳನ್ನು ಭೇದಿಸಿ ವಿಶ್ವದೊಂದಿಗೆ ಬೆರೆಯಬೇಕು ಎನ್ನುವ ಅನಿಸಿಕೆ ಅವರದು. ಭಾರತದ ಸಮನ್ವಯ ಭಾವವನ್ನು ಗೌರವ ಹುಟ್ಟಿಸುವಂತೆ ಪಾಶ್ಚಾತ್ಯರೆದುರು ಇಟ್ಟ ರೀತಿ ತರ್ಕಬದ್ಧವಾಗಿತ್ತು.

## ವಿಜ್ಞಾನದೊಡನೆ ಸಾಮರಸ್ಯ

ತಮ್ಮ ಭಾಷಣಗಳಲ್ಲಿ ಸ್ವಾಮಿ ವಿವೇಕಾನಂದರು ವಿಜ್ಞಾನದ ವಿಚಾರಗಳು, ನುಡಿಗಟ್ಟುಗಳನ್ನು ಬಳಸಿದ್ದಾರೆ. ಬಾವಿಯೊಳಗಿನ ಕಪ್ಪೆಯ ಕತೆ ಹೇಳುವಾಗ ಅದಕ್ಕೆ ಕಣ್ಣು ಇತ್ತೋ ಇಲ್ಲವೋ ಎಂಬುದನ್ನು ಹೇಳಲು ವಿಕಾಸವಾದಿಗಳು ಅಲ್ಲಿ ಇರಲಿಲ್ಲ ಎನ್ನುತ್ತಾರೆ. ಹಿಂದೂಧರ್ಮದ ಬಗೆಗಿನ ಭಾಷಣದಲ್ಲಿ ವಿಶ್ವಶಕ್ತಿಯ ಒಟ್ಟು ಮೊತ್ತ ಎಲ್ಲ ಕಾಲಕ್ಕೂ ಒಂದೇ ಆಗಿದೆ ಎಂಬುದನ್ನು ವಿಜ್ಞಾನ ಸಾಧಿಸಿ ತೋರಿಸಿದೆ ಎಂದು ಹೇಳಲಾಗುತ್ತಿದೆ ಎಂಬುದನ್ನು ವೇದಗಳು ಸೃಷ್ಟಿಗೆ ಆದಿ ಅಂತ್ಯಗಳಿಲ್ಲ ಎಂದು ಹೇಳುತ್ತಿವೆ ಎನ್ನುವಾಗ ಬಳಸಿಕೊಂಡು ತಮ್ಮ ಧರ್ಮ ವೈಜ್ಞಾನಿಕವೂ ಆಗಿದೆ ಎನ್ನುವುದನ್ನು ತೋರಿಸುತ್ತಾರೆ. ವಿಜ್ಞಾನವೆಂದರೆ ಐಕ್ಯತೆಯನ್ನು ಕಂಡು ಹಿಡಿಯುವುದು ಎಂದಲ್ಲದೆ ಬೇರೇನೂ ಅಲ್ಲ ಎಂದು ಹೇಳಿ, ಉಳಿದೆಲ್ಲ ಶಕ್ತಿಗಳೂ ಯಾವ ಒಂದು ಶಕ್ತಿಯ ವ್ಯಕ್ತರೂಪಗಳಾಗಿವೆಯೋ ಆ ಶಕ್ತಿಯನ್ನು ಕಂಡುಹಿಡಿದಲ್ಲಿ ಭೌತವಿಜ್ಞಾನದ ಬೆಳವಣಿಗೆ ನಿಂತಂತೆಯೇ ಎನ್ನುತ್ತಾರೆ. ಇದೇ ರೀತಿ ಜೀವ ಪ್ರವಾಹವಾಗಿ, ಚಿರವಾದ ಆಧಾರಭೂತನಾದ, ಉಳಿದೆಲ್ಲ ಆತ್ಮಗಳೂ ಯಾವ ಒಂದು ಆತ್ಮದ ತೋರಿಕೆಯ ವ್ಯಕ್ತರೂಪಗಳೋ ಅವನನ್ನು ಕಂಡುಹಿಡಿದಾಗ ಧರ್ಮ ಪರಿಪೂರ್ಣತೆಯನ್ನು ಪಡೆಯುತ್ತದೆ. ವಿಜ್ಞಾನ ಅಂತಿಮವಾಗಿ ಇದೇ ಸಿದ್ಧಾಂತಕ್ಕೆ ಬಂದೇ ತೀರುತ್ತದೆ. ಇಂದು ಅದು ಬಳಸುತ್ತಿರುವ ಪದ ಸೃಷ್ಟಿ ಎಂಬುದಲ್ಲ, ಅಭಿವ್ಯಕ್ತಿ ಎಂಬುದು. ಹಿಂದುವಾದವನು ಯಾವ ಭಾವನೆಯನ್ನು ಬಹು ದೀರ್ಘಕಾಲದಿಂದಲೂ ಪೋಷಿಸಿಕೊಂಡು ಬಂದಿದ್ದಾನೋ ಅದನ್ನೇ ಇಂದು ವಿಜ್ಞಾನ ಇಂದು ಹೆಚ್ಚು ಅಧಿಕೃತವಾದ ಮತ್ತು ಶಕ್ತಿಯುತ ವಾದ ಭಾಷೆಯಲ್ಲಿ ಪ್ರತಿಪಾದಿಸುತ್ತಿದೆ. ಪಾಶ್ಚಾತ್ಯರ ನಂಬುಗೆಯ ಮೇಲೆ ಆಧಾರಿತವಾದ ಧರ್ಮ ವಿಜ್ಞಾನದ ಸಿದ್ಧಾಂತಗಳ ಹೊಡೆತಕ್ಕೆ ಸಿಕ್ಕಿ ನವೆಯುತ್ತಿದ್ದಾಗ, ವಿಜ್ಞಾನದೊಡನೆ ಸಾಮರಸ್ಯ ಹೊಂದಿರುವ ಧರ್ಮದ ಬಗ್ಗೆ ಕುತೂಹಲ ಜಾಗ್ರತವಾದುದು ವಿಶೇಷವಲ್ಲ. ಪ್ರಸಿದ್ಧ ವಿಜ್ಞಾನಿಗಳನೇಕರು ಸ್ವಾಮೀಜಿಯವರ ಸ್ನೇಹಿತರಾದರು.

ವಿಶ್ವಾತ್ಮಕ ಮಾನವ ಚೇತನವನ್ನು ಆಧರಿಸಿದ ವೇದಾಂತ ಅಥವಾ ಹಿಂದೂ ಧರ್ಮದ ಬಗ್ಗೆ ಮಾತನಾಡುತ್ತ ಸ್ವಾಮೀಜಿ ಹೀಗೆ ಹೇಳುತ್ತಾರೆ: ''ಯಾವುದರೊಂದಿಗೆ ಹೋಲಿಸಿದರೆ ಇಂದಿನ ವಿಜ್ಞಾನದ ನವೀನ ಅನ್ವೇಷಣೆಗಳೆಲ್ಲ ಕೇವಲ ಪ್ರತಿಧ್ವನಿಯಂತೆ ಭಾಸವಾಗುವುವೋ ಅಂತಹ ವೇದಾಂತ ತತ್ತ್ವದ ಆಧ್ಯಾತ್ಮಿಕ ಔನ್ನತ್ಯದಿಂದ ಹಿಡಿದು, ವಿಗ್ರಹಾರಾಧನೆ ಎಂಬ ಅಲ್ಪ ಭಾವನೆ, ಲೆಕ್ಕವಿಲ್ಲದಷ್ಟು ಪುರಾಣಗಳ ರಾಶಿ, ಬೌದ್ಧರ ಅಜ್ಞೇಯತಾವಾದ, ಜೈನರ ನಾಸ್ತಿಕತೆ ಮುಂತಾದವುಗಳವರೆಗೆ ಎಲ್ಲಕ್ಕೂ ಹಿಂದೂ ಧರ್ಮದಲ್ಲಿ ಸ್ಥಾನವಿದೆ. ಹೀಗೆ ಎಲ್ಲವನ್ನೂ ಒಳಗೊಳ್ಳುವ ಧರ್ಮವು ವಿಜ್ಞಾನಕ್ಕೆ ವಿರೋಧಿ ಆಗದು.''

## ಧರ್ಮಗಳ ನಡುವೆ ಸಾಮರಸ್ಯ

'ಯಾರು ಹೇಗೆ ನನ್ನ ಬಳಿಗೆ ಬಂದರು ನಾನು ಹಾಗೆಯೇ ಅವರನ್ನು ಸ್ವೀಕರಿಸುತ್ತೇನೆ; ಮಾನವರೆಲ್ಲರೂ ಕೊನೆಗೆ ನನ್ನನ್ನೇ ಬಂದು ಸೇರುವ ಪಥಗಳಲ್ಲಿ ಸಾಗುತ್ತಿದ್ದಾರೆ' (೪-೧೧) ಎಂಬ ಗೀತಾ ಶ್ಲೋಕವನ್ನು ಮೊದಲ ಭಾಷಣದಲ್ಲೇ ಉದಾಹರಿಸುವ ಸ್ವಾಮೀಜಿ ಧರ್ಮಗಳ ನಡುವೆ ಸಹನೆ ಇರಬೇಕು; ಮತಾಂಧತೆ, ಸ್ವಮತ ಭ್ರಾಂತಿ ಕೊನೆಗೊಳ್ಳಬೇಕು ಎನ್ನುತ್ತಾರೆ. ಈ ಸಮನ್ವಯದ ಸತ್ಯವೇ ಭಾರತದ ತಾತ್ವಿಕ ಪರಂಪರೆಯನ್ನು ಮೂರುಸಾವಿರ ವರ್ಷಗಳಿಂದ ಎಲ್ಲ ಬಗೆಯ ದಾಳಿಗಳಿಂದ ರಕ್ಷಿಸಿದೆ.

ಕೊನೆಯ ಭಾಷಣದಲ್ಲಿ ಸ್ವಾಮೀಜಿ ಧಾರ್ಮಿಕ ಐಕ್ಯತೆಯ ಸಮಾನ ಭೂಮಿಕೆಯು ಯಾವುದೇ ಒಂದು ಧರ್ಮದ ವಿಜಯ, ಇತರ ಧರ್ಮಗಳ ನಾಶದಿಂದ ಸಾಧಿತವಾಗದು ಎನ್ನುತ್ತಾರೆ. ಪ್ರತಿಯೊಬ್ಬನೂ ಇತರರ ಮನೋಭಾವವನ್ನು ಗ್ರಹಿಸಬೇಕು, ಗೌರವಿಸಬೇಕು; ಆದರೆ ಮತಾಂತರ ಸಲ್ಲದು. ಪ್ರತಿಯೊಬ್ಬನೂ ತನ್ನ ವೈಯಕ್ತಿಕತೆಯನ್ನು ಉಳಿಸಿಕೊಂಡು ತನ್ನದೇ ಬೆಳವಣಿಗೆಯ ನಿಯಮಗಳಿಗೆ ಅನುಗುಣವಾಗಿ ಬೆಳೆಯಬೇಕು.

## ಆಚರಣೆಗಳ ಅವಶ್ಯಕತೆ

ಇತರ ಧರ್ಮಗಳ (ವಿಗ್ರಹಾರಾಧನೆಯಂತಹ) ಆಚರಣೆಗಳನ್ನು ಹೀಗಳೆಯುವವರಿಗೆ ಸ್ವಾಮೀಜಿ ಪ್ರಶ್ನಿಸುತ್ತಾರೆ: ಕ್ರೈಸ್ತ ಚರ್ಚಿಗೆ ಏಕೆ ಹೋಗಬೇಕು? ಶಿಲುಬೆ ಏಕೆ ಪವಿತ್ರ? ಪ್ರಾರ್ಥನೆ ಮಾಡುವಾಗ ಮುಖವನ್ನು ಏಕೆ ಮೇಲೆತ್ತಬೇಕು? ಚರ್ಚಿನಲ್ಲಿ ಅನೇಕ ವಿಗ್ರಹಗಳೇಕೆ ಇರುತ್ತವೆ? ಪ್ರಾಟೆಸ್ಟಂಟರು ಪ್ರಾರ್ಥಿಸುವಾಗ ಅವರ ಮನಸ್ಸಿನಲ್ಲಿ ಅನೇಕ ಆಕಾರಗಳು ಏಕೆ ಬರುತ್ತವೆ? ರೂಪು ಕೊಡದೆ ನಾವು ಮನಸ್ಸಿನಲ್ಲಿ ಏನನ್ನೂ ಆಲೋಚಿಸಲಾರೆವು. ಆದ್ದರಿಂದಲೇ ಹಿಂದುವು ಪ್ರಾರ್ಥಿಸುವಾಗ ಬಾಹ್ಯಪ್ರತೀಕದ ನೆರವು ಪಡೆಯುತ್ತಾನೆ. ಸತ್ಯ, ಪವಿತ್ರತೆ ಮೊದಲಾದ ಅಮೂರ್ತ ಭಾವನೆಗಳನ್ನು ಸಂಕೇತಗಳಿಲ್ಲದೆ ಪರಿಭಾವಿಸಲು ಆಗದು. ಸಾಧನೆಯ ಪ್ರಾಥಮಿಕ ಹಂತಗಳಲ್ಲಿ ಇವುಗಳು ಅವಶ್ಯ. ಎಲ್ಲರೂ ಒಂದೇ ವಿಧವಾದ ಆಚರಣೆ ಅಥವಾ ಸಂಕೇತವನ್ನು ಒಪ್ಪಿಕೊಳ್ಳಬೇಕು ಎಂದಲ್ಲ. ಇತರರ ಆಚರಣೆಗಳನ್ನು ಎಂದೂ ಹಿಂದುವು ನಿಂದಿಸುವುದಿಲ್ಲ.

## ಧಾರ್ಮಿಕ ಐಕ್ಯತೆ

ಸ್ವಾಮೀಜಿ ತಮ್ಮ ಕೊನೆಯ ಭಾಷಣದಲ್ಲಿ ಇತರ ಧರ್ಮಗಳ ನಾಶ, ಒಂದು ಧರ್ಮದ ವಿಜಯದಿಂದ ಧಾರ್ಮಿಕ ಐಕ್ಯತೆ ಸಾಧಿತವಾಗದು ಎಂದು ಎಚ್ಚರಿಸಿದ್ದಾರೆ. ಧರ್ಮವೆಂದರೆ ಒಂದು ಬೆಳೆಯುತ್ತಿರುವ ಚೈತನ್ಯದ ಚಿಲುಮೆಯೇ ಹೊರತು ಮತಪಂಥಗಳಲ್ಲಿ ಕಟ್ಟಿಹಾಕಲ್ಪಟ್ಟ ಕಂತೆಯಲ್ಲ ಎಂಬುದು ಅವರ ಅನಿಸಿಕೆ. ಹೀಗಾಗಿ ಒಂದು ಧರ್ಮದವನು ಇನ್ನೊಂದು ಧರ್ಮಕ್ಕೆ ಮತಾಂತರವಾಗಬೇಕಿಲ್ಲ. ಇನ್ನೊಂದೆಡೆ ಅವರು ಪೂರ್ವದೇಶಗಳ ಅಗತ್ಯ

ಮತಧರ್ಮವಲ್ಲ , ಅವರಲ್ಲಿ ಅದು ಯಥೇಚ್ಛವಾಗಿದೆ ಎಂದು ಮಿಷನರಿಗಳನ್ನು ಕಳುಹಿಸುತ್ತಿರುವ ಬಗ್ಗೆ ಟೀಕಿಸಿದರು. ಸ್ವಾಮೀಜಿಯ ಭಾಷಣಗಳ ಪ್ರಭಾವದಿಂದ ಮತಪ್ರಚಾರಕರ ವ್ಯಾಪಾರ ಕುಗ್ಗಿ ಅವರು ಸಿಟ್ಟಾಗಿ, ಅಪಪ್ರಚಾರ ಮಾಡಲಾರಂಭಿಸಿದರು.

### ವಿಶ್ವಧರ್ಮದ ಕಲ್ಪನೆ

ಹಿಂದೂಧರ್ಮದ ಬಗೆಗಿನ ಲಿಖಿತ ಭಾಷಣದ ಕೊನೆಯಲ್ಲಿ ಸ್ವಾಮೀಜಿ ಹೀಗೆನ್ನುತ್ತಾರೆ: ''ಜಗತ್ತಿನಲ್ಲಿ ಎಂದಾದರೂ ಒಂದು ವಿಶ್ವಧರ್ಮ ಎನ್ನುವುದು ಅಸ್ತಿತ್ವಕ್ಕೆ ಬರುವುದಾದಲ್ಲಿ, ಅದು ಕಾಲ ದೇಶಗಳ ಎಲ್ಲೆಯನ್ನು ಮೀರಬಲ್ಲುದಾಗಿರಬೇಕು. ಅದು ತಾನು ಯಾವ ದೇವರನ್ನು ಕುರಿತು ಬೋಧಿಸುತ್ತಿದೆಯೋ ಆ ದೇವರಷ್ಟೇ ಅನಂತವಾಗಿರಬೇಕು. ಅದರ ಬೋಧನೆಯ ದೀಪ್ತಿ ಎಲ್ಲ ಧರ್ಮದವರಿಗೂ, ಸಂತರಂತೆ ಪಾಪಿಗಳಿಗೂ ದೊರಕುವಂತಿರಬೇಕು. ಅದು ಎಲ್ಲ ಧರ್ಮಗಳ ಮೊತ್ತವಾಗಿರಬೇಕು. ಅದು ತನ್ನ ವೈಶಾಲ್ಯದಿಂದ ತನ್ನ ಅನಂತ ಬಾಹುಗಳನ್ನು ಚಾಚಿ, ಯಾವ ಭೇದವೂ ಇಲ್ಲದೆ ಎಲ್ಲರನ್ನೂ ಆಲಂಗಿಸಿಕೊಳ್ಳುವಂತೆ ಇರಬೇಕು. ಪಶುಪ್ರಾಯನಾದ ಕಾಡುಮನುಷ್ಯನಿಂದ ಹಿಡಿದು ತನ್ನ ಹೃದಯ ವೈಶಾಲ್ಯ ಮತ್ತು ಬುದ್ಧಿಶಕ್ತಿಯಿಂದ ಅತ್ಯುನ್ನತ ಸ್ಥಿತಿಗೆ ಏರಿ, ಇವನು ಮನುಷ್ಯಮಾತ್ರನೆ ಎಂದು ಸಮಾಜ ಅಚ್ಚರಿಯಿಂದ ಯಾರನ್ನು ನೋಡುತ್ತದೆಯೋ ಅಂತಹ ವ್ಯಕ್ತಿಯವರೆಗೆ ಎಲ್ಲರನ್ನೂ ಆ ಧರ್ಮ ಒಳಗೊಳ್ಳುವಂತೆ ಇರಬೇಕು. ಯಾರು ಹಿಂದೂಗಳ ಬ್ರಹ್ಮನೋ, ಝುರತುಷ್ಟ್ರರ ಅಹುರ ಮಜ್ದನೋ, ಬೌದ್ಧರ ಬುದ್ಧನೋ, ಯಹೂದ್ಯರ ಯಹೋವನೋ, ಕ್ರೈಸ್ತರ ಸ್ವರ್ಗದಲ್ಲಿರುವ ತಂದೆಯೋ ಅವನು ನಿಮಗೆ ಈ ಉದಾತ್ತ ಭಾವನೆಯನ್ನು ಕಾರ್ಯಗತಗೊಳಿಸುವ ಶಕ್ತಿಯನ್ನು ನೀಡಲಿ.''

ಸ್ವಾಮೀಜಿಯವರು ತಮ್ಮ ಭಾಷಣಗಳಿಂದ ತಮ್ಮ ಧರ್ಮವನ್ನು ವಿಶ್ವಧರ್ಮದ ಮಟ್ಟಕ್ಕೆ ಏರಿಸಿದ್ದೂ ಅಲ್ಲದೆ, ಯಾವ ಧರ್ಮವನ್ನು ಬೇಕಾದರೂ ಅದೇ ಮಟ್ಟಕ್ಕೆ ಏರಿಸಬಹುದೆಂಬ ತಮ್ಮ ನಂಬಿಕೆಯನ್ನೂ ವ್ಯಕ್ತಪಡಿಸಿದರು. ಸ್ವಾಮೀಜಿಯವರ ಈ ಕಲ್ಪನೆಯೇ ಅವರನ್ನು ಇತರರಿಗಿಂತ ವಿಶಿಷ್ಟರನ್ನಾಗಿಸಿದುದಲ್ಲದೆ, ಅವರ ಮಾತುಗಳಿಗೆ ಶಕ್ತಿಯನ್ನು ತುಂಬಿ ಪ್ರಭಾವಶಾಲಿಯಾಗುವಂತೆ ಮಾಡಿತ್ತು. ತಮ್ಮ ಒಂದು ಭಾಷಣದಲ್ಲಿ, 'ಬೌದ್ಧಧರ್ಮವು ಹಿಂದೂಧರ್ಮದ ಸಫಲತೆ. ಹಿಂದೂಧರ್ಮವು ಬೌದ್ಧಧರ್ಮವಿಲ್ಲದೆ ಬದುಕುವಂತಿಲ್ಲ; ಬೌದ್ಧಧರ್ಮವು ಹಿಂದೂಧರ್ಮವಿಲ್ಲದೆ ಬದುಕುವಂತಿಲ್ಲ' ಎಂದರು. ವೈಜ್ಞಾನಿಕ ಮನೋಧರ್ಮ ಹೊಂದಿದ ಆಧುನಿಕ ಕಾಲದ ವಿಶ್ವಸಮಾಜದ ಚೈತನ್ಯವಾಗಲಿರುವ ವಿಶ್ವಧರ್ಮದ ಆದರ್ಶವನ್ನು ಮಂಡಿಸಲೆಂದೇ ಧರ್ಮಸಮ್ಮೇಳನ ಆಯೋಜಿತವಾಗಿತ್ತೇನೋ ಎನಿಸುವಂತೆ ಅವರು ಮಾತನಾಡಿದರು. ಸ್ವಾಮೀಜಿ ವೇದಾಂತವನ್ನೇ ವಿಶ್ವಧರ್ಮವೆಂದು ಕರೆಯುವ ಮೂಲಕ ಎಲ್ಲರೂ ಅದನ್ನು ಒಪ್ಪಿಕೊಳ್ಳಬೇಕೆಂದು ಒತ್ತಾಯಿಸುತ್ತಿರುವವರೇನೋ, ಎಲ್ಲ ಧರ್ಮಗಳ ಪ್ರಾಮುಖ್ಯತೆಯನ್ನು ತಗ್ಗಿಸಿ ಹೊಸ ಧರ್ಮವನ್ನು ಸ್ಥಾಪಿಸಲು ಹೊರಟಿರುವವರೇನೋ ಎಂದು ತಪ್ಪು ತಿಳಿಯುವ ಅಪಾಯ ಇದ್ದಿತು. ಆದ್ದರಿಂದ ಅವರು ಅನಂತರದ ದಿನಗಳಲ್ಲಿ ಈ ಬಗ್ಗೆ ಮಾತನಾಡಿ, ''ವಿಭಿನ್ನ ಧರ್ಮಗಳೆಲ್ಲ ಭಗವಂತನ ಶಕ್ತಿ; ಅವು ಮಾನವ ಕಲ್ಯಾಣಕ್ಕಾಗಿ ಕೆಲಸ ಮಾಡುತ್ತಿವೆ ಎಂದು ನನ್ನ ಭಾವನೆ. ಇದರಲ್ಲಿ ಯಾವುದೊಂದೂ ನಾಶವಾಗಲಾರದು, ನಾಶಮಾಡಲಾರವು'' ಎಂದು ಸ್ಪಷ್ಟಗೊಳಿಸಿದರು.

### ವಿಶ್ವಧರ್ಮ ಸಮ್ಮೇಳನದ ಸಂದೇಶ

ಎಲ್ಲ ಧರ್ಮಗಳವರಿಗೂ ತಮ್ಮ ತಮ್ಮ ಧರ್ಮಗಳ ಬಗ್ಗೆ ಮಾತನಾಡಲು ಅವಕಾಶ ನೀಡಿ, ಕೊನೆಗೆ ಕ್ರೈಸ್ತ ಧರ್ಮದ ಪಾರಮ್ಯವನ್ನು ಸ್ಥಾಪಿಸುವ ಇರಾದೆಯಿಂದ ಆಯೋಜಿತವಾಗಿದ್ದ ಈ ಮಹಾ ಸಮ್ಮೇಳನ ಪುರಾತನ ಧರ್ಮಗಳು ಹಾಗೂ ಸಂಸ್ಕೃತಿಗಳ ಬಗ್ಗೆ ಜಗತ್ತು ಯೋಚಿಸುವಂತೆ ಮಾಡಿತು. ಸ್ವಾಮಿ ವಿವೇಕಾನಂದರಂತಹ ಸಿಡಿಲ ಸಂನ್ಯಾಸಿಯನ್ನು ಸೃಷ್ಟಿಸಬಲ್ಲ ಧರ್ಮ ಇರುವ ದೇಶಕ್ಕೆ ತಾವು ಮತಪ್ರಚಾರಕರನ್ನು ಕಳುಹಿಸುವುದು ಎಷ್ಟು ಸರಿ ಎಂದು ಮುಖ್ಯ ಪತ್ರಿಕೆಗಳು ಬರೆದುವು. ತಮ್ಮ ಕೆಲವೇ ನಿಮಿಷಗಳ ಭಾಷಣದಿಂದ ಸ್ವಾಮೀಜಿ ವಿಶ್ವವಿಜೇತರಾದರು, ಎಲ್ಲ ಚಿಂತಕರ ಗಮನ ಸೆಳೆದರು. ಅವರು ಧರ್ಮ ಸಾಮರಸ್ಯದ ಆದರ್ಶ, ಅಗತ್ಯಗಳನ್ನು ಮನದಟ್ಟು ಮಾಡಿಸಿದುದಷ್ಟೇ ಅಲ್ಲ, ಈ ಧ್ಯೇಯವನ್ನು ಸಹಸ್ರಾರು ವರ್ಷಗಳಿಂದ ಉಸಿರಾಗಿಟ್ಟುಕೊಂಡು, ಇತರ ಧರ್ಮಗಳ ಮೇಲೆ ಆಕ್ರಮಣವಾಗಿ, ತನ್ನಲ್ಲಿಗೆ ಬಂದ ಧಾರ್ಮಿಕ ನಿರಾಶ್ರಿತರಿಗೆ ತಮ್ಮ ತಮ್ಮ ಧರ್ಮಗಳನ್ನು ಪಾಲಿಸಿಕೊಳ್ಳಲು ಅವಕಾಶ, ಆಶ್ರಯವಿತ್ತ ಭಾರತವನ್ನು ಎಲ್ಲರೂ ಗೌರವದಿಂದ ಕಾಣುವಂತೆ ಮಾಡಿದರು.

ಮತಾಂಧತೆಯ ಹಿಂಸೆ ಮತ್ತು ರಕ್ತಪಾತಗಳು ಜಗತ್ತನ್ನು ತುಂಬಿ, ನಾಗರಿಕತೆಯನ್ನು ನಾಶಗೊಳಿಸಿ, ರಾಷ್ಟ್ರಗಳನ್ನೇ ನಿರಾಶೆಯ ಕೂಪಕ್ಕೆ ತಳ್ಳಿರುವ ವಾಸ್ತವವನ್ನು ಸ್ವಾಮೀಜಿ ಎಲ್ಲರಿಗೂ ಮನಗಾಣಿಸಿದರು. ''ಧರ್ಮ ಸಮ್ಮೇಳನದ ಆರಂಭದಲ್ಲಿ ಮೊಳಗಿದ ಘಂಟಾನಾದವು ಎಲ್ಲ ಬಗೆಯ ಮತಾಂಧತೆಯ ಹಿಂಸೆಯ ಮತ್ತು ಮನಸ್ತಾಪಗಳ ಅಂತ್ಯಕ್ರಿಯೆಯನ್ನು ಸೂಚಿಸುವ ಘಂಟಾನಾದವೂ ಆಗಲಿ'' ಎಂಬ ಸ್ವಾಮಿ ವಿವೇಕಾನಂದರ ನುಡಿ ಇನ್ನೂ ಜಗತ್ತಿನ ಚಿಂತಕರ ಮನಸ್ಸಿನಲ್ಲಿ ಅನುರಣನಗೊಳ್ಳುತ್ತಿದೆ. ಈ ಭಾಷಣಗಳು ಬೀರಿದ ಪ್ರಭಾವದಿಂದ ಕಾಡುಮನುಷ್ಯರ ನಾಡನ್ನು ಉದ್ಧರಿಸಲೆಂದು ಮತಪ್ರಚಾರಕರನ್ನು ಕಳುಹಿಸುತ್ತಿದ್ದ ವಿದೇಶಗಳಿಗೆ ನಮ್ಮ ಸಂನ್ಯಾಸಿಗಳೂ ದಾರ್ಶನಿಕರೂ ಹೋಗಿ, ನಮ್ಮ ವೇದಾಂತದ, ಸಂಸ್ಕೃತಿಯ ದೀಪವನ್ನು ಬೆಳಗುವಂತಾಗಿದೆ. ಯೋಗ ವಿಶ್ವಮಾನ್ಯವಾಗಿದೆ. ಮನಸ್ಸನ್ನು ಶಾಂತಗೊಳಿಸಬಲ್ಲ ಧ್ಯಾನ ವಿಧಾನಗಳು ಅಲ್ಲಿ ಜನಪ್ರಿಯಗೊಂಡಿವೆ.

# ಆರ್ಕಿಡ್ ಟ್ರಾವೆಲ್ & ಟೂರ್ಸ್

Orchid Travel & Tours

**www.orchidtours.net**

## ಹೊಸ ವರ್ಷದ ಶುಭಾಶಯಗಳು – 2019



### 8 ದಿನಗಳ ಶ್ರೀ ಮುಕ್ತಿನಾಥ ಯಾತ್ರೆ (ಸಾಲಿಗ್ರಾಮಂ) ಬೆಂಗಳೂರಿನಿಂದ ವಿಮಾನದಲ್ಲಿ

ಪ್ರವಾಸ ಸ್ಥಳಗಳು : ಶ್ರೀ ಮುಕ್ತಿನಾಥ ದೇವಸ್ಥಾನ, ಪಶುಪತಿನಾಥ ದೇವಸ್ಥಾನ, ಜಲನಾರಾಯಣ ದೇವಸ್ಥಾನ, ಶ್ರೀ ಕೃಷ್ಣ ದೇವಸ್ಥಾನ, ಕಠ್ಮಂಡು ಸಿಟಿ ಟೂರ್, ಪೋಕ್ರಾ–ಬಿಂದಾಬಾಸಿನಿ ದೇವಸ್ಥಾನ, ತಾಲಭೈರವಿ ದೇವಸ್ಥಾನ, ದೋಣಿಯಲ್ಲಿ ಪೋಕ್ರಾ ಲೇಕ್ ಒಂದು ವಿಹಾರ, ಮನೋಕಾಮನ ದೇವಸ್ಥಾನ (ಕೇಬಲ್ ಕಾರ್‌ನಲ್ಲಿ)



### 11 ದಿನಗಳ ಸಿಂಗಾಪುರ–ಮಲೇಶಿಯ–ಥೈಲ್ಯಾಂಡ್ ಪ್ರವಾಸ

**ಸಿಂಗಾಪುರ** : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್ ಜೊತೆಗೆ ಸಿ ಅಕ್ವೇರಿಯಂ, ವಿಂಗ್ಸ್ ಆಫ್ ಟೈಮ್, ಜುರೋಂಗ್ ಬರ್ಡ್‌ಪಾರ್ಕ್, ಯುನಿವರ್ಸಲ್ ಸ್ಟುಡಿಯೋ,

**ಮಲೇಶಿಯ** : ಕೌಲಾಲಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಕೆ.ಎಲ್. ಟವರ್

**ಥೈಲ್ಯಾಂಡ್** : ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ಮರೀನಾ ಪಾರ್ಕ್, ವಾಕರ್ ಸ್ಟ್ರೀಟ್



### 18 ಮತ್ತು 12 ದಿನಗಳ ಅಮೇರಿಕಾ ಪ್ರವಾಸ

ಪ್ರವಾಸ ಸ್ಥಳ : ನ್ಯೂಯಾರ್ಕ್, ವಾಷಿಂಗ್ಟನ್, ನಯಾಗರ ಫಾಲ್ಸ್, ಲಾಸ್‌ವೆಗಾಸ್, ಲಾಸ್ ಎಂಜಲೀಸ್, ಸ್ಯಾನ್‌ಫ್ರಾನ್ಸಿಸ್‌ಕೋ



### 15 ಮತ್ತು 18 ದಿನಗಳ ಗ್ರ್ಯಾಂಡ್ ಯು.ಕೆ.–ಯುರೋಪ್ ಪ್ರವಾಸ

**ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ, ವ್ಯಾಟಿಕನ್**



### 6 ದಿನಗಳ ಶ್ರೀಲಂಕಾ ಪ್ರವಾಸ ರಾಮಾಯಣ ಕಾಲದ ಸ್ಥಳ ವೀಕ್ಷಣೆ

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು



### 7 ದಿನಗಳ ಜಪಾನ್ ಪ್ರವಾಸ

ಹೈ ಸ್ಪೀಡ್ ಬುಲೆಟ್ ರೈಲಿನಲ್ಲಿ ಪ್ರಯಾಣದ ಅನುಭವ ಹಾಗೂ ಜಪಾನ್ ರಾಜಧಾನಿ ಟೋಕಿಯೋ ಪ್ರವಾಸ ಸ್ಥಳ : ಒಸಾಕಾ, ಹಿರೋಷಿಮಾ, ಕ್ಯೋಟೋ, ಮೌಂಟ್‌ಫುಜಿ ನಾರ ನಗರ ವೀಕ್ಷಣೆ ಹಾಗೂ ಇತರೆ

***For more details please Contact :***

Orchid Travel & Tours
BASAVANAGUDI
#98, 1st Floor, DVG Road
Office 080-26621983, 26617178
**Mobile +91 9900080793 / 9880079588**

Orchid Travel & Tours
MALLESHWARAM
# 198, 1st Floor, 11th Cross
Office 080 - 23445598, 23445559
**Mobile +91 9900080791 / 9880079644**

# Socio Spiritual Educational Films

Amruta Nilaya, # 216/1, 1st Floor, 5th Cross, 5th Main, Chamarajpet,
Bengaluru - 560018. Phone: 080-26670147, Cell: 09341219116

SSEF - Bengaluru

Socio Spiritual Educational Films

## ವಿಶ್ವಧರ್ಮ

ಸ್ವಾಮಿ ವಿವೇಕಾನಂದರ ವಿಚಾರಧಾರೆ

ಸಾಕ್ಷ್ಯಚಿತ್ರ

ಭಾಗ - 1
ಸಾಕ್ಷಾತ್ಕಾರ

ಭಾಗ - 2
ಸಂಪ್ರದಾಯ

DVD

ನಾವು ಸಕಲ ವಿಚಾರಗಳಲ್ಲಿಯೂ ಜೀವನ ಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು. ವೇದ ವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.

ಸ್ವಾಮಿ ವಿವೇಕಾನಂದ

Socio Spiritual Educational Films

## ವಿಶ್ವಧರ್ಮ

ಸ್ವಾಮಿ ವಿವೇಕಾನಂದರ ವಿಚಾರಧಾರೆ.

ಓಂ

### ಧರ್ಮದ ಆವಶ್ಯಕತೆ

ಪ್ರಯೋಜನ ದೃಷ್ಟಿಯಿಂದ ಸುಖವನ್ನು ಅರಸುವವನು ಕೂಡಾ ಧಾರ್ಮಿಕ ಭಾವನೆಯನ್ನು ರೂಢಿಸಿಕೊಳ್ಳಬೇಕು. ಏಕೆಂದರೆ ಅದೇ ಅತಿ ಶ್ರೇಷ್ಠವಾದ ಆನಂದ. ಹೀಗೆ ಧರ್ಮವು ಅಧ್ಯಯನ ದೃಷ್ಟಿಯಿಂದಲಾದರೂ ಅತ್ಯವಶ್ಯಕವೆಂದು ನನಗೆ ತೋರುವುದು.

### ಧರ್ಮ ಎಂದರೇನು?

ನಾವು ಎಂದಾದರೂ ಮುಕ್ತಿಯನ್ನು ಪಡೆಯಬೇಕಾದರೆ ಅದು ಪ್ರಕೃತಿಯನ್ನು ಗೆಲ್ಲುವುದರಿಂದ. ಅದರಿಂದ ಪಲಾಯನ ಮಾಡುವುದರಿಂದ ಅಲ್ಲ. ಹೇಡಿಗಳು ಎಂದಿಗೂ ಜಯವನ್ನು ಗಳಿಸಲಾರರು. ಅಂಜಿಕೆ, ಕಷ್ಟ, ಅಜ್ಞಾನ ಇವು ನಮ್ಮ ಮುಂದೆ ಪಲಾಯನವಾಗಬೇಕಾದರೆ ಅವುಗಳೊಂದಿಗೆ ಹೋರಾಡಬೇಕು. ಇದನ್ನು ಅರಿಯುವುದೇ ಧರ್ಮ.

### ಯುಕ್ತಿ ಮತ್ತು ಧರ್ಮ

ವಿಜ್ಞಾನ ಶಾಸ್ತ್ರಗಳು ಯುಕ್ತಿಯ ಸಂಶೋಧನೆಯ ಮೂಲಕ ಸಮರ್ಥಿಸಲ್ಪಡುವಂತೆ, ಧರ್ಮವೂ ಅದರ ಮೂಲಕ ಸಮರ್ಥಿಸಲ್ಪಡಬೇಕೆ? ವಿಜ್ಞಾನದಲ್ಲಿ ಉಪಯೋಗಿಸುವ ಸಂಶೋಧನಾ ಮಾರ್ಗವನ್ನೇ ಧರ್ಮದಲ್ಲಿಯೂ ಉಪಯೋಗಿಸಬೇಕೆ? ನನ್ನ ದೃಷ್ಟಿಯಲ್ಲಿ ಇದು ಅಗತ್ಯ ಎನ್ನುತ್ತೇನೆ. ಇಂತಹ ಶೋಧನೆಯಿಂದ ಅಯೋಗ್ಯವಾದುದೆಲ್ಲ ನಿಸ್ಸಂದೇಹವಾಗಿ ನಾಶವಾಗುವುದು ನಿಜ.

### ಧರ್ಮದ ಅನುಷ್ಠಾನ

ನೀವೂ ಯಾವಾಗಲೂ ಪ್ರಾರ್ಥನೆ ಮಾಡುತ್ತಿರಬಹುದು. ಪ್ರಪಂಚದಲ್ಲಿರುವ ಶಾಸ್ತ್ರಗಳನ್ನೆಲ್ಲ ಓದಬಹುದು. ಇರುವ ದೇವರುಗಳನ್ನೆಲ್ಲಾ ಪೂಜಿಸಬಹುದು. ಆದರೆ ಆತ್ಮವನ್ನೇ ಅರಿಯುವ ತನಕ ಮುಕ್ತಿ ಎಂಬುದಿಲ್ಲ. ಮಾತಲ್ಲ, ಸಿದ್ಧಾಂತವಲ್ಲ, ವಿವಾದವಲ್ಲ, ಬೇಕಾಗಿರುವುದು ಸಾಕ್ಷಾತ್ಕಾರ. ನಾನು ಅದನ್ನೇ ಅನುಷ್ಠಾನ ಧರ್ಮ ಎನ್ನುವುದು. ಇದೇ ಏಕಮಾತ್ರ ವಿಶ್ವಧರ್ಮ.

H.T.Nagendra,
Mob : 9341219116, 9535383588, E-mail : nagendra.ht@gmail.com

2 DVDs

SSEF - Bengaluru

Socio Spiritual Educational Films

## ವಿಶ್ವಧರ್ಮ

ಸ್ವಾಮಿ ವಿವೇಕಾನಂದರ ವಿಚಾರಧಾರೆ

ಸಾಕ್ಷ್ಯಚಿತ್ರ

DVD

ಭಾಗ -3
ಕರ್ಮಯೋಗ

NOT FOR SALE
KNOWLEDGE TO SPREAD

ಕರ್ಮ ರಹಸ್ಯ ....

ಎಡೆಬಿಡದೆ ಕರ್ಮ ಮಾಡಿ. ಆದರೆ ಆಸಕ್ತರಾಗಿ ಅದರ ಬಲೆಗೆ ಬೀಳಬೇಡಿ. ನಮ್ಮ ಬಂಧನಗಳಿಗೆಲ್ಲ ಆಸಕ್ತಿಯೇ ಕಾರಣ. ಆದುದರಿಂದ ಅನಾಸಕ್ತರಾಗಿ. ಕರ್ಮದಲ್ಲಿ ಪ್ರೀತಿ ಇರಲಿ. ನಿಷ್ಠೆ ಇರಲಿ, ಆದರೆ ಕರ್ಮ - ಕರ್ಮಫಲಕ್ಕೆ ಅಂಟಿಕೊಳ್ಳಬೇಡಿ. ಅಂಟಿಲ್ಲದ ನಂಟು ನಿಮ್ಮದಾಗಿರಲಿ.

## ವಿಶ್ವಧರ್ಮ

ಓಂ

ಸ್ವಾಮಿ ವಿವೇಕಾನಂದರ ವಿಚಾರಧಾರೆ.

ಭಾಗ -3- ಕರ್ಮಯೋಗ

ಪರಿಕಲ್ಪನೆ । ನಿರ್ಮಾಣ । ನಿರ್ದೇಶನ
ಹೆಚ್.ಟಿ.ನಾಗೇಂದ್ರ

ಸಂಗೀತ
ಮನೋರಂಜನ್ ಪ್ರಭಾಕರ್

ಗಾಯನ
ಡಾ. ಎಸ್.ಪಿ.ಬಾಲಸುಬ್ರಹ್ಮಣ್ಯಂ

ಗಾಯನ
ಅಜಯ್ ವಾರಿಯರ್

ನಿರೂಪಣಾ ಸಾಹಿತ್ಯ
ಶಂಕರ್ ತೋಂಟದಾರ್ಯ

ಛಾಯಾಗ್ರಹಣ
ಬಿ.ಆರ್. ವಿಶ್ವನಾಥ್

ಸಂಕಲನ
ಎಂ.ಎನ್. ಸ್ವಾಮಿ

ಗ್ರಾಫಿಕ್ಸ್
ಶ್ರೀಧರ್ ಹೆಗಡೆ

Contact for DVDs: H. T. Nagendra, Mob: 9535383588, WhatsApp: 9341219116
Email: nagendra.ht@gmail.com, ssefbng@gmail.com, website: www.ssefbengaluru.com






# ತೆಂಕಲಮೋಳೆ ಶ್ರೀರಾಮಕೃಷ್ಣ ಸೇವಾಮಂದಿರದ ವಾರ್ಷಿಕೋತ್ಸವ

ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಉಪಶಾಖೆಯಾದ ಚಾಮರಾಜನಗರ ಜಿಲ್ಲೆಯ ತೆಂಕಲಮೋಳೆ ಗ್ರಾಮದಲ್ಲಿ ನಿರ್ಮಿಸಿರುವ '**ಶ್ರೀರಾಮಕೃಷ್ಣ ಸೇವಾಮಂದಿರ**'ದ ಎರಡನೇ ವರ್ಷದ ವಾರ್ಷಿಕೋತ್ಸವವು 2018ರ ನವಂಬರ್ 26ರಂದು ತೆಂಕಲಮೋಳೆ ಗ್ರಾಮದಲ್ಲಿ ಜರುಗಿತು. ಶ್ರೀರಾಮಕೃಷ್ಣ ಆಶ್ರಮದ ಸಹಯೋಗದೊಂದಿಗೆ ತೆಂಕಲಮೋಳೆ ಗ್ರಾಮಸ್ಥರು ಹಮ್ಮಿಕೊಂಡಿದ್ದ ಈ ಸಮಾರಂಭದಲ್ಲಿ ಆಶ್ರಮದ ಅಧ್ಯಕ್ಷರಾದ ಸ್ವಾಮಿ ಆತ್ಮಜ್ಞಾನಂದಜಿ ಮಹಾರಾಜ್‌ರವರು ಆಶೀರ್ವಚನ ನೀಡಿದರು. ಮುಖ್ಯ ಅತಿಥಿಗಳಾಗಿ ಚಾಮರಾಜನಗರದ ದೀನಬಂಧು ಟ್ರಸ್ಟ್‌ನ ಕಾರ್ಯದರ್ಶಿ ಪ್ರೊ.ಜಿ.ಎಸ್.ಜಯದೇವ ಅವರು ಭಾಗವಹಿಸಿದ್ದರು. ವಿಶೇಷ ಆಹ್ವಾನಿತರಾಗಿ ತಮಿಳುನಾಡಿನ ಏಳಗಿರಿಯ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಭಾವರೂಪನಂದಜಿ ಭಾಗವಹಿಸಿದ್ದರು. '**ಗದಾಧರ ಅಭ್ಯುದಯ ಪ್ರಕಲ್ಪ**'ದ ವಿದ್ಯಾರ್ಥಿಗಳು ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ತರಗತಿಯಲ್ಲಿ ಅತಿಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳಿಗೆ ಬಹುಮಾನ ವಿತರಣೆ ಮಾಡಲಾಯಿತು. 'ಗದಾಧರ ಅಭ್ಯುದಯ ಪ್ರಕಲ್ಪ'ದ ವಿದ್ಯಾರ್ಥಿಗಳು ಮತ್ತು ತೆಂಕಲಮೋಳೆ ಗ್ರಾಮಸ್ಥರನ್ನೊಳಗೊಂಡಂತೆ ಒಟ್ಟು 500 ಜನ ಸಮಾರಂಭದಲ್ಲಿ ಭಾಗವಹಿಸಿದರು.








# 'ವಿಶ್ವವೇದಿಕೆ ವಿಜಯಪತಾಕೆ' ಮೌಲ್ಯಶಿಕ್ಷಣ ಕಾರ್ಯಕ್ರಮ

ಸ್ವಾಮಿ ವಿವೇಕಾನಂದರ ಚಿಕಾಗೋ ಭಾಷಣದ 125ನೇ ವಾರ್ಷಿಕೋತ್ಸವದ ಅಂಗವಾಗಿ ಮೈಸೂರು ಶ್ರೀರಾಮಕೃಷ್ಣ ಆಶ್ರಮವು ಕಾಲೇಜು ವಿದ್ಯಾರ್ಥಿಗಳಿಗಾಗಿ '**ವಿಶ್ವವೇದಿಕೆ ವಿಜಯಪತಾಕೆ**' ಎಂಬ ಮೌಲ್ಯಶಿಕ್ಷಣ ಕಾರ್ಯಕ್ರಮ ಸರಣಿಯನ್ನು ಏರ್ಪಡಿಸಿತ್ತು . ನವೆಂಬರ್ 2018ರ ವರೆಗೆ ನಡೆದ 6 ಕಾರ್ಯಕ್ರಮಗಳಲ್ಲಿ ಒಟ್ಟು 1689 ವಿದ್ಯಾರ್ಥಿಗಳು ಭಾಗವಹಿಸಿದ್ದರು. ಅಕ್ಟೋಬರ್ 3 ರಂದು ನಡೆದ ಕಾರ್ಯಕ್ರಮದಲ್ಲಿ ನಗರದ ಮಹಾರಾಣಿ ಕಾಲೇಜಿನ 222 ಮಂದಿ ಸ್ನಾತಕೋತ್ತರ ವಿದ್ಯಾರ್ಥಿನಿಯರು ಭಾಗವಹಿಸಿದ್ದರು. ಅಕ್ಟೋಬರ್ 4 ರಂದು ನಡೆದ ಕಾರ್ಯಕ್ರಮದಲ್ಲಿ ಮೈಸೂರಿನ ವಿವಿಧ ಬಿ.ಎಡ್. ಕಾಲೇಜುಗಳಿಂದ ಬಂದ 249 ವಿದ್ಯಾರ್ಥಿಗಳಿಗಳು ಭಾಗವಹಿಸಿದ್ದರು. ನವಂಬರ್ 6 ರಂದು ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ ನಡೆದ ಕಾರ್ಯಕ್ರಮದಲ್ಲಿ ನಗರದ ವಿದ್ಯಾವರ್ಧಕ ಕಾಲೇಜು, ವಿದ್ಯಾವಿಕಾಸ ಕಾಲೇಜು, ತೆರೆಸಿಯನ್ ಕಾಲೇಜು, ಯುವರಾಜ ಕಾಲೇಜು ಹಾಗೂ ಮಹಾರಾಣಿ ಕಾಲೇಜಿನ ಒಟ್ಟು 425 ವಿದ್ಯಾರ್ಥಿಗಳು ಭಾಗವಹಿಸಿದ್ದರು. ನವಂಬರ್ 24 ರಂದು ಪಿ.ಯು. ವಿದ್ಯಾರ್ಥಿಗಳಿಗಾಗಿ ನಡೆದ ಕಾರ್ಯಕ್ರಮದಲ್ಲಿ ವಿವೇಕ ವಿದ್ಯಾಲಯ, ಕಲಾಭಾರತಿ ಕಾಲೇಜು, ಸಪ್ತಗಿರಿ ಕಾಲೇಜು, ಆರ್ಕಿಡ್ ಇಂಟರ್‌ನ್ಯಾಶನಲ್ ಕಾಲೇಜು ಹಾಗೂ ವಿದ್ಯಾವರ್ಧಕ ಕಾಲೇಜಿನ 289 ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು. ನವಂಬರ್ 29 ರಂದು ನಡೆದ ಕಾರ್ಯಕ್ರಮದಲ್ಲಿ ಮಹಾರಾಣಿ ಪಿ.ಯು. ಕಾಲೇಜಿನ 267 ಮಂದಿ ವಿದ್ಯಾರ್ಥಿನಿಯರು ಭಾಗವಹಿಸಿದ್ದರು.

Managing Editor : Swami Atmajnanananda
Editor : Swami Jnanayogananda
Printed and Published by Swami Atmajnanananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

VIVEKA PRABHA (KANNADA MONTHLY)
January 2019, Vol.20, No.01, No.of pages : 128

Registered With Registrar of News Papers Of India under 72356/2000.postal Regn.No.KA/SK/MYS/480/ 2018-20. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2018-20



Printed at mayur graphics,Bangalore